# ಕೊಪ್ಪಳ - ಹಂಪಿ ಪ್ರದೇಶದ ಪ್ರಾಗಿತಿಹಾಸಕಾಲದ ಕಲೆ

(ವಿಶೇಷವಾಗಿ ಗವಿವರ್ಣ ಹಾಗೂ ಬಯಲುಬಂಡೆ ಚಿತ್ರಗಳ ಅಧ್ಯಯನ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ಶರಣಬಸಪ್ಪ ಬಿ.

ಮಾರ್ಗದರ್ಶಕರು

ಡಾ. ಸಿ. ಮಹದೇವ

ಪ್ರವಾಚಕರು, ಪುರಾತತ್ವ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಪುರಾತತ್ವ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



ಮೇ ೨೦೦೩

59

# ಕೊಪ್ಪಳ - ಹಂಪಿ ಪ್ರದೇಶದ ಪ್ರಾಗಿತಿಹಾಸಕಾಲದ ಕಲೆ

(ವಿಶೇಷವಾಗಿ ಗವಿವರ್ಣ ಹಾಗೂ ಬಯಲುಬಂಡೆ ಚಿತ್ರಗಳನ್ನು ಅನುಲಕ್ಷಿಸಿ)

ಪಿಎಚ್. ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

**ಶರಣಬಸಪ್ಪ ಪಿ.**

ಮಾರ್ಗದರ್ಶಕರು

**ಡಾ. ಸಿ. ಮಹದೇವ**

ಪ್ರವಾಚಕರು, ಪುರಾತತ್ವ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ






ಪುರಾತತ್ವ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಮೇ ೨೦೦೨

59

## <u>ಸಂಶೋಧಕನ ಪ್ರಮಾಣ ಪತ್ರ</u>

**ಕೊಪ್ಪಳ : ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ** ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು ಡಾ. ಸಿ. ಮಹದೇವ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಸಮಾಜವಿಜ್ಞಾನ ನಿಕಾಯದ ಪುರಾತತ್ವ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ವೆಂದು ಪ್ರಮಾಣೀಕರಿಸುತ್ತೇನೆ.

ಶರಣಬಸಪ್ಪ ಪಿ.
ಸಂಶೋಧಕ
ಪುರಾತತ್ವ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೦. ೩. ೨೦೦೨
ಸ್ಥಳ : ವಿದ್ಯಾರಣ್ಯ

## ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀ ಶರಣಬಸ್ಸ ಪಿ. ಇವರು **ಕೊಪ್ಪಳ : ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ** ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನ ನಿಕಾಯದ ಪುರಾತತ್ವ ವಿಭಾಗಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

C. Mahadeva

**ಡಾ. ಸಿ. ಮಹದೇವ**
ಮಾರ್ಗದರ್ಶಕರು ಮತ್ತು ಪ್ರವಾಚಕರು
**ಪುರಾತತ್ವ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 20-5-2002
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕೊಪ್ಪಳ : ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ ಎಂಬ ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಒಪ್ಪಿಸಲು ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಅವಕಾಶಕಲ್ಪಿಸಿಕೊಟ್ಟ ಅಂದಿನ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ, ಡಾ. ಎಂ.ಎಂ. ಕಲಬುರ್ಗಿ ಹಾಗೂ ಇಂದಿನ ಕುಲಪತಿಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡ ಇವರುಗಳಿಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುವೆ.

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತ ಸಲಹೆ, ಸಹಕಾರ ನೀಡಿದ ಹಿಂದಿನ ಕುಲಚಿವರಾಗಿದ್ದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ, ಇಂದಿನ ಕುಲಸಚಿವರಾದ ಡಾ.ಕೆ.ವಿ.ನಾರಾಯಣ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಹಿ.ಚಿ. ಬೋರಲಿಂಗಯ್ಯ ಹಾಗೂ ಪುರಾತತ್ವ ವಿಭಾಗದ ಮುಖ್ಯಸ್ಥರಾದ ಶ್ರೀ ಬಾಲಸುಬ್ರಹ್ಮಣ್ಯ ಇವರುಗಳಿಗೂ ಅನಂತ ಧನ್ಯವಾದಗಳನ್ನು ಸಲ್ಲಿಸುವುದು ನನ್ನ ಆದ್ಯ ಕರ್ತವ್ಯವೆಂದೇ ಭಾವಿಸುತ್ತೇನೆ.

ಪ್ರೀತಿ, ವಿಶ್ವಾಸ ತೋರಿ ಅಧ್ಯಯನದುದ್ದಕ್ಕೂ ಸ್ಫೂರ್ತಿ, ಚೇತನ, ಉತ್ತೇಜನ ನೀಡಿ ಮಾರ್ಗದರ್ಶನಗೈದ ಗುರುಗಳಾದ ಡಾ. ಸಿ. ಮಹದೇವರವರಿಗೆ ಹಾಗೂ ಪ್ರಬಂಧ ರಚನೆಯಲ್ಲಿ ಸಲಹೆ, ಸೂಚನೆಗಳನ್ನು ನೀಡಿದ ವಿದ್ಯಾಗುರುಗಳಾದ ಡಾ. ಅ. ಸುಂದರರವರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನ ಸಂದರ್ಭದಲ್ಲಿ ಅಗತ್ಯ ಮಾಹಿತಿ ನೀಡಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಪ್ರೊ. ಲಕ್ಷ್ಮಣ್ ತೆಲಗಾವಿಯವರಿಗೆ, ವಸ್ತುಸಂಗ್ರಹಾಲಯ ವಿಭಾಗದ ಮುಖ್ಯಸ್ಥರಾದ ಡಾ. ಕೆ. ಎಂ. ಸುರೇಶ್ ಅವರಿಗೆ, ಶಾಸನಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ದೇವರಕೊಂಡಾರಡ್ಡಿ ಅವರಿಗೆ ಹಾಗೂ ಪುರಾತತ್ವ ವಿಭಾಗದ ಅಧ್ಯಾಪಕರುಗಳಾದ ಡಾ. ಸಿ. ವಾಸುದೇವನ್, ಶ್ರೀ ವಾಸುದೇವ ಬಡಿಗೇರ, ಶ್ರೀ ರಮೇಶ ನಾಯಕ್, ಶಾಸನಶಾಸ್ತ್ರ ವಿಭಾಗದ ಅಧ್ಯಾಪಕರಾದ ಡಾ. ಕೆ.ಜಿ. ಭಟ್‌ಸೂರಿ ಹಾಗೂ ನಾಲ್ಕು ವಿಭಾಗಗಳ ಎಲ್ಲ ಅಧ್ಯಾಪಕ ಮತ್ತು ಕಾರ್ಯಾಲಯ ಸಿಬ್ಬಂದಿಯವರಿಗೆ, ಗ್ರಂಥಾಲಯದ ಎಲ್ಲಾ ಸಿಬ್ಬಂದಿ ವರ್ಗದವರಿಗೆ,

ಅಧ್ಯಯನಕ್ಕಾಗಿ ಸಹಕಾರ ನೀಡಿದ ಗಂಗಾವತಿಯ ಶ್ರೀ ಕೊಟ್ಟೂರೇಶ್ವರ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾದ ಕಲ್ಮಠದ ಮ.ನಿ.ಪ್ರ. ಶ್ರೀ ಕೊಟ್ಟೂರು ಮಹಾಸ್ವಾಮಿಗಳು, ಕಾರ್ಯದರ್ಶಿಗಳಾದ ಮಾನ್ಯ ಶ್ರೀ ಹೆಚ್. ಪ್ರಭಾಕರ್, ವಕೀಲರು ಹಾಗೂ ಸಂಸ್ಥೆಯ ಎಲ್ಲಾ ಸದಸ್ಯರಿಗೆ, ನಮ್ಮ ಕಾಲೇಜಿನ ಆಡಳಿತ ಮಡಳಿಯವರಿಗೆ,

ವಿಶೇಷ ಪ್ರೋತ್ಸಾಹದ ಮೂಲಕ ಅಧ್ಯಯನಕ್ಕೆ ನೆರವಾದ, ಬಂಧುಗಳಾದ ಶ್ರೀ ಮರೇಗೌಡ ಮಾಲಿಪಾಟೀಲ, ಶ್ರೀ ಗುರುಪಾದಗೌಡ ಮಾಲಿಪಾಟೀಲ, ಶ್ರೀ ವಿರುಪಾಕ್ಷಗೌಡ ಮಾಲಿಪಾಟೀಲ ಹಾಗೂ ಶ್ರೀ ಕೆ. ಚನ್ನಬಸಯ್ಯಸ್ವಾಮಿ, ಶ್ರೀ ಮಂಜುನಾಥ ಸಿದ್ದಾಪುರ, ಶ್ರೀ ನಿಜಲಿಂಗಪ್ಪ ಮೇಣಸಗಿ, ಶ್ರೀ ಚಂದ್ರಶೇಖರ ನೂಲ್ವಿ, ಶ್ರೀ ಓ.ಎಂ.ಬಳ್ಳೊಳ್ಳಿ, ಶ್ರೀ ಸಿ.ಜಿ. ಜವಳಿ, ಶ್ರೀ ಕರಿಸಿದ್ದನಗೌಡ ಮಾಲಿಪಾಟೀಲರವರಿಗೆ,

ಅಧ್ಯಯನದ ಸಂದರ್ಭದಲ್ಲಿ ತುಂಬು ಹೃದಯದ ಸಹಕಾರ ನೀಡಿದ ನಮ್ಮ ಕಾಲೇಜಿನ ಎಲ್ಲಾ ಅಧ್ಯಾಪಕ ಹಾಗೂ ಕಾರ್ಯಾಲಯದ ಸಿಬ್ಬಂದಿ ಮಿತ್ರರಿಗೆ,

ಕ್ಷೇತ್ರಕಾರ್ಯ ಹಾಗೂ ಅಧ್ಯಯನದಲ್ಲಿ ಸ್ಮರಣೀಯ ನೆರವು ನೀಡಿದ ಶ್ರೀ ಸೂಗೂರಪ್ಪ ಮಾಡಗಿರಿ, ಶಿಕ್ಷಕರು ಹಾಗೂ ಅವರ ವಿದ್ಯಾರ್ಥಿಗಳು, ವಿಶೇಷವಾಗಿ ಕುಮಾರ ರಾಮಕೃಷ್ಣ ಹಾಗೂ ಗೋಪಿ ಮಲ್ಲಾಪುರ, ಗಣೇಶ ಅಚಾರನರಸಾಪುರ, ವೀರನಗೌಡ ಮಾಲಿಪಾಟೀಲ, ಪ್ರಕಾಶ ವೆಂಕಟರಾಜು ಆನೆಗುಂದಿ ಇವರಿಗೆ,

ಅಧ್ಯಯನಕ್ಕೆ ಮೂಲ ಪ್ರೇರಕರಾದ ನನ್ನ ಪೂಜ್ಯ ತಂದೆತಾಯಿಯವರಿಗೆ, ಪ್ರೀತಿಯ ಅಕ್ಕ ಭಾವ, ಅಣ್ಣ ಅತ್ತಿಗೆಯರು ಹಾಗೂ ನಮ್ಮ ಮನೆತನದ ಎಲ್ಲ ಕಿರಿಯ ಪುಟಾಣಿಗಳಿಗೆ ಅಧ್ಯಯನದಲ್ಲಿ ನೆರವಾದ ಮಡದಿ ಶೋಭಾ ಹಾಗೂ ಅಧ್ಯಯನದ ಸಂದರ್ಭದ ಬೇಸರಿಕೆ ಕಳೆದ ಮುದ್ದು ಮಕ್ಕಳಾದ ಜೀವಿತಾ ಹಾಗೂ ಅರ್ಪಿತಾರಿಗೆ,

ಪ್ರಬಂಧವನ್ನು ಶೀಘ್ರ ಮತ್ತು ಸುಂದರವಾಗಿ ಅಕ್ಷರ ಸಂಯೋಜಿಸಿಕೊಟ್ಟ ಆತ್ಮೀಯರಾದ ಶ್ರೀ ಎ.ಎಂ. ಕೃಪಾಶಂಕರ್, ಕನ್ನಡ ವಿಶ್ವವಿದ್ಯಾಲಯ,ಹಂಪಿ ಅವರಿಗೆ ಕೃತಜ್ಞತೆಗಳು.

ಕೊನೆಯದಾಗಿ ಅಧ್ಯಯನದ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಸಹಾಯ ಸಹಕಾರ ನೀಡಿದ ಎಲ್ಲಾ ಮಹನೀಯರಿಗೂ, ಬಂಧುಗಳಿಗೂ ಈ ಮೂಲಕ ಕೃತಜ್ಞತೆ ಸಲ್ಲಿಸುತ್ತೇನೆ.

ಶರಣಬಸಪ್ಪ. ಪಿ

# ಪರಿವಿಡಿ

# ಅಧ್ಯಾಯ ೧

# ಪೀಠಿಕೆ

೧.೧. ಪ್ರಾಗಿತಿಹಾಸ ಕಾಲದ ಕಲೆ

೧.೨. ಅಧ್ಯಯನದ ಮಹತ್ವ, ಸ್ವರೂಪ ಮತ್ತು ವ್ಯಾಪ್ತಿ

## ೧.೧. ಪ್ರಾಗಿತಿಹಾಸ ಕಾಲದ ಕಲೆ

ಮಾನವನ ಸಾಂಸ್ಕೃತಿಕ ಬೆಳವಣಿಗೆಯ ಇತಿಹಾಸದಲ್ಲಿ ಕಲಾ ಸೃಷ್ಟಿ ಒಂದು ಪ್ರಮುಖ ಸಾಧನೆಯಾಗಿದೆ. ಮಾನವನ ಬದುಕಿನ ಅನುಭವಗಳು ಹಲವು ಮಾಧ್ಯಮಗಳ ಮುಖಾಂತರ ಪ್ರಕಟಗೊಳ್ಳುತ್ತಾ ಬಂದಿವೆ. ಅವುಗಳಲ್ಲಿ ಸಾಹಿತ್ಯ, ಸಂಗೀತ ಮತ್ತು ಕಲೆ ಮುಖ್ಯವಾದವುಗಳು. ಇವುಗಳಲ್ಲಿ ಸಂಗೀತ ಮತ್ತು ಸಾಹಿತ್ಯ ಒಂದು ರೀತಿಯಲ್ಲಿ ನಾಗರಿಕ ಅಭಿವ್ಯಕ್ತಿಗಳಾದರೆ ಕಲೆ ಅವನ ಆದಿಮ ಅಭಿವ್ಯಕ್ತಿ ಮಾಧ್ಯಮವಾಗಿದೆ. ಏಕೆಂದರೆ ಅಕ್ಷರದ ಅರಿವು ಉಂಟಾಗುವ ಎಷ್ಟೋ ವರ್ಷಗಳ ಹಿಂದೆ ಮನುಷ್ಯ ತನ್ನ ಭಾವನೆಗಳನ್ನು ಚಿತ್ರಗಳ ಮೂಲಕ ಅಭಿವ್ಯಕ್ತಿಸುತ್ತಿದ್ದನು. ಮಾನವನ ಆದಿಮ ಹಂತದ ಈ ಕಲೆ ಶಿಷ್ಟ ಪ್ರಕಾರದ್ದಾಗಿರಲಿಲ್ಲ. ಕೇವಲ ಗೀಚು ಪ್ರಧಾನವಾಗಿದ್ದಿತು. ಕ್ರಮೇಣ ಗೀಚುಗಳು, ಚಿತ್ರಗಳು, ಅಕ್ಷರಗಳ ಸೃಷ್ಟಿಗೆ ಕಾರಣವಾದವು. ಹೀಗಾಗಿ ಮಾನವನ ಸಾಂಸ್ಕೃತಿಕರಣದ ಪ್ರಕ್ರಿಯೆಯಲ್ಲಿ ಚಿತ್ರಕಲೆಗೆ ಪ್ರಧಾನ ಸ್ಥಾನವಿದೆ.

ಕಲಾಸೃಷ್ಟಿಯ ಪ್ರಕ್ರಿಯೆ ಮೊದಲ್ಗೊಂಡುದುದು ಶಿಲಾಯುಗದ ಕಾಲದಲ್ಲಿ ಪ್ರಾಚೀನ ಮಾನವ ತನ್ನ ಸಂತೋಷ, ದುಃಖ ಮುಂತಾದ ಉದ್ವೇಗಗಳನ್ನು ವ್ಯಕ್ತಪಡಿಸುವ ಸಲುವಾಗಿ ತನ್ನ ಖಾಯಂ ಇಲ್ಲವೇ ತಾತ್ಕಾಲಿಕ ಆಶ್ರಯ ತಾಣಗಳಾಗಿದ್ದ ಗುಹೆಗಳ, ಶಿಲಾಶ್ರಯಗಳ ಗೋಡೆ ಛತ್ತುಗಳಲ್ಲಿ ಗೀಚತೊಡಗಿದ. ಇದೇ ಕ್ರಮೇಣ ಚಿತ್ರ ರಚನೆಗೆ ಮೂಲ ಪ್ರೇರಣೆಯಾಯಿತು. ಆಹಾರಕ್ಕಾಗಿ ಬೇಟೆಯನ್ನೇ ತಮ್ಮ ಕಸುಬನ್ನಾಗಿಸಿಕೊಂಡಿದ್ದ ಆದಿಮಾನವ ಆ ತನ್ನ ವೃತ್ತಿಯ ಅನುಭವ ಚಟುವಟಿಕೆಗಳನ್ನು ಚಿತ್ರಗಳ ವಿಷಯ ವಸ್ತುವಾಗಿಸಿಕೊಂಡನು. ಹೀಗೆ ಆದಿಮಾನವ ಚಿತ್ರಕಲೆ ಮೊದಲಾಯಿತು. ಈ ಕಲೆಗೆ ಪ್ರಾಗಿತಿಹಾಸ ಕಾಲದ ಎಂದು ಕರೆಯಲಾಗಿದೆ. ಪ್ರಪಂಚದ ಹಲವಾರು ಭಾಗಗಳಲ್ಲಿ ಪ್ರಾಗಿತಿಹಾಸ ಹಾಗೂ ಇತಿಹಾಸ ಕಾಲದ ವರ್ಣಚಿತ್ರ, ಗವಿಗಳು, ಕಲ್ಲಾಸರೆಗಳು ಮತ್ತು ಬಯಲು ಬಂಡೆ ಚಿತ್ರಗಳು ಅಸಂಖ್ಯಾತವಾಗಿ ಬೆಟ್ಟಗುಡ್ಡಗಳಲ್ಲಿವೆ. ಆದರೆ ಇತ್ತೀಚಿವರೆಗೂ ಇದರ ಕಡೆಗೆ ತಜ್ಞರ, ಚಿತ್ರಕಲಾಭಿಮಾನಿಗಳ ಗಮನ ಹರಿದಿರಲಿಲ್ಲ. ಕೆಲವು ಆಕಸ್ಮಿಕ ಶೋಧನೆಗಳಿಂದ

ಇವುಗಳ ಸೌಂದರ್ಯ ಮತ್ತು ಮಹತ್ವಗಳ ಅರಿವಾಗುತ್ತಿರುವುದರಿಂದ ಈಗೀಗ ಇವುಗಳ ಶೋಧನೆ, ಅಭ್ಯಾಸದಲ್ಲಿ ಆಸಕ್ತಿ ಹೆಚ್ಚುತ್ತಿದೆ.

ಪ್ರಪಂಚದ ಕೆಲವು ಭಾಗಗಳಲ್ಲಿ ಗವಿ ಚಿತ್ರಗಳು ಮತ್ತು ಬಯಲು ಬಂಡೆ ಚಿತ್ರಗಳು ಶೋಧವಾಗಿದೆ. ಸ್ಪೇನ್, ಫ್ರಾನ್ಸ್, ಆಫ್ರಿಕಾ, ಜರ್ಮನಿ, ಇಂಗ್ಲೆಂಡ್, ರಷ್ಯಾ, ಜಪಾನ್ ಮತ್ತು ಭಾರತಗಳಲ್ಲಿ ಶೋಧವಾದ ಗವಿಚಿತ್ರಗಳು ಈಗಾಗಲೇ ಜಗತ್ಪ್ರಸಿದ್ಧವಾಗಿವೆ. ೧೮೩೭ ರಲ್ಲಿಸರ್ ಜರ್ಜ್ ಗ್ರೆ ಅವರಿಂದ ಸಿಡ್ನಿ (ಆಸ್ಟ್ರೇಲಿಯಾ) ಯಲ್ಲಿಯ ವರ್ಣಚಿತ್ರಿತ ಗವಿಗಳ ಶೋಧನೆ ಪ್ರಥಮವಾದರೂ ಬಹುಶಃ ೧೮೭೯ ರ ಅಲ್ತಮಿರ (ಸ್ಪೇನ್) ದಲ್ಲಿಯ ವರ್ಣ ಚಿತ್ರಿತ ಗವಿಗಳ ಶೋಧನೆ[೧], ಬಂಡೆಗವಿ ಚಿತ್ರಗಳ ಶೋಧನೆ ಇತಿಹಾಸದಲ್ಲಿಯೇ ವಿಶೇಷವಾದುದು. ಆ ವರ್ಷ ಡಾಸ್ ಮಾರ್ಸೆಲಿನೊ ದ ಸೌತ್‌ಪೋಲನು ಸ್ಪೇನಿನ ಕ್ಯಾಂಟಾಬ್ರೇನ್ ಬೆಟ್ಟದ ಅಲ್ತಮಿರ ಗವಿಯಲ್ಲಿ ಕಪ್ಪುಬಣ್ಣದ ಗೂಳಿಗಳ ಚಿತ್ರಗಳನ್ನು ಆಕಸ್ಮಿಕವಾಗಿ ಶೋಧಿಸಿದನು. ಹೀಗೆ ಅಲ್ತಮಿರ ಗವಿಚಿತ್ರಗಳು ಮೊದಲಿಗೆ ಬೆಳಕಿಗೆ ಬರುವುದರೊಂದಿಗೆ ಪ್ರಾಗೈತಿಹಾಸಿಕ ಚಿತ್ರಗಳ ಶೋಧನಾ ಕಾರ್ಯ ಚಾಲನೆಯನ್ನು ಪಡೆದುಕೊಂಡಿತು. ಮುಂದೆ ೧೯೪೦ ರಲ್ಲಿಯೂ ಲ್ಯಾಸ್ಕೊ (ದೋರ್ದೋಙ್ಜೆ ವಿಭಾಗ ಫ್ರಾನ್ಸ್) ಎಂಬಲ್ಲಿಯೂ ಆಕಸ್ಮಿಕವಾಗಿಯೇ ವರ್ಣಚಿತ್ರ ಗವಿಗಳು ಬೆಳಕಿಗೆ ಬಂದವು. ಹೀಗೆ ಪುರಾತತ್ವಜ್ಞರಲ್ಲಿ ಇವುಗಳ ಬಗೆಗೆ ಆಸಕ್ತಿ ಕುತೂಹಲ ಬಲವಾಯಿತು, ಕ್ರಮಬದ್ಧ ಅನ್ವೇಷಣೆಗೆ ಎಡೆ ಮಾಡಿ ಕೊಟ್ಟಿತು. ಹೀಗೆಯೆ ಆಸ್ಟ್ರೇಲಿಯಾ, ಆಫ್ರಿಕಾ, ಜರ್ಮನಿ, ಇಂಗ್ಲೆಂಡ್, ಭಾರತ, ರಷ್ಯಾ, ಜಪಾನ್ ಮೊದಲಾದ ಖಂಡ/ರಾಷ್ಟ್ರಗಳಲ್ಲಿ ಇಂತಹ ವರ್ಣ, ಬಂಡೆ ಚಿತ್ರಗಳ ಶೋಧನೆ ಆಯಿತು ಮತ್ತು ಆಗುತ್ತಲಿದೆ. ಜೊತೆಗೆ ಇವುಗಳ ವೈಜ್ಞಾನಿಕ ಅಧ್ಯಯನವೂ ನಡೆಯುತ್ತಲಿದೆ. ಈಗ ಭಾರತದಲ್ಲಿ ಕೂಡ ಅಧ್ಯಯನ ತೀವ್ರವಾಗಿ ನಡೆಯುತ್ತಿದೆ.

ಪ್ರಾಗಿತಿಹಾಸ ಕಾಲದ ಕಲೆಯನ್ನು ಮುಖ್ಯವಾಗಿ ಗವಿವರ್ಣ ಮುತ್ತು ಬಯಲು ಬಂಡೆ ಚಿತ್ರಗಳು, ಸುಡಾವೆ ಮಣ್ಣಿನ ಗೊಂಬೆಗಳು ಮತ್ತು ಮಡಕೆ ಚಿತ್ರಗಳು ಎಂದು ಮೂರು ಪ್ರಕಾರಗಳಲ್ಲಿ ಗುರುತಿಸಬಹುದು.[೨]

**ಗವಿವರ್ಣ ಚಿತ್ರಗಳು :** ಆದಿಮಾನವನು ತಾನು ವಾಸಿಸುತ್ತಿದ್ದ ಗವಿಗಳ ಇಲ್ಲವೇ ತಾತ್ಕಾಲಿಕವಾಗಿ ಆಶ್ರಯ ಪಡೆದಿದ್ದ ಕಲ್ಲಾಸರೆಗಳ ಛಾವಣಿಗಳಲ್ಲೋ ಗೋಡೆಗಳಲ್ಲೋ ಚಿತ್ರಗಳನ್ನು ಬಿಡಿಸಿರುತ್ತಾನೆ. ಸಾಮಾನ್ಯವಾಗಿ ಮನುಷ್ಯರ, ಪ್ರಾಣಿಗಳ ಮತ್ತು ವಿಚಿತ್ರವಾದ ರೇಖಾಚಿತ್ರಗಳು ಇಲ್ಲಿರುತ್ತವೆ. ಕೆಲವು ಗವಿಗಳಲ್ಲಿ ಸಮೂಹ ನೃತ್ಯ, ಪ್ರಾಣಿಗಳ ಸಾಲುಗಳು, ಮನುಷ್ಯರ ಜೋಡಿಗಳು ಇರುತ್ತವೆ.

ಮನುಷ್ಯರು ನಿಂತ ಭಂಗಿಯಲ್ಲಿರುವುದು ಸರ್ವೇ ಸಾಮಾನ್ಯ. ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳನ್ನು ಕೇವಲ ಬಾಹ್ಯ ರೇಖೆಗಳಿಂದ ಮಾತ್ರ ತೋರಿಸಲಾಗಿರುತ್ತದೆ. ಕಣ್ಣು, ಕಿವಿ, ಮೂಗು ಮತ್ತು ಬಾಯಿ, ಅಪರೂಪವಾಗಿ ಕೈಬೆರಳು, ಹಸ್ತ, ಪಾದಗಳನ್ನು ಸಹ ಸೂಚಿಸಿರುತ್ತದೆ. ಈ ಬಾಹ್ಯ ರೇಖೆಗಳ ಒಂದು ಭಾಗವನ್ನು ಹಲವೆಡೆಗಳಲ್ಲಿ ಬಣ್ಣದಿಂದ ತುಂಬಲಾಗಿರುತ್ತದೆ. ಇಂಥಹ ಚಿತ್ರಗಳಲ್ಲಿ ಪ್ರಾಣಿ, ಮನುಷ್ಯನ ನೆರಳು ಇದ್ದಂತೆ ಇವು ಇರುತ್ತವೆ. ಈ ಆಕೃತಿಗಳು ಒಂದು ನಿರ್ಧಿಷ್ಟ ಪ್ರಮಾಣದಲ್ಲಿರುವುದಿಲ್ಲ. ಕೇವಲ ಒಂದೆರಡು ಅಥವಾ ಕೆಲವು ಚಿತ್ರಗಳಿರಬಹುದು. ಅಥವಾ ಹಲವಾರು ಚಿತ್ರಗಳು ಇರಬಹುದು. ಎಲ್ಲಾ ಚಿತ್ರಗಳು ಒಂದು ಕಾಲದವಲ್ಲ. ಆದ್ದರಿಂದ ವಿವಿಧ ಪ್ರಮಾಣದ ಆಕೃತಿಗಳ ನಿರೂಪಣೆಯಲ್ಲೂ ಸ್ವಲ್ಪ ಭಿನ್ನತೆ ಇರುತ್ತದೆ. ಕ್ರಮವಾಗಿ ಒಂದು ಕಡೆಯಿಂದ ವ್ಯವಸ್ಥಿತವಾಗಿ ಬರೆದು ಸ್ಥಳವನ್ನು ತುಂಬಿಸಿದೆ. ಒಬ್ಬೊಬ್ಬರು ಒಂದೊಂದು ಸಮಯದಲ್ಲಿ ಅವರಿಗೆ ಅನುಕೂಲವಾದ ಭಾಗದಲ್ಲಿ ದಿಕ್ಕಿಗೆ ಚಿತ್ರಗಳನ್ನು ಬರೆದಂತೆ ಕಾಣುತ್ತದೆ. ಆದ್ದರಿಂದ ಚಿತ್ರಗಳು ಚಲ್ಲಾಪಿಲ್ಲಿಯಾಗಿರುತ್ತವೆ. ಈ ಚಿತ್ರಗಳು ಹೆಚ್ಚಾಗಿ ಕೆಮ್ಮಣ್ಣಿನ ಬಣ್ಣದಲ್ಲಿರುತ್ತವೆ. ಬಣ್ಣದ ಛಾಯೆಯು ಕಾಲ ವೈಪರೀತ್ಯದಿಂದ ಹಾಗೂ ಇತರೆ ಕಾರಣಗಳಿಂದ ಒಂದೇ ಸಮನಾಗಿರುವುದಿಲ್ಲ. ಅಪರೂಪವಾಗಿ ಕಾಡಿಗೆ ಕಪ್ಪು ಹಾಗೂ ಮಿಶ್ರ ಹಳದಿ, ಮುಸುಕು ಬಿಳಿಯ ದ್ವಿವರ್ಣಗಳಲ್ಲಿಯೂ ಚಿತ್ರಗಳಿರುತ್ತವೆ.

**ಬಯಲು ಬಂಡೆ ಚಿತ್ರಗಳು :** ಬಯಲು ಬಂಡೆ ಚಿತ್ರಗಳ ಕ್ರಮ ಸಹಜವಾಗಿ ಭಿನ್ನವಾಗಿದೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಗಳ ಮಧ್ಯದ ಮತ್ತು ಮೇಲಿನ ಹಂತಗಳಲ್ಲಿ ಬಯಲಿನಲ್ಲಿರುವ ಬಂಡೆಗಳಲ್ಲಿ ಇಲ್ಲವೇ ನೀರಿನ ತಾಣದಲ್ಲಿಯ ಬಂಡೆಗಳಲ್ಲಿ ಇಂತಹ ಚಿತ್ರಗಳು ಕಂಡುಬರುತ್ತವೆ. ಸಮಾನ ಮೇಲ್ಮೈಯ ಮೇಲೆ ಬೇಕಾದ ಚಿತ್ರವನ್ನು ಮೂಡಿಸುವುದಕ್ಕೆ ಅನುಕೂಲಕರವಾದ ಸಪೂರವಾದ ಮೊಂಡು ತುದಿಯುಳ್ಳ ಉದ್ದನೆ ಕಲ್ಲು ತುಂಡಿನಿಂದ ಏಕ ಪ್ರಕಾರವಾಗಿ ಕುಟ್ಟಿ ಕುಟ್ಟಿ ಬಿಡಿಸುವುದು. ಇಲ್ಲವೇ ಉಳಿಯಂತಹ ಮೊನಚಾದ ಉಪಕರಣದಿಂದ ಗೆರೆಗಳನ್ನು ಮೂಡಿಸಿ ಚಿತ್ರಗಳನ್ನು ಮೂಡಿಸುತ್ತಿದ್ದರು. ಕೊರೆದ ತಂತ್ರಗಳಲ್ಲಿ ಚಿತ್ರಗಳು ಕೇವಲ ಬಾಹ್ಯ ರೇಖೆಗಳಲ್ಲಿ ರಚಿಸಲಾಗಿರುತ್ತದೆ. ಮತ್ತು ಈ ರೇಖೆಗಳು ಸ್ವಲ್ಪ ಆಳವಾಗಿರುತ್ತವೆ.

ಕುಟ್ಟುವಿಕೆ ತಂತ್ರದಲ್ಲಿ ಇಡೀ ಚಿತ್ರದ ಪೂರ್ಣ ಛಾಯಾರೂಪದ ಚಿತ್ರ ಸಿದ್ಧವಾಗುತ್ತದೆ. ಇಲ್ಲಿ ಬಂಡೆಯ ಮೇಲ್ಮೈ ಮಾತ್ರ ಕಚ್ಚಾಗಿ ಚಿತ್ರಗಳು ಮೂಡಿರುತ್ತವೆ. ಕೊರೆದ ಮತ್ತು ಕುಟ್ಟುವಿಕೆಯ ಚಿತ್ರಗಳಲ್ಲಿ ಗೂಳಿಗಳೇ ಬಹಳ, ಕಾಡು ಕೋಣ ಕಡಿಮೆ. ಮನುಷ್ಯನ ಚಿತ್ರಗಳು ತೀರ ಕಡಿಮೆ.

ಅಪರೂಪವಾಗಿಕೆಲವು ಕಡೆ ಬಂಡೆಗಳ ಮೇಲೆ ತಿರುಗುಳಿ (Cup Marks) ಗಳು ಕೂಡ ಕಂಡು ಬರುತ್ತವೆ. ನಿರ್ದಿಷ್ಟವಾದ ಕಲ್ಲನ್ನು ಒಂದೇ ಕಡೆ ಇಟ್ಟು ಸತತವಾಗಿ ಶಕ್ತಿ ಹಾಕಿ ತಿರುಗಿಸುವುದರ ಮೂಲಕ ಇಂಥ ತಿರುಗುಳಿಗಳನ್ನು ಮೂಡಿಸಲಾಗಿದೆ.

**ಸುಡಾವೆ ಮಣ್ಣಿನ ಗೊಂಬೆಗಳು :** ಯಾವುದೇ ಯಾಂತ್ರಿಕ ಸಾಧನವನ್ನು ಉಪಯೋಗಿಸದೇ ಕಲಸು ಮಣ್ಣಿನ ಮುದ್ದೆಯನ್ನು ಕೈಗಳಿಂದಲೇ ರೂಪಿಸಿ ತೀಡಿ ತಿದ್ದಿ ಗೊಂಬೆಗಳನ್ನು ಮಾಡಲಾಗಿರುತ್ತದೆ. ಸಾಮಾನ್ಯವಾಗಿ ಈ ಗೊಂಬೆಗಳು ದನ, ಕುರಿ, ಪಕ್ಷಿ ಮತ್ತು ಮನುಷ್ಯ ಇವುಗಳ ಪ್ರತಿಕೃತಿಗಳಾಗಿವೆ. ಕಾಲುಗಳನ್ನು, ಕೋಡುಗಳನ್ನು ಪ್ರತ್ಯೇಕ ಮಾಡಿ ಶರೀರಕ್ಕೆ ಜೋಡಿಸಲಾಗಿರುತ್ತದೆ. ಚಿಕ್ಕ ಗೊಂಬೆಗಳಿದ್ದಲ್ಲಿ ಅಖಂಡವಾಗಿರುತ್ತವೆ. ಅವುಗಳಿಗೆ ಸರಿ ಹೋಗುವ ಲೇಪನವನ್ನು ಬಳಿದು ನಂತರ ಅವಿಗೆಯಲ್ಲಿ ಸುಟ್ಟಿರುತ್ತಾರೆ. ಹಾಗಾಗಿ ಇವು ಗಟ್ಟಿ ಗೊಂಬೆಗಳಾಗಿದ್ದು ಮೈ ಮಾಟವು ಸಾಮಾನ್ಯವಾಗಿ ಆಕರ್ಷಕವಾಗಿರುತ್ತದೆ. ಆದರೆ ಬಾಯಿ ಕಣ್ಣು ಕಿವಿ ಮೊದಲಾದ ಮುಖ್ಯ ಲಕ್ಷಣಗಳು ಅಷ್ಟೇನೂ ಸ್ಪಷ್ಟವಾಗಿರುವುದಿಲ್ಲ.

ಕಣ್ಣುಗಳನ್ನು ಸಣ್ಣ ವೃತ್ತಗಳಿಂದ ಸೂಚಿಸಲಾಗಿರುತ್ತದೆ. ಕೆಳಮುಖ ಸಪೂರವಾದ ಸಣ್ಣ ಸಣ್ಣ ಡಿಂಡುಗಳು, ಕಾಲುಗಳು, ದನ ಇಲ್ಲವೇ ಗೂಳಿಗಳ ಗೊಂಬೆಗಳೇ ಹೆಚ್ಚು.

**ಮಡಕೆ (ಮೃತ್ಪಾತ್ರೆ) ಚಿತ್ರಗಳು**

**ವರ್ಣ ಚಿತ್ರಗಳು :** ಸಾಮಾನ್ಯವಾಗಿ ಇವು ರೇಖಾಚಿತ್ರಗಳಾಗಿರುತ್ತವೆ. ಮಡಕೆಗಳ ಅಲಂಕರಣಕ್ಕೋಸ್ಕರ ಬಿಡಿಸಲಾಗಿರುತ್ತದೆ. ಅಪರೂಪವಾಗಿ ಪ್ರಾಣಿ, ಪಕ್ಷಿಗಳ ಚಿತ್ರಗಳೂ ಇರುತ್ತವೆ. ಮಣ್ಣಿನ ಪಾತ್ರೆಗಳನ್ನು ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿದ ಮೇಲೆ ಭಟ್ಟಿಯಲ್ಲಿ ಸುಡುವುದಕ್ಕೆ ಮುಂಚೆಯೇ ಅವುಗಳ ಮೇಲೆ ಚಿತ್ರಗಳನ್ನು ಬಿಡಿಸಲಾಗಿರುತ್ತದೆ. ಬಣ್ಣ ಒಣಗಿದ ಮೇಲೆ ಆ ಪಾತ್ರೆಗಳನ್ನು ಭಟ್ಟಿಯಲ್ಲಿ ಸುಡಲಾಗಿರುತ್ತದೆ.

ಮಡಕೆಗಳ ಬಾಯಿಯ ಅಂಚಿನಲ್ಲಿ ಹೊರ ಒಳ ಬದಿಯಲ್ಲಿ, ತುದಿಯಲ್ಲಿ ಕಂಠ ಭುಜ ಮತ್ತು ಹೊಟ್ಟೆ ಭಾಗಗಳ ಮತ್ತು ಹೊರ ಮೈಯ ಮೇಲೆ ಗೆರೆ ಚಿತ್ರಗಳಿವೆ. ಅರ್ಧ ಗೋಲಾಕೃತಿಯ ಬಟ್ಟಲುಗಳಲ್ಲಿ ಒಳ ಹೊರ ಭಾಗಗಳಲ್ಲಿಯೂ ಇಂಥಹ ಚಿತ್ರಗಳಿರಬಹುದು.

**ಗೀರು ಚಿತ್ರಗಳು :** ಪಾತ್ರೆಗಳು ಇನ್ನೂ ಹಸಿ ಇರುವಾಗಲೇ ಚೂಪಾದ ಮರದ ಕಡ್ಡಿಯಿಂದಲೋ ಅಥವಾ ಲೋಹದ ತಂತಿಯಿಂದಲೋ ಪಾತ್ರಗಳ ಮೇಲ್ಭಾಗ ಹೊರ ಮೈ ಮೇಲೆ ಕೆಲವು ವಿವಿಧ ರೇಖಾಚಿತ್ರಗಳನ್ನು ಗೀರುವುದು ಒಂದು ಪ್ರಕಾರ.

ಇನ್ನೊಂದು ಪ್ರಕಾರವೆಂದರೆ ಸೂಜಿಯಂತಹ ಉಪಕರಣದಿಂದ ಚುಚ್ಚು ಚುಚ್ಚಿ ವಿವಿಧ ಆಕಾರಗಳನ್ನು ಬಿಡಿಸುವುದು ಇನ್ನೂ ದೊಡ್ಡ ದೊಡ್ಡ ಗುಡಾಣ ಹಾಗೂ ಬಾನಿಗಳಂತಹ ದಪ್ಪ ಪಾತ್ರೆಗಳ ಮೇಲೆ ಹಾಗೂ ಪುಷ್ಪ ಕುಂಡದಂತಹ ಪಾತ್ರೆಗಳ ಮೇಲೆ ಅಂಚಿನ ತುದಿಯನ್ನು ಬೆರಳುಗಳಿಂದ ಉದ್ದಕ್ಕೂ ಒತ್ತಿ ಒತ್ತಿ ಅಥವಾ ಮಣ್ಣಿನ ಉದ್ದನೆಯ ಮಾಲೆಯನ್ನು ಮಾಡಿ, ಅದನ್ನು ಪಾತ್ರೆಯ ಕಂಠದಿಂದ ಸ್ವಲ್ಪ ಕೆಳಗೆ ಭುಜದ ಮೇಲೆ ಸುತ್ತಲೂ ಮೆತ್ತಿ ಮಾಲೆಯನ್ನು ಮತ್ತೆ ಬೆರಳುಗಳಿಂದ ಒತ್ತಿ ಒತ್ತಿ ಅಲಂಕರಿಸಿ ಮಾಡಿರುವುದು ಈ ಕ್ರಮದಿಂದ ಮಣಿಗಳ ಸರ ಹಾಕಿದಂತೆ ಕಾಣುತ್ತದೆ.

## ೧.೨. ಅಧ್ಯಯನದ ಮಹತ್ವ, ಸ್ವರೂಪ, ಮತ್ತು ವ್ಯಾಪ್ತಿ

### ಮಹತ್ವ

ಭಾರತೀಯ ಪುರಾತತ್ವ ಕ್ಷೇತ್ರದಲ್ಲಿ ಪ್ರಾಗೈತಿಹಾಸಿಕ ಚಿತ್ರಕಲೆಯು ತೀವ್ರ ಅಧ್ಯಯನ ನಡೆಯಬೇಕಾದ ಶಾಖೆಯಾಗಿದೆ. ಏಕೆಂದರೆ, ಬಹುಕಾಲದವರೆಗೆ, ಇದರ ಬಗೆಗೆ ವಿದ್ವಾಂಸರು ಗಮನ ಹರಿಸುವುದಕ್ಕೆ ಉಚಿತ ಸಂದರ್ಭಗಳು ಬಂದಿರಲಿಲ್ಲ. ಪ್ರಾಗಿತಿಹಾಸ ಕಾಲದ ಮಾನವನ ಬದುಕನ್ನು ಕೇವಲ ಶಿಲಾಯುಧಗಳು, ಮಡಿಕೆ ಚೂರುಗಳು ಮತ್ತಿತರ ಅವಶೇಷಗಳಿಂದ ಮಾತ್ರ ಗ್ರಹಿಸಲಾಗುತ್ತಿತ್ತು. ಆದರೆ ಆ ಕಾಲದ ಸಾಮಾಜಿಕ-ಸಾಂಸ್ಕೃತಿಕ ಬದುಕಿಗೆ ಸಾಕ್ಷಿಯಾಗಿದ್ದ ಚಿತ್ರಕಲೆ ಮಾತ್ರ ಗವಿ/ ಕಲ್ಲಾಸರೆಗಳಲ್ಲಿ ಅಜ್ಞಾತವಾಗಿಯೇ ಉಳಿದಿತ್ತು. ಆದರೆ ೧೮೭೯ ರ ಸ್ಪೇನಿನ ಅಲ್ಟಮಿರದಲ್ಲಿಯ ಗವಿವರ್ಣ ಚಿತ್ರಗಳ ಶೋಧನೆ ಈ ಕ್ಷೇತ್ರದಲ್ಲಿ ವಿಶ್ವದಾದ್ಯಂತ ವಿದ್ವಾಂಸರ ಗಮನ ಸೆಳೆಯಿತು. ತತ್‌ಸಂಬಂಧ ಶೋಧನೆಗಳು ನಡೆದು ನಂತರ ಅನೇಕ ದೇಶಗಳಲ್ಲಿ ಗವಿವರ್ಣ ಮತ್ತು ಬಂಡೆ ಚಿತ್ರಗಳು ಬೆಳಕಿಗೆ ಬಂದವು.

ಭಾರತದಲ್ಲೂ ಗವಿವರ್ಣ ಮತ್ತು ಬಂಡೆಚಿತ್ರಗಳ ಶೋಧನೆ ಆಕಸ್ಮಿಕವಾಗಿಯೇ ಪ್ರಾರಂಭವಾಯಿತೆನ್ನ ಬಹುದು. ಅರ್ಚಿಬಾಲ್ಡ್ ಕಾರ್ಲೈಲ್[೩] ಶೋಧಿಸಿದ ಮಿರ್ಜಾಪುರ ಜಿಲ್ಲೆಯ ಶೊಹಗಿ ಘಾಟ್‌ನ ವರ್ಣಚಿತ್ರಗಳನ್ನು ೧೮೮೩ ರಲ್ಲಿ ಜಾನ ಕಾಕ್‌ಬರ್ನ್ ಮೊದಲಿಗೆ ಪ್ರಕಟಿಸಿದರು.[೪] ೧೮ನೇ ಶತಮಾನದ ೮೦ ರ ದಶಕದಲ್ಲಿ ಹೂಬರ್ಟ್ ನಾಕ್ಸ್ ರವರು ಬಳ್ಳಾರಿಯ ಕಪ್‌ಗಲ್‌ನಲ್ಲಿ ಬಯಲು ಬಂಡೆಯ ಕೊರೆದ ಚಿತ್ರಗಳನ್ನು ಶೋಧಿಸಿದರು.[೫] ಇದು ಕರ್ನಾಟಕದಲ್ಲಿಯ ಮೊದಲ ಶೋಧನೆ, ನಂತರ ಅನೇಕ ದೇಶಿ ಮತ್ತು ವಿದೇಶಿ ವಿದ್ವಾಂಸರು ತಕ್ಕ ಮಟ್ಟಿಗೆ ಈ ಕ್ಷೇತ್ರದಲ್ಲಿ ಶೋಧನೆಗಳನ್ನು ಮಾಡಿದ್ದಾರೆ.

ವಿಶೇಷವಾಗಿ ಕರ್ನಾಟಕದ ಗವಿವರ್ಣಚಿತ್ರಗಳ ಶೋಧನೆ ಮತ್ತು ಅಧ್ಯಯನದಲ್ಲಿ ಅ. ಸುಂದರ ಅವರ ಕಾರ್ಯ ಮಹತ್ವದ್ದಾಗಿದೆ. ಮತ್ತು ಈಗ ಈ ಸಂಬಂಧ ಪ್ರೊ. ಲಕ್ಷ್ಮಣ ತೆಲಗಾವಿಯವರು ಚಿತ್ರದುರ್ಗ ಪ್ರದೇಶದಲ್ಲಿ ವ್ಯಾಪಕ ಶೋಧನೆ ಮತ್ತು ಅಧ್ಯಯನ ನಡೆಸಿದ್ದಾರೆ. ಇಲ್ಲಿಯವರೆಗೆ ನಡೆದವುಗಳಲ್ಲಿ ಬಹುಮಟ್ಟಿಗೆ ಆಕಸ್ಮಿಕ ಶೋಧನೆ ಅಂದರೆ ಬೇರೆ ಉದ್ದೇಶಕ್ಕಾಗಿ ಹೋದಾಗ ಗವಿ ಚಿತ್ರಗಳು ಬೆಳಕಿಗೆ ಬಂದದ್ದೇ ಹೆಚ್ಚು. ಹಾಗಾಗಿ ಚಿತ್ರಗಳ ಬಗೆಗೆ ಮೂಲ ಉದ್ದೇಶವಿಟ್ಟುಕೊಂಡ ಅಧ್ಯಯನ ನಡೆಯಬೇಕಿದೆ. ಇದೆಲ್ಲವನ್ನು ಗಮನಿಸಿದಾಗ ಈ ಕ್ಷೇತ್ರವು ತುಂಬಾ ಫಲವತ್ತಾದುದಾಗಿಯೂ ಮತ್ತು ಶೋಧನೆಗಳನ್ನು ಮಾಡಲು ಬಹಳಷ್ಟು ಅವಕಾಶಗಳಿರುವುದಾಗಿ ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಇದುವರೆಗೆ ನಡೆದ ಶೋಧನೆಗಳಿಂದ ಕೊಪ್ಪಳ-ಹಿರೇಬೆಣಕಲ್-ಹಂಪಿ ಭಾಗ, ಪಟ್ಟದಕಲ್-ಕುಟಕನಕೇರಿ-ಐಹೊಳೆ ಭಾಗ, ಚಿತ್ರದುರ್ಗ ಪ್ರದೇಶ ಮತ್ತು ವಿರಳವಾಗಿ ಪಶ್ಚಿಮ ಘಟ್ಟಗಳ ಪ್ರದೇಶಗಳಲ್ಲಿ ಪ್ರಾಗೈತಿಹಾಸಿಕ ಚಿತ್ರಗಳನ್ನು ಗುರುತಿಸಲಾಗಿದೆ. ಈ ಭಾಗಗಳಲ್ಲಿ ಕೊಪ್ಪಳ-ಹಿರೇಬೆಣಕಲ್-ಹಂಪಿ ಪ್ರದೇಶ ಮತ್ತು ಐಹೊಳೆ ಪ್ರದೇಶಗಳು ಚಿತ್ರಗಳು ದೃಷ್ಟಿಯಿಂದ ಗಮನಾರ್ಹವಾಗಿವೆ. ಇಲ್ಲಿ ವ್ಯಾಪಕ ಶೋಧನೆಗಳನ್ನು ನಡೆಸಿದಲ್ಲಿ ಇನ್ನೂ ಅನೇಕ ಚಿತ್ರಗಳ ನೆಲೆಗಳು ಬೆಳಕಿಗೆ ಬರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[೬] ಈ ಸೂಚನೆಯನ್ವಯ ಅಧ್ಯಯನಕ್ಕೆ ಕೊಪ್ಪಳ-ಹಿರೇಬೆನಕಲ್-ಆನೆಗುಂದಿ-ಹಂಪಿ ಪ್ರದೇಶವನ್ನು ಆಯ್ದುಕೊಳ್ಳಲಾಗಿದೆ. ಮೇಲಿನ ಸೂಚನೆಯಲ್ಲದೇ ಈ ಪ್ರದೇಶದ ಭೌಗೋಳಿಕ ಸನ್ನಿವೇಶ ಮತ್ತು ಪ್ರಾಗೈತಿಹಾಸಿಕ ಪರಿಸರವನ್ನು ಗಮನದಲ್ಲಿರಿಸಲಾಗಿದೆ.

ತುಂಗಾಭದ್ರಾ ನದಿಯ ಸುತ್ತಲಿನ ಈ ಪ್ರದೇಶ ಕೊಪ್ಪಳದಿಂದ ಹಂಪಿಯವರೆಗಿನ ಪಶ್ಚಿಮ ಪೂರ್ವಾಭಿಮುಖವಾಗಿ ಸುಮಾರು ೭೦ ಕಿ.ಮೀ. ಉದ್ದವಾಗಿಯೂ, ಸುಮಾರು ೩೦ ಕಿ.ಮೀ ಅಗಲವಾಗಿಯೂ ಇದೆ. ಈ ಪ್ರದೇಶದಲ್ಲಿ ವ್ಯಾಪಕವಾದ ಗುಡ್ಡಗಾಡುಗಳ ಸಾಲುಗಳಿವೆ. ಸುಮಾರು ೩೦ ಹಳ್ಳಿಗಳು ಸಮಾವೇಶವಾಗುತ್ತವೆ. ಬೆಟ್ಟಗಳಲ್ಲಿ ಅಲ್ಲಲ್ಲಿ ನೀರಿನ ಅನುಕೂಲತೆಗಳು, ನೈಸರ್ಗಿಕ ಗವಿಗಳು, ಕಲ್ಲಾಸರೆಗಳು ಅಧಿಕ ಸಂಖ್ಯೆಯಲ್ಲಿ ಇದ್ದು ಇವು ಪ್ರಾಚೀನ ಕಾಲದಲ್ಲಿ ಮಾನವನ ವಾಸ್ತವ್ಯಕ್ಕೆ ಅನುಕೂಲಕರವಾಗಿದ್ದವು. ಅಂತೆಯೇ ಈ ಪ್ರದೇಶದಲ್ಲಿ ಅನೇಕ ನವಶಿಲಾಯುಗ ಮತ್ತು ಬೃಹತ್‌ಶಿಲಾಯುಗದ ಸಮಾಧಿ ನೆಲೆಗಳು ಇವೆ.[೭] ಈ ಎಲ್ಲಾ ಸಂಗತಿಗಳನ್ನು ಪ್ರಸ್ತುತ ಪ್ರದೇಶದ ಆಯ್ಕೆಯ ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

ಆದಿಮಾನವನ ಜೀವನ ವಿಧಾನಕ್ಕೆ ಸಾಕ್ಷಿಯಾಗಿರುವ ಪ್ರಾಗಿತಿಹಾಸ ಕಾಲದ ಕಲಾಪ್ರಕಾರಗಳಾದ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳು ಕೂಡ ಇಂದು ನೈಸರ್ಗಿಕವಾಗಿ ಮತ್ತು ಆಧುನಿಕ

ಮಾನವನ ಚಟುವಟಿಕೆಗಳಿಂದ ನಾಶವಾಗುತ್ತಲಿವೆ. ಹಾಗಾಗಿ ಅಂತಹ ಕಲಾ ನೆಲೆಗಳ ಶೋಧನೆ ಮತ್ತು ದಾಖಲೀಕರಣ ಅವಶ್ಯಕವಾಗಿದೆ.

ಪ್ರಸ್ತುತ ಅಧ್ಯಯನದಿಂದ ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲಾನೆಲೆಗಳ ಶೋಧನೆ ಮತ್ತು ದಾಖಲೀಕರಣ ಸಾಧ್ಯವಾಗುವುದು. ಕೊಪ್ಪಳ-ಹಂಪಿ ಪ್ರದೇಶದಲ್ಲಿ ಹವಾಮಾನ ವೈಪರೀತ್ಯ (ಬೇಸಿಗೆಯಲ್ಲಿ ಅತೀ ಬಿಸಿಲು, ಚಳಿಗಾಲದಲ್ಲಿ ಅತೀ ಚಳಿ) ದಿಂದಾಗಿ ಇಲ್ಲಿಯ ಬೆಟ್ಟದ ಕಲ್ಲು ಬಂಡೆಗಳು ತಾನಾಗಿಯೇ ಸೀಳಿ ತುಂಡಾಗುತ್ತವೆ. ಈ ಕ್ರಿಯೆ ಚಿತ್ರಗಳಿರುವ ಗವಿ, ಕಲ್ಲಾಸರೆ ಮತ್ತು ಬಯಲು ಬಂಡೆಗಳಿಗೆ ಹೊರತಾಗಿಲ್ಲ. ಇದರಿಂದ ಅಪೂರ್ವ ಚಿತ್ರಗಳು ನಾಶವಾಗುತ್ತಲಿವೆ. ಮತ್ತು ಆಧುನಿಕ ಮನುಷ್ಯನ ಚಟುವಟಿಕೆಗಳಿಂದ ಕೂಡ ಇಂತಹ ಚಿತ್ರಗಳು ಆಪತ್ತಿನಲ್ಲಿವೆ. ಕಲ್ಲು ಗಣಿಗಾರಿಕೆಯಿಂದ ಚಿತ್ರಗಳನ್ನೊಳಗೊಂಡ ಗವಿ, ಬಂಡೆಗಳ ನಾಶ (ಉದಾ: ಇಲಕಲ್ ಪ್ರದೇಶ) ಬೆಟ್ಟದ ಮೇಲಿನ ಸುತ್ತಲ ಪ್ರದೇಶದಲ್ಲಿ ನಡೆಸುತ್ತಿರುವ ಕೃಷಿ ಚಟುವಟಿಕೆಗಳು ಮತ್ತು ಆ ಸಂಬಂಧ ಸುತ್ತಲಿನ ಗವಿ ಕಲ್ಲಾಸರೆಗಳಲ್ಲಿ ವಾಸ, ಅಡುಗೆಯಾಗಿ ಬೆಂಕಿ ಹಚ್ಚಿಕೊಳ್ಳುವುದು, ಮಾಡಲಾಗುತ್ತಿದೆ. ಇದರಿಂದ ಅಲ್ಲಿರಬಹುದಾದ ಚಿತ್ರಗಳು ಮೂಸಿ ಹೋಗುತ್ತಲಿವೆ. ಕೆಲವು ಜನ ಕುತೂಹಲದಿಂದ ತಾವೂ ಹಿಂದಿನ ಚಿತ್ರಗಳ ಮೇಲೆ ಪುನಃ ಚಿತ್ರ ಬಿಡಿಸುವುದು ಮಾಡುತ್ತಾರೆ. ಇದರಿಂದ ಚಿತ್ರಗಳ ನಾಶ ಇಲ್ಲವೇ ಗೊಂದಲಕ್ಕೆಡೆ ಮಾಡುತ್ತಲಿವೆ. ಈ ರೀತಿಯ ನೈಸರ್ಗಿಕ ಮತ್ತು ಮನುಷ್ಯ ಸಂಬಂಧಿತ ಹಲವಾರು ಕಾರಣಗಳಿಂದ ಹಾನಿಗೊಳಗಾಗುತ್ತಿರುವ ಪ್ರಾಗಿತಿಹಾಸ ಕಾಲದ ಚಿತ್ರಗಳನ್ನು ದಾಖಲಿಕರಣದ ಮೂಲಕವಾದರೂ ಉಳಿಸಿಕೊಳ್ಳಬೇಕಾದದ್ದು ತೀವ್ರ ಅವಶ್ಯಕ ಕಾರ್ಯವಾಗಿದೆ.

ಕೊಪ್ಪಳ-ಹಂಪಿ ಪ್ರದೇಶದ ಕೆಲವು ಕಲಾ ನೆಲೆಗಳ ಚಿತ್ರಗಳ ಬಗೆಗೆ ಮಾತ್ರ ಈಗಾಗಲೇ ಬೇರೆ ಬೇರೆ ವಿದ್ವಾಂಸರಿಂದ ಬಿಡಿಯಾದ ಅಧ್ಯಯನವಾಗಿದೆ. ಆದರೆ ಇಡೀ ಪ್ರದೇಶದ ಚಿತ್ರಗಳ ಬಗೆಗೆ ಒಟ್ಟು ಅಧ್ಯಯನವಾಗಿಲ್ಲ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನದ ಅವಶ್ಯಕತೆ ಬಿಂಬಿತವಾಗುತ್ತದೆ. ಇಂಥ ಅಧ್ಯಯನಗಳಿಂದ ಆಯಾ ಪ್ರದೇಶಗಳ ಪ್ರಾಗೈತಿಹಾಸಿಕ ಕಾಲದ ಮಾನವನ ಬೌದ್ಧಿಕ, ಧಾರ್ಮಿಕ ಮತ್ತು ಕಲಾಭಿಜ್ಞತೆ ಇವುಗಳ ಬೆಳವಣಿಗೆಗಳ ವಿವಿಧ ಹಂತಗಳನ್ನು ತಿಳಿಯಲಿಕ್ಕೆ ಸಾಧ್ಯವಾಗುತ್ತದೆ. ವಿಶೇಷವಾಗಿ ಕೊಪ್ಪಳ-ಹಂಪಿ ಪ್ರದೇಶಗಳಲ್ಲಿ ಅನೇಕ ನೂತನ ಶಿಲಾಯುಗದ ಕಬ್ಬಿಣ ಯುಗ, ಬೃಹತ್ ಶಿಲಾಯುಗದ ನೆಲೆಗಳು ಕಂಡುಬಂದಿವೆ. ಆದರೆ ಇಲ್ಲಿಯ ಯಾವೊಂದು ನೆಲೆಯ ಉತ್ಖನನ (Excavation) ವಾಗಿಲ್ಲದಿರುವುದರಿಂದ ಈ ಪ್ರದೇಶದಲ್ಲಿ ಆಯಾ ಸಂಸ್ಕೃತಿಗಳ ಬಗೆಗೆ ಹೆಚ್ಚಿನ ತಿಳುವಳಿಕೆ ಆಸ್ಪದವಾಗಿಲ್ಲ. ಇಂತಹ ಸಂದರ್ಭದಲ್ಲಿ ಪ್ರಸ್ತುತ ಅಧ್ಯಯನವು

ಈಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ನೀಗಿಸಲು ಸಹಾಯಕವಾಗುವ ಹಿನ್ನೆಲೆಯಲ್ಲಿ ಅದರ ಅವಶ್ಯಕತೆ ವ್ಯಕ್ತವಾಗುತ್ತದೆ.

## ಸ್ವರೂಪ

ಪ್ರಸ್ತುತ ಅಧ್ಯಯನವು ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆಗೆ ಸಂಬಂಧಿಸಿದ್ದು, ವಿಶೇಷವಾಗಿ ಆ ಕಾಲದ ಬಹುಮುಖ್ಯ ಕಲಾಪ್ರಕಾರವಾದ ಗವವರ್ಣ ಮತ್ತು ಬಯಲುಬಂಡೆ ಚಿತ್ರಗಳ ವಿಶ್ಲೇಷಣೆಯನ್ನು ಒಳಗೊಂಡಿದೆ. ಏಕೆಂದರೆ ಈ ಪ್ರದೇಶ ಗವಿವರ್ಣ ಚಿತ್ರಗಳ ದೃಷ್ಟಿಯಿಂದ ಶ್ರೀಮಂತ ಪ್ರದೇಶವಾಗಿದ್ದು, ಉತ್ತರ ಕರ್ನಾಟಕದ ವರ್ಣಚಿತ್ರಕಲೆಯ ಕೇಂದ್ರ ನೆಲೆ ಎನಿಸಿರುವುದು ಹಾಗೂ ಇತರ ಕಲಾ ಪ್ರಕಾರಗಳಾದ ಚಿತ್ರಿತ ಮಡಿಕೆ ಚೂರುಗಳು, ಸುಡಾವೆ ಮಣ್ಣಿನ ಗೊಂಬೆಗಳು ಈ ಪ್ರದೇಶದಲ್ಲಿ ಕಂಡುಬಂದಿಲ್ಲದಿರುವುದರಿಂದ ಅವುಗಳ ವಿವೇಚನೆಯನ್ನು ಮಾಡಲಾಗಿಲ್ಲ.

ಅಧ್ಯಯನವು ಪುರಾತತ್ವಶಾಸ್ತ್ರೀಯ ದೃಷ್ಟಿಯದಾಗಿದೆ. ಕಲಾನೆಲೆಗಳ ಶೋಧನೆಗಾಗಿ ಕ್ಷೇತ್ರಕಾರ್ಯ ನೆಡಸಲಾಯ್ತು. ಹಿಂದಿನ ಮತ್ತು ಪ್ರಸ್ತುತ ಶೋಧಿತ ಮಾಹಿತಿಯನ್ನು ಅಂದರೆ ಚಿತ್ರಗಳನ್ನು ಪ್ರಧಾನವಾಗಿ ವಿಷಯಾತ್ಮಕವಾಗಿ ಮತ್ತು ತಾಂತ್ರಿಕ ಅಂಶಗಳ ದೃಷ್ಟಿಯಿಂದ ವಿಶ್ಲೇಷಿಸಲಾಗಿದೆ. ಮೊದಲನೆಯದರಲ್ಲಿ ಚಿತ್ರಗಳ ಒಟ್ಟು ವಿಷಯ ಅಂದರೆ ಮನುಷ್ಯ, ಪ್ರಾಣಿ, ಪಕ್ಷಿ ಮತ್ತಿತರ ವಿಷಯ ವೈವಿಧ್ಯತೆಯನ್ನು ಗುರುತಿಸಲಾಗಿದೆ. ತಾಂತ್ರಿಕ ವಿಶ್ಲೇಷಣೆಯಲ್ಲಿ ಚಿತ್ರಗಳ ನೆಲೆ, ಶೈಲಿ, ಪ್ರಮಾಣ, ಪರಿಕರ, ವಿಧಾನ ಮತ್ತು ಉದ್ದೇಶಗಳನ್ನು ಕುರಿತು ಚರ್ಚಿಸಲಾಗಿದೆ. ಕಾಲಮಾನವನ್ನು ನೆಲೆಗಳ ಸಾಂಸ್ಕೃತಿಕ ಪರಿಸರ ಹಾಗೂ ಬೇರೆಡೆಯ ಕಾಲ ನಿರ್ಧಾರಿತ ವಸ್ತುಗಳೊಡನೆ ಇರುವ ಚಿತ್ರಗಳ ಹೋಲಿಕೆಯ ಸಂಬಂಧ ಹಾಗೂ ಚಿತ್ರಗಳ ತಾಂತ್ರಿಕ ಅಂಶಗಳಿಂದ ನಿರ್ಧರಿಸಲಾಗಿದೆ.

ನಿಗದಿತ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅನೇಕ ಕಲಾನೆಲೆಗಳನ್ನು ಶೋಧಿಸಲಾಯಿತು. ಚಿತ್ರಗಳ ಪ್ರಕಾರ, ವಿಷಯ, ಪ್ರಮಾಣ ವರ್ಣ ಮತ್ತು ತಾಂತ್ರಿಕ ಅಂಶಗಳನ ಬಗೆಗೆ ಟಿಪ್ಪಣಿ, ಛಾಯಾಗ್ರಹಣ, ರೇಖಾಪ್ರತಿ ಮಾಡಿಕೊಳ್ಳಲಾಯಿತು. ಚಿತ್ರಗಳ ನೆಲೆಯ ಸುತ್ತಲಿನ ಪರಿಸರದ ಪುರಾತತ್ವೀಯ ಪರಿಶೀಲನೆ ನಡೆಸಲಾಯಿತು.

## ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಶೀರ್ಷಿಕೆ ಸೂಚಿಸುವಂತೆ ಕೊಪ್ಪಳ ಹಂಪಿ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ. ಭೌಗೋಳಿಕವಾಗಿ ಈ ಪ್ರದೇಶ ಸುತ್ತಲಿನ ಇತರ ವಲಯಗಳಿಂದ ಭಿನ್ನಾವಾಗಿ ಪ್ರತ್ಯೇಕವೆನಿಸುತ್ತದೆ.

ಈ ಪ್ರದೇಶದಲ್ಲಿ ಅತ್ಯಧಿಕವಾಗಿ ಬೃಹತ್ ಶಿಲಾಯುಗದ ಶಿಲಾ ಸಮಾಧಿ ನೆಲೆಗಳು ಕಂಡುಬರುತ್ತವೆ. ಆದರೆ ಈ ಪ್ರದೇಶದ ಸುತ್ತ ಮುತ್ತಲಿನ ಬೆಟ್ಟ ಪರಿಸರಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ.

ಇದು ಇಲ್ಲಿಯ ಪ್ರಾಚೀನ ಸಂಸ್ಕೃತಿಯ ಜನಾಂಗದ ಸ್ವತಂತ್ರತೆಯನ್ನು ತೋರಿಸುತ್ತದೆ. ಅಲ್ಲದೇ ಈಗಾಗಲೇ ಕಂಡುಬಂದ ಚಿತ್ರಗಳು ಬೇರೆಡೆಯ ಚಿತ್ರಗಳಿಂದ ಭಿನ್ನವಾಗಿರುವವು. ವಿಶೇಷವಾಗಿ ಇಲ್ಲಿ ಹೆಚ್ಚಿಗೆ ವರ್ಣ ಚಿತ್ರಗಳು ಕಂಡುಬಂದಿರುವುದರಿಂದ ಈ ಪ್ರದೇಶವನ್ನು ಉತ್ತರ ಕರ್ನಾಟಕದಲ್ಲಿ ವರ್ಣಚಿತ್ರಗಳ ಕೇಂದ್ರ, ಸ್ಥಾನವೆಂದು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನ ಪ್ರಾದೇಶಿಕ ಮಿತಿಯಿಂದಾಗ ಸಂಸ್ಕೃತಿಯ ಅಪೂರ್ಣ ಗ್ರಹಿಕೆಯದಾಗದೇ ಪೂರ್ಣವಾಗುತ್ತದೆಂದು ಹೇಳಬಹುದು.

ಪ್ರಸ್ತುತ ಅಧ್ಯಯನದಲ್ಲಿ ಪ್ರಾಗಿತಿಹಾಸದ ಕಲೆಗೆ ಸಂಬಂಧಿಸಿದಂತೆ ಗವಿವರ್ಣ ಚಿತ್ರಗಳನ್ನು ಬಯಲು ಬಂಡೆ ರೇಖಾ ಹಾಗೂ ಕುಟ್ಟು ಚಿತ್ರಗಳನ್ನು ಪ್ರಧಾನವಾಗಿ ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಯನದ ಶೀರ್ಷಿಕೆ ಸೂಚಿಸುವಂತೆ ಇದು ಕೇವಲ ಪ್ರಾಗಿತಿಹಾಸ ಕಾಲ ಅಂದರೆ ಶಿಲಾಯುಗದಿಂದ ಇತಿಹಾಸ ಆರಂಭ ಕಾಲದವರೆಗಿನ ಚಿತ್ರಗಳಿಗೆ ಮುಖ್ಯವಾಗಿ ಸೀಮಿತವಾಗಿದೆ. ಜೊತೆಗೆ ನಂತರದ ಚಿತ್ರಗಳನ್ನು ಕೂಡ ಅಧ್ಯಯನ ದೃಷ್ಟಿಯಿಂದ ಪ್ರಾಸಂಗಿಕವಾಗಿ ಗಮನಿಸಲಾಗಿದೆ.

ಒಟ್ಟಿನಲ್ಲಿ ಕೊಪ್ಪಳ-ಹಂಪಿ ಪ್ರದೇಶದ ಗವಿವರ್ಣ ಹಾಗೂ ಬಯಲು ಬಂಡೆ ಚಿತ್ರಗಳಿಗೆ ಸಂಬಂಧಿಸಿದಂತೆ ಈ ಅಧ್ಯಯನದಿಂದ ಈ ಪ್ರದೇಶದ ಪ್ರಾಚೀನ ಮಾನವನ ಸಾಮಾನ್ಯ ಜೀವನ ಹಾಗೂ ಸಾಂಸ್ಕೃತಿಕ ಬದುಕಿನ ಸೂಕ್ಷ್ಮ ಅಂಶಗಳನ್ನು ಅರಿತುಕೊಳ್ಳಲು ಪ್ರಯತ್ನಿಸಲಾಗಿದೆ. ಹೀಗೆ ಮಾನವನ ಸಾಂಸ್ಕೃತಿಕ ವಿಕಾಸ ಕ್ರಮದಲ್ಲಿ ಅವನ ಸೃಜನ ಶೀಲತೆಯ ಮೊದಲ ಹೆಜ್ಜೆಗಳಲ್ಲಿಯ ಸತ್ವತೆ ಮತ್ತು ಪ್ರಸ್ತುತತೆಗೆ ಅದರ ಅಂತಃಸ್ಫೂರ್ತಿಯನ್ನು ಅರಿಯುವ ಆಶಯ ಈ ಅಧ್ಯಯನದ್ದಾಗಿದೆ.

**ಅಡಿಟಿಪ್ಪಣಿಗಳು**

೧. ಜಾನ್ ಜೂಲಿಯಸ್ ನಾರ್‌ವಿಚ್ (ಸಂ.), ೧೯೯೦, **ಆಕ್ಸ್‌ಫರ್ಡ್ ಇಲ್ಲುಸ್ಟ್ರೇಟೆಡ್ ಎನ್‌ಸೈಕ್ಲೋಪಿಡಿಯಾ ಆಫ್ ದಿ ಆರ್ಟ್ಸ್**, ಪು.೮೨.

೨. ಸುಂದರ ಅ., ೧೯೯೭, **ಕರ್ನಾಟಕದ ಚರಿತ್ರೆ** ಸಂ.೧, ಪು.೨೪೨-೮೨.

೩. ದಿ ಇಂಡಿಯನ್ ಆ್ಯಂಟಿಕ್ವರಿ, ೧೯೦೬.

೪. ಕೂಕ್‌ಬರ್ನ್, ಜೆ., ೧೯೮೩, *ಆನ್ ದಿ ರೀಸಂಟ್ ಎಕ್ಸಿಸ್ಟನ್ಸ್ ಆಫ್ ರೈನೊಸಾರಸ್ ಇಂಡಿಕಸ್ ಇನ್ ದಿ ನಾರ್ಥ್‌ವೆಸ್ಟರ್ನ್ ಪ್ರಾವಿಯನ್ಸ್, ಆ್ಯಂಡ್ ಎ ಡಿಸ್ಕ್ರಿಪ್‌ಷನ್ ಆಫ್ ಎ ಟ್ರೇಸಿಂಗ್ ಆಫ್ ಆ್ಯನ್ ಆರ್ಕಿಯಾಕ್ ರಾಕ್ ಪೆಯಿಂಟಿಂಗ್ ಫ್ರಾಮ್ ಮಿರ್ಜಾಪುರ ರಿಪ್ರೆಸೆಂಟಿಂಗ್ ದಿ ಹಂಟಿಂಗ್ ಆಫ್ ದಿಸ್ ಆ್ಯನಿಮಲ್*, **ಜೆಎಎಸ್‌ಬಿ** ಸಂ.೫೨, ಪು.೫೬-೬೪.

೫. ಫೂಟ್ ಆರ್.ಬಿ., ೧೯೧೬, "ದಿ ಫೂಟ್ ಕಲೆಕ್ಷನ್ ಆಫ್ ದಿ ಇಂಡಿಯನ್ ಪ್ರಿ ಹಿಸ್ಟಾರಿಕ್ ಆ್ಯಂಡ್ ಪ್ರೋಟೊ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್, ನೋಟ್ಸ್ ಆನ್ ದೇರ್ ಏಜಸ್ ಆ್ಯಂಡ್ ಡಿಸ್ಟ್ರಿಬ್ಯೂಷನ್" ಪುಟ ೮೭-೮೯

೬. ಸುಂದರ ಅ., ಅದೇ,

೭. ------"------ ೧೯೭೩, *ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳು,* ಕ.ಬಾ.೬-೧, ಪು.೬೪-೭೫.

೮. ------"------ ೧೯೭೫, ದಿ ಅರ್ಲಿ ಚೇಂಬರ್ ಟೂಂಬ್ಸ್ ಆಫ್ ಸೌಥ್ ಇಂಡಿಯಾ

೯. ------"------ ೧೯೭೬, *ಕೊಪ್ಪಳ ಇತಿಹಾಸ ಪೂರ್ವಕಾಲ,* ಗವಿದೀಪ್ತಿ, ಪು.೯೭-೧೧೬

ಅಧ್ಯಾಯ ೨

# ಪ್ರಾಗಿತಿಹಾಸ ಕಾಲದ ಕಲೆ : ಹಿಂದಿನ ಶೋಧನೆ, ಅಧ್ಯಯನ ಮತ್ತು ನೆಲೆಗಳು

೨.೧. ವಿಶ್ವದಲ್ಲಿ

೨.೨. ಭಾರತದಲ್ಲಿ

೨.೩. ಕರ್ನಾಟಕದಲ್ಲಿ

## ೨.೧. ವಿಶ್ವದಲ್ಲಿ

೧೮೩೭ರಲ್ಲಿ ಸರ್ ಜಾರ್ಜ್ ಗ್ರೇ ಅವರಿಂದ ಸಿಡ್ನಿ (ಆಸ್ಟ್ರೇಲಿಯಾ) ವರ್ಣಚಿತ್ರ ಗವಿಗಳ ಶೋಧನೆ ಪ್ರಪ್ರಥಮವಾದರೂ ಬಹುಶಃ ೧೮೭೯ರಲ್ಲಿ ಆಲ್ತಮಿರ(ಸ್ಪೇನ್) ದಲ್ಲಿಯ ವರ್ಣಚಿತ್ರಿತ ಗವಿಗಳ ಶೋಧನೆ,[೧] ಬಂಡೆ-ಗವಿ ಚಿತ್ರಗಳ ಶೋಧನೆ ಇತಿಹಾಸದಲ್ಲಿಯೇ ವಿಶೇಷವಾದುದು. ಸ್ವಾರಸ್ಯಕರವಾದುದು. ೧೮೭೫ರಲ್ಲಿ ಒಬ್ಬ ಹವ್ಯಾಸಿ ಪುರಾತತ್ವ ಶೋಧಕನು ಅಲ್ತಮಿರ ನೆಲೆಯ ಪ್ರದೇಶದ ಭೂ ಒಡೆಯನೂ ಆದ ಡಾಸೆ ಮಾಸೆಲಿನೊದ ಸೌತ್ ಪೊಲನು ಆಲ್ತಮಿರ ಗವಿಯಲ್ಲಿ ಕಪ್ಪು ಬಣ್ಣದ ಅಂಚಿನ ಚಿತ್ರಗಳನ್ನು ನೋಡಿದ್ದನು. ಆದರೆ ಆಗ ಅವನಿಗೆ ಅವು ಅಷ್ಟೇನೂ ಮಹತ್ವದ್ದಾಗಿ ಕಾಣಲಿಲ್ಲ. ಪ್ರಾಗೈತಿಹಾಸಿಕ ಕಾಲದ್ದೆಂದೂ ಅನಿಸಲಿಲ್ಲ. ಆನಂತರ ೧೮೭೮ರಲ್ಲಿ ಪ್ಯಾರಿಸ್‌ನಲ್ಲಿ ಒಂದು ಪುರಾತತ್ವ ಪ್ರದರ್ಶನವನ್ನು ನೋಡಿದನು. ಅಲ್ಲಿ ದೋರ್ದೋಜ್ಞೆ (ಫ್ರಾನ್ಸ್) ದಲ್ಲಿಯ ಒಂದು ಕಲ್ಲಾಸರೆಯಲ್ಲಿ ದೊರೆತ ಪ್ರಾಗೈತಿಹಾಸಿಕ ಕಾಲದ ಬೇಟೆಯಾಡುವ ಜನವರ್ಗದ ಆಯುಧಗಳು ಮತ್ತು ಊರಿ ಬಿಡಿಸಿದ ರೇಖಾಚಿತ್ರಗಳನ್ನುಳ್ಳ ಉಪಕರಣಗಳು ಅವನನ್ನು ಆಕರ್ಷಿಸಿದವು. ತನ್ನ ಪ್ರಾಂತ್ಯಕ್ಕೆ ಹಿಂದಿರುಗಿದ ಮೇಲೆ ಅವನು ಹೆಚ್ಚಿನ ಉತ್ಸಾಹದಿಂದ, ತಿಳುವಳಿಕೆಯಿಂದ ತಾನು ಹಿಂದೆ ನೋಡಿದ್ದ ಗವಿಗಳನ್ನು ಮತ್ತೆ ಶೋಧಿಸಲು ಆರಂಭಿಸಿದನು. ಆ ಸಮಯದಲ್ಲಿ ಚಿತ್ರಗಳ ಶೋಧನೆಯು ಒಂದು ಕಥೆಯೇ ಸರಿ. ಅನ್ವೇಷಣೆಯ ಕಾಲದಲ್ಲಿ ಅವನ ಚಿಕ್ಕ ಮಗಳು ಜೊತೆಗಿದ್ದಳು. ಒಮ್ಮೆ ಅವನು ಗವಿಯ ಪ್ರದೇಶದಲ್ಲಿ ಆಗೆಯುತ್ತಿರುವಾಗ ಆ ಹುಡುಗಿಯು ಸಹಜವಾಗಿ ಹುಡುಗಾಟಿಕೆಯಿಂದ ಬಂಡೆಯ ಮೇಲೆ ಬರೆದ ಗೂಳಿಗಳ ಚಿತ್ರಗಳನ್ನು ನೋಡಿ ಆಶ್ಚರ್ಯದಿಂದ ತೋರೊ,ತೋರೊ..... (ಗೂಳಿಗಳು) ಎಂದು ಕೂಗಿಕೊಂಡಳು. ಕೂಡಲೇ ತಂದೆಯೂ ಗವಿಯೊಳಗೆ ಹೋಗಿ ಆ ಕುತೂಹಲಕಾರಿ ಯಾದ ದೊಡ್ಡ ದೊಡ್ಡ ಬಲಿಷ್ಠ ಕೋಣಗಳ ಚಿತ್ರಗಳನ್ನು ನೋಡಿ ಪುಳಕಿತನಾದನು. ತನ್ನ ಅಗೆತದಲ್ಲಿ ದೊರೆತ ಕಲ್ಲಿನ ಉಪಕರಣಗಳನ್ನು ಮಾಡಿದ ಜನರೆ ಆ ಚಿತ್ರಗಳನ್ನು ಬಿಡಿಸಿರುವರೆಂದು ತರ್ಕಿಸಿ ಅವುಗಳ ಬಗೆಗೆ ೧೮೮೦ರಲ್ಲಿ ಒಂದು ಲೇಖನವನ್ನು ಪ್ರಕಟಿಸಿದನು. ಆದರೆ ಅವನಿಗೆ ನಿರಾಶೆ ಕಾದಿತ್ತು.

ಗತಕಾಲದ ಸಸ್ಯ ಪ್ರಾಣಿಪಡಿಯಚ್ಚು ಶಾಸ್ತ್ರದಲ್ಲಿ ನಿಷ್ಣಾತನಾದ ಫ್ರೆಂಚ್ ಶಾಸ್ತ್ರಜ್ಞನೊಬ್ಬನು ಆ ಚಿತ್ರಗಳು ಪ್ರಾಗೈತಿಹಾಸಿಕ ಕಾಲದ್ದಲ್ಲವೆಂದು ವಾದಿಸಿದನು. ಇತರ ಪುರಾತತ್ವ ಶಾಸ್ತ್ರಜ್ಞರೂ ಇವನ ಅಭಿಪ್ರಾಯವನ್ನು ಅನುಮೋದಿಸಿದರು. ಅವೆಲ್ಲ ಯಾರೋ ಕಲಾಭ್ಯಾಸಿ ಹುಡುಗರು ಇಲ್ಲ ರೋಮ್ ದೇಶದ ಸೈನಿಕ ತುಕಡಿಗಳು ಅಲ್ಲೆಲ್ಲಾದರೂ ಬಿಡಾರ ಹೂಡಿದ್ದಾಗ ಈ ಚಿತ್ರಗಳನ್ನು ಬಿಡಿಸಿದ್ದಿರಬೇಕೆಂದು ಊಹಿಸಿದರು. ಅದು ಅಷ್ಟಕ್ಕೆ ನಿಲ್ಲಲಿಲ್ಲ. ಮಾರ್ಸೆಲಿನೋ ಅವುಗಳನ್ನು ತಾನೇ ಬಿಡಿಸಿ ಪ್ರಾಗೈತಿಹಾಸಿಕ ಕಾಲದ್ದೆಂದು ಹೇಳಿ ಪಂಡಿತರನ್ನು ಮೋಸಗೊಳಿಸುತ್ತಿರುವನೆಂದು ಸಂಶಯಪಟ್ಟರು. ಬಹುಶಃ ಈ ತಜ್ಞರು ತಮ್ಮ ದೇಶದ ದೋರ್ದೋಜ್ಞೆಯ ಶೋಧನೆಗಳ ಹಿರಿಮೆಯು ಮೇಲುಗೈಯಾಗಿರಬೇಕೆಂದು ಪಕ್ಷಪಾತ ಬುದ್ಧಿಯಿಂದ ಕ್ರಮಬದ್ಧವಾಗಿ ಮಾರ್ಸೆಲಿನೊನ ಶೋಧನೆಗಳನ್ನು ಆ ರೀತಿ ಅವಹೇಳನ ಮಾಡಿದರೆಂಬ ಅಭಿಪ್ರಾಯವಿದೆ. ಆದರೆ ಸತ್ಯವನ್ನು ಬಹುಕಾಲ ಮುಚ್ಚಿಡಲು ಸಾಧ್ಯವಿಲ್ಲ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಫ್ರಾನ್ಸ್‌ನಲ್ಲಿಯೂ ಅಲ್ತಮಿರ ತರಹದ ಶಿಲಾಯುಗದ ವರ್ಣಚಿತ್ರಗಳು ಶೋಧಿಸಲ್ಪಟ್ಟವು. ಇವುಗಳಲ್ಲಿ ಕಾಡು ಕೋಣ, ದೊಡ್ಡ ಗಾತ್ರದ ಜಿಂಕೆ, ಖಡ್ಗಮೃಗಗಳಿದ್ದವು. ಅಲ್ತಮಿರ ಚಿತ್ರಗಳಿಗೆ ಬಹುಮಟ್ಟಿಗೆ ಹೋಲುತ್ತಿದ್ದವು. ಆದ್ದರಿಂದ ತಜ್ಞರು ಅನಿವಾರ್ಯವಾಗಿ ಅಲ್ತಮಿರ ಚಿತ್ರಗಳ ಕಡೆಗೆ ಮತ್ತೆ ಗಮನಹರಿಸಬೇಕಾಯಿತು. ಎಮಿಲೆ ಕಾರ್ಥೈಲ್ಯಾಕ್ ಮತ್ತು ಹೆನ್ರಿ ಬ್ರಾಲ್ ಅವರುಗಳು ೧೯೦೧ರಲ್ಲಿ ಆಲ್ತಮೀರ ಚಿತ್ರಗಳನ್ನು ಮತ್ತೆ ಪರಿಶೀಲಿಸಿದರು. ಮಾರ್ಸೆಲಿನೋ ಅಭಿಪ್ರಾಯಗಳು ಸರಿಯೆಂದು ಹೇಳಿದರು. ಆದರೆ ಅಷ್ಟರೊಳಗೆ ಮಾರ್ಸೆಲಿನೋ ತೀರಿಕೊಂಡಿದ್ದರು. ಈಗ ಆಲ್ತಮಿರ ವರ್ಣಚಿತ್ರಗಳಿಗೆ ಜಗತ್ಪ್ರಸಿದ್ಧವಾಗಿದೆ.[೨] ಹೀಗೆ ಪ್ರಾಗಿತಿಹಾಸ ಕಾಲದ ಕಲೆಯ ನೆಲೆಯಾದ ಸ್ಪೇನಿನ ಆಲ್ತಮಿರ ಗವಿಯ ಶೋಧನೆಯು ಪ್ರಾಗಿತಿಹಾಸಕಾಲದ ಕಲೆಯ ಬಗೆಗೆ ಗಮನ ಸೆಳೆಯಲು ಕಾರಣವಾಯಿತು. ಒಂದು ರೀತಿಯಲ್ಲಿ ಈ ಗವಿಯ ಶೋಧನೆಯು ಪ್ರಥಮ ದಾಖಲೆಯೆನ್ನಬಹುದು. ಅದನ್ನು ಮೊದಲ ಬಾರಿಗೆ ಬೆಳಕಿಗೆ ತಂದ ಕೀರ್ತಿ ಮಾರ್ಸಲಿನೊದ ಸೌತಪೊಲನಿಗೆ ಸಲ್ಲುತ್ತದೆ.

೧೯೦೩ರಲ್ಲಿ ಜೆ ಕಾರ್‌ಬ್ರೆ ಆಗುಲೊ ಎಂಬ ಫೋಟೋಗ್ರಾಫರನು ಪೂರ್ವ ಸ್ಪೇನಿನ ಕಾಲಾಪತದ ವರ್ಣಚಿತ್ರಗಳನ್ನು ನೋಡುವ ಅವಕಾಶ ಪಡೆದನಾದರೂ ಅವನಿಗೆ ತನ್ನ ಶೋಧನೆಯ ಮಹತ್ವದ ಬಗ್ಗೆ ಅರಿವಿರಲಿಲ್ಲ. ಆದರೆ ೧೯೦೭ರಲ್ಲಿ ಬ್ರೆವುಲ್‌ನು ಈ ಚಿತ್ರಗಳನ್ನು ಬೆಳಕಿಗೆ ತಂದನು. ಇತ್ತೀಚೆಗೆ ರಿಬಾಡೆಸಲ್ಲಾ ಪ್ರದೇಶದಲ್ಲಿ ಅನೇಕ ವರ್ಣಚಿತ್ರಿತ ಗವಿಗಳು ಮತ್ತು ಕೊರೆದ ಚಿತ್ರಗಳು ಬೆಳಕಿಗೆ ಬಂದಿವೆ.[೩]

ಫ್ರಾನ್ಸ್ : ೧೮೮೫ರಲ್ಲಿ ಈ ರಿವಿರೆ ಎಂಬವನು ದೋರ್ದೋಜ್ಞೆ ವಿಭಾಗದ ಲಾ ಮೌತ್‌ಗವಿಯಲ್ಲಿ ಕೊರೆದ ಮತ್ತು ವರ್ಣಚಿತ್ರಗಳನ್ನು ಶೋಧಿಸಿದನು. ಮರುವರ್ಷ ದೋರ್ದೋಜ್ಞೆಯ ಬಲ ಭಾಗದ ಫೇರ್-ನಾನ್ ಫೇರ್ ಎಂಬ ಗವಿಯಲ್ಲಿ ಕೊರೆದ ಪ್ರಾಣಿಗಳ ಚಿತ್ರಗಳು ಪತ್ತೆಯಾದವು. ೧೯೦೧ರಲ್ಲಿ ಹೆಚ್ ಬ್ರೆವುಲ್‌ನು ಲಾ ಕ್ಯಾಪ್ಟನ್ ಮತ್ತು ದ ಪೆರೋನಿಯವರೊಂದಿಗೆ ಕೂಡಿಕೊಂಡು ಲಾ ಕಾಂಬರೆಲಾ ಮತ್ತು ಫಾಂಟ್ ಡಿ ಗಾಮ್ ಎಂಬ ಗವಿಗಳನ್ನು ಶೋಧಿಸಿದರು. ಲಾ ಕಾಂಬೆರಲಾ ಗವಿಯು ಸುಮಾರು ೬೨೦ ಅಡಿಗಳಷ್ಟು ಉದ್ದವಿದೆ. ಆದರೆ ಅದರಲ್ಲಿ ೩೦೦ ಅಡಿಗಳ ನಂತರ ಚಿತ್ರಗಳು ಕಂಡುಬರುತ್ತವೆ. ಫಾಂಟ್ ಡಿ ಗಾಮ್ ಗವಿಯು ಬ್ಯೂನ್ ನದಿಯ ದಡದಲ್ಲಿದೆ. ಗವಿಯ ಗೋಡೆ, ಛಾವಣಿಯ ಮೇಲೆ ರೇಖಾ ಮತ್ತು ವರ್ಣಚಿತ್ರಗಳು ಕಂಡುಬರುತ್ತವೆ. ಪ್ರಾಗಿತಿಹಾಸ ಚಿತ್ರಕಲೆಯಲ್ಲಿ ಸಾಮಾನ್ಯವಾಗಿ ಚಿತ್ರಿತವಾಗಿರುವ ಎಲ್ಲ ಬಗೆಯ ಪ್ರಾಣಿಗಳ ಚಿತ್ರಗಳು ಈ ಗವಿಯಲ್ಲಿವೆ. ಕುದುರೆಗಳ ರೇಖಾಚಿತ್ರಗಳನ್ನು ಬರೆದು, ಆ ರೇಖೆಗಳ ಮೇಲೆ ಕೆಂಪುಬಣ್ಣದ ಪಟ್ಟೆಗಳನ್ನು ಎಳೆಯಲಾಗಿದೆ. ಇದಲ್ಲದೇ ಕಾಡುಕೋಣ, ಜಿಂಕೆಗಳು ಮತ್ತು ರೇನ್‌ಡೀರ್ ಪ್ರಾಣಿಗಳ ಚಿತ್ರಗಳು ಕೆಂಪು, ಕಪ್ಪು, ಕಂದು ಮುಂತಾದ ಬಣ್ಣಗಳಲ್ಲಿಯೂ ಮತ್ತು ಅವುಗಳ ಮಿಶ್ರವರ್ಣಗಳಲ್ಲಿಯೂ ಛಾಯಾ ಪದ್ಧತಿಯಲ್ಲಿಯೂ ಚಿತ್ರಿಸಿದ್ದಾರೆ. ಎಡಪಾರ್ಶ್ವದಲ್ಲಿ ಗೋಡೆಗಳ ಮೇಲೆ ಬಹುಸೂಕ್ಷ್ಮವಾದ ರೇಖೆಗಳಿಂದ ಮ್ಯಾಮತ್ ಪ್ರಾಣಿಗಳ ಚಿತ್ರಗಳನ್ನು ಬರೆದು ಅವುಗಳ ಕೂದಲು ಮುಂತಾದ ವಿವರಗಳನ್ನು ರೇಖೆಗಳಲ್ಲಿಯೇ ಚಿತ್ರಿಸಿದ್ದಾರೆ. ಬಹುವರ್ಣಚಿತ್ರಿತ ಗವಿಯಾದ ಲಾಸ್‌ಕಾಕ್ಸನ್ನು ೧೯೪೦ರಲ್ಲಿ ಶೋಧಿಸಲಾಯಿತು. ೧೯೫೬ರಲ್ಲಿ ಫ್ರಾನ್ಕೊ ಕಾಂಟಾಬ್ರಿಯಾನ್ ಪ್ರದೇಶದ ದೋರ್ದೋಜ್ಞೆ ರಾಫಿಗ್ನಾಕ್ ಗವಿಯು ಬೆಳಕಿಗೆ ಬಂದಿತು. ಸ್ಪ್ಯಾನಿಷ್ ಲೆವೆಂಟ್ ಕೊಗುಲ್ ನೆಲೆಗಳ ಚಿತ್ರಗಳನ್ನು ೧೯೦೮ರಲ್ಲಿ ದಾಖಲು ಮಾಡಿಕೊಳ್ಳಲಾಯಿತು. ಅದೇ ರೀತಿ ೧೯೧೦ರಲ್ಲಿ ಅಲ್ಪೇರಾವನ್ನು, ೧೯೧೪ರಲ್ಲಿ ಮಿನಾಟೆಡಾವನ್ನು, ೧೯೧೬ರಲ್ಲಿ ಮೊರೆಲ್ಲಾ ಲಾ ವೆಲ್ಲಾ ಮತ್ತು ವಲ್ಟೊರ್ತಾ ಗೋರ್ಗೆನ್‌ನ ೧೫ ಕಲ್ಲಾಸರೆಗಳ ಚಿತ್ರಗಳನ್ನು ದಾಖಲು ಮಾಡಿಕೊಳ್ಳಲಾಯಿತು.

ಇಟಲಿ : ಈ ದೇಶದಲ್ಲಿ ಹಿಮಯುಗದ ಕೊರೆದ ಚಿತ್ರಗಳನ್ನೊಳಗೊಂಡಿರುವ ರಮನೆಲ್ಲಿ ಗವಿಯು ೧೯೦೪ರಲ್ಲಿ ಶೋಧಿಸಲ್ಪಟ್ಟಿತು. ೧೯೪೯ರಲ್ಲಿ ಲೆವೆನ್ಜೊ ನಡುಗಡ್ಡೆಯಲ್ಲಿ ಮತ್ತೊಂದು ಗವಿಯು ಪತ್ತೆಯಾಯಿತು. ಪ್ರಾಗಿತಿಹಾಸ ಕಾಲದ ಚಿತ್ರಗಳ ಶೋಧನೆ ಅಧ್ಯಯನ ರಕ್ಷಣೆ ಮತ್ತು ಪ್ರಕಟಣೆಗೋಸ್ಕರ ೧೯೬೪ರ ಆಗಸ್ಟ್ ೩ರಂದು ಇಟಲಿಯ ಕಸದಿ ಪೊಂತ (ಬ್ರೀಸಿಯ ಪ್ರಾಂತ್ಯ) ಎಂಬಲ್ಲಿ ಸಂತ್ರೊ ಕಮ್ಯೂನೊ “ದಿ ಸ್ಟಡಿ ಪ್ರಿ ಹಿಸ್ಟಾರಿಟಿ ವಾಲ್ಕಮೊನಿಕ” ಎಂಬ ಒಂದು ಅಂತರರಾಷ್ಟ್ರೀಯ ಸಂಶೋಧನ

ಸಂಸ್ಥೆಯನ್ನು ತೆರೆಯಲಾಯಿತು. ಈ ಸಂಸ್ಥೆಯು ವಾಲ್ಕಮೊನಿಕ ಬೆಟ್ಟದಲ್ಲಿಯ ಸುಮಾರು ೧,೩೦,೦೦೦ ಬಂಡೆ ಚಿತ್ರಗಳನ್ನು ಶೋಧಿಸಿ ವಿಶ್ಲೇಷಿಸಿ ಪ್ರಕಟಿಸಿದೆ.[೪]

**ಆಫ್ರಿಕ :** ಉತ್ತರ ಆಫ್ರಿಕಾದಲ್ಲಿ ೧೮೪೭ರ ಸಂದರ್ಭದಲ್ಲಿ ಥೆಯಾಟ್, ಮೊಘರ್ ಮತ್ತು ತಹ್ತಾನಿ ಬೆಟ್ಟಗಳ ಕೊರೆದ ಚಿತ್ರಗಳು ಮೊದಲ ಬಾರಿಗೆ ಗಮನಿಸಲ್ಪಟ್ಟ ವರದಿಗಳಿವೆ.[೫] ಆದರೆ ಆಫ್ರಿಕಾದ ಪ್ರಾಗಿತಿಹಾಸ ಕಲೆಯ ಕುರಿತಾಗಿ ೧೯೨೧ರಲ್ಲಿ ಜಿ.ಬಿ.ಎಮ್ ಫ್ಲೆಮಂಡನು ಪ್ರಕಟಿಸಿದ ಕೃತಿ ಮೊದಲನೆಯದೆನ್ನಬಹುದು.[೬] ದಕ್ಷಿಣ ಮಗರೆಬ್ ಮತ್ತು ಟ್ಯುನಿಶಿಯಾಗಳ ವರ್ಣಚಿತ್ರಗಳನ್ನು ಗಾರ್ಡೆಲ್‌ರವರು ಶೋಧಿಸಿದ್ದು, ಅವನ್ನು ಕುರಿತು ಎಚ್.ಬ್ರೆವುಲ್ ಡ್ಯುರ್ಯಾಂಡ್ ಮತ್ತು ಲಾವ್ಯಾವುದೆನ್ ರವರು ಅಧ್ಯಯನ ನಡೆಸಿ ೧೯೨೬ರಲ್ಲಿ ಕೃತಿಯೊಂದನ್ನು ಹೊರತಂದರು. ೧೯೫೪ರಲ್ಲಿತಾಸ್ಸಿಲಿನ ಅಜ್ಜೆರ್‌ನ ಚಿತ್ರಗಳ ಸಮಗ್ರ ಅಧ್ಯಯನ ಗ್ರಂಥವನ್ನು ಬ್ರೆವುಲ್ ಮತ್ತು ಎಚ್ ಲ್ಹೊಟೆಯವರು ಪ್ರಕಟಿಸಿದರು. ೧೯೨೫ರಲ್ಲಿ ಎಲ್.ಫ್ರೊಬೆನಿಯಸ್ ಮತ್ತು ಎಚ್.ಒಬೆರ್‌ಮೆಯರ್‌ರವರು ಸಹರಾದ ಕೊರೆದ ಚಿತ್ರಗಳ ಶೈಲಿ ಮತ್ತು ತಂತ್ರಗಳ ಕುರಿತಾಗಿ ಅಧ್ಯಯನ ಕೈಗೊಂಡರು. ಅದೇ ರೀತಿ ನುಬಿಯನ್ ಮತ್ತು ಲಿಬಿಯ ಮರುಭೂಮಿಯ ಬಂಡೆಚಿತ್ರಗಳನ್ನು(ಕೊರೆದ ಚಿತ್ರ) ೧೯೭೨ರಲ್ಲಿ ಜೆ ಶೆವಿನ್‌ಫೋರ್ಥ್, ೧೯೨೬ರಲ್ಲಿ ಜೆ.ಡೆ.ಮೋರ್ಗನ್ ಮತ್ತು ೧೯೨೮ರಲ್ಲಿ ಬ್ರೆವುಲ್ ಅಧ್ಯಯನ ನಡೆಸಿದರು.

೧೯೩೦ ಮತ್ತು ೧೯೩೫ರ ಅವಧಿಯಲ್ಲಿ ಅನೇಕ ವಿದ್ವಾಂಸರು ಈಜಿಪ್ತ ಮತ್ತು ಲಿಬಿಯಾಗಳಲ್ಲಿ ಗವಿಚಿತ್ರಗಳನ್ನು ಬೆಳಕಿಗೆ ತಂದರು. ೧೯೩೮ರಲ್ಲಿ ಇವುಗಳ ಕುರಿತಾಗಿ ಎಚ್.ಎ.ವಿಂಕ್ಲರ್ ವಿಸ್ತೃತವಾದ ಅಧ್ಯಯನ ನಡೆಸಿದರು. ಅಬಿಸ್ಸಿನಿಯಾ, ಸುಡಾನ್, ಅಂಗೋಲಾ ಮತ್ತು ತಾಂಜಾನಿಯಾ ದೇಶಗಳಲ್ಲಿ ಬ್ರೆವುಲ್, ಮೊನ್‌ಫ್ರೆಂಡ್ ಮತ್ತು ಜೆಲ್ಟ್ನೆರ್‌ರವರು ಗವಿವರ್ಣಚಿತ್ರಗಳನ್ನು ಶೋಧಿಸಿದರು.

ದಕ್ಷಿಣ ಆಫ್ರಿಕಾ ದೇಶವು ಆಫ್ರಿಕಾದ ಬಂಡೆಗಲ್ಲು ಚಿತ್ರಕಲೆಯು ಶ್ರೀಮಂತ ವಲಯವಾಗಿದೆ. ೧೮೯೯ರಲ್ಲಿ ಮೊಲಿನೆಕ್ಸ್‌ರವರು ದಕ್ಷಿಣ ರೂಡೋಸಿಯಾದಲ್ಲಿ ಚಿತ್ರಗಳನ್ನು ಪ್ರಕಟಿಸಿದರು.[೭] ಈ ಪ್ರದೇಶದಿಂದ ಮತ್ತಷ್ಟು ಚಿತ್ರಗಳು ೧೮೯೯ ರಿಂದ ೧೯೧೨ರ ಅವಧಿಯಲ್ಲಿ ಎಲೆಸ್, ಬೌನ್, ವೈಟ್, ಮೆನ್ನೆಲ್, ಕಬ್ಬ್ ಮತ್ತು ಜಲ್ಲಿಯವರಿಂದ ಪ್ರಕಟಗೊಂಡವು. ೧೯೫೫ರಲ್ಲಿ ಮೊಜಾಂಬಿಕ್‌ನ ಸೆರ್ರಾ ವವುಂಬಾದ ಚಿತ್ರಿತ ಗವಿಗಳನ್ನು ಕಾರವಲ್ಹೊ ಕಂಡುಹಿಡಿದರು. ೧೮೯೨ರಲ್ಲಿ ಜೆ. ಬ್ರಾಡ್‌ಶೋರವರು ೧೯೧೧ರಲ್ಲಿ ಜಿ.ಓರ್‌ರವರು ಉತ್ತರ ಕಿಂಬರ್ಲಿಯ ಸೂಕ್ಷ್ಮ ಚಿತ್ರಗಳ ಬಗೆಗೆ ಅಧ್ಯಯನ ನಡೆಸಿದರು. ಇ.ಎ.ವೊಮ್ಸ್ ಎಂಬುವರು ೧೯೫೫ರಲ್ಲಿ ಉತ್ತರ ಕಿಂಬರ್ಲಿಯಲ್ಲಿ ಮತ್ತಷ್ಟು ಚಿತ್ರಗಳನ್ನು

ಶೋಧಿಸಿದರು. ಈ ಹೊಲ್ಮ್ ಮತ್ತು ಎಚ್.ಕೂಟೆಯವರು ದಕ್ಷಿಣ ಆಫ್ರಿಕಾದ ಚಿತ್ರಗಳ ಬಗೆಗೆ ವಿಶ್ಲೇಷಣಾತ್ಮಕವಾದ ಗ್ರಂಥಗಳನ್ನು ಪ್ರಕಟಿಸಿದ್ದಾರೆ.[೮] ೧೯೪೫ ರಿಂದಲೂ "ಸೌತ್ ಆಫ್ರಿಕನ್ ಆರ್ಕಿಯಾಲಜಿಕಲ್ ಬುಲೆಟಿನ್"ನ ಪ್ರತಿ ಸಂಚಿಕೆಯಲ್ಲೂ ಆಫ್ರಿಕಾದಲ್ಲಿ ಪತ್ತೆಯಾದ ಹೊಸ ಕಲಾನೆಲೆಗಳ ಬಗೆಗೆ ಮಾಹಿತಿ ಪ್ರಕಟವಾಗುತ್ತಲಿದೆ. ಕೇನ್ಯಾ ಮೂಲದ ಡೇವಿಡ್ ಕೌಲಸನ್‌ರವರು "ಆಫ್ರಿಕನ್ ರಾಕ್ ಆರ್ಟ್ ಟ್ರಸ್ಟ್" ಸ್ಥಾಪಿಸಿದ್ದು, ಅಲೆಕ್ ಕ್ಯಾಂಬೆಲ್ ಜೊತೆಗೂಡಿ ಪ್ರಾಗಿತಿಹಾಸ ಕಲೆಯ ಕುರಿತ ಪುಸ್ತಕ ಪ್ರಕಟಿಸುತ್ತಿದ್ದಾರೆ.[೯] ದಕ್ಷಿಣ ಆಫ್ರಿಕಾದ ರೋಪೇಸಿಯೊ ಪ್ರಾಂತ್ಯದಲ್ಲಿರುವ ಬಾಂಬಾಟ್ ಗವಿಯಲ್ಲಿ ಅನೇಕ ಚಿತ್ರಗಳಿವೆ. ಇವುಗಳನ್ನು ಹಳದಿ ಮತ್ತು ಬಿಳಿಯ ಬಣ್ಣಗಳಿಂದ ಚಿತ್ರಿಸಲಾಗಿದೆ. ಈ ಚಿತ್ರಗಳು ಫ್ರಾನ್ಸ್ ಮತ್ತು ಸ್ಪೈನಿನ ಗವಿಚಿತ್ರಗಳಷ್ಟು ಉತ್ತಮವಾಗಿಲ್ಲ. ಟಾಂಗಾನೀಕಾ ಪ್ರಾಂತ್ಯದ ಬೆಟ್ಟಗಳ ಕಲ್ಲಾಸರೆಗಳಲ್ಲಿ ಕೂಡ ಜಿರಾಫೆ ಮತ್ತಿತರ ಪ್ರಾಣಿಗಳ ಚಿತ್ರಗಳಿವೆ. ಇವುಗಳ ಕತ್ತು ಶರೀರ ಸಮಪ್ರಮಾಣದಲ್ಲಿದ್ದರೂ ಕಾಲುಗಳು ಅಸಮರ್ಪಕವಾಗಿ (ತೀರ ಸಣ್ಣಗಿವೆ) ಇವೆ. ಟ್ರಾನ್ಸವಲ್ ಪ್ರಾಂತ್ಯದಲ್ಲಿ ಬಂಡೆಯಲ್ಲಿ ಕೊರೆದ ಚಿತ್ರಗಳು ಕಂಡುಬರುತ್ತವೆ. ಅಲ್ಜೀರಿಯಾದ ಪಶ್ಚಿಮ ಗಡಿಯಿಂದ ಅಟ್ಲಾಸ್ ಪರ್ವತ ಶ್ರೇಣಿಯವರೆಗಿನ ಮತ್ತು ನೈರುತ್ಯ ಭಾಗದ ಒರಸ್ ಮನಿಫ್ ಪ್ರದೇಶಗಳಲ್ಲಿ ಪ್ರಾಚೀನ ಶಿಲಾಚಿತ್ರಗಳು ಕಂಡುಬಂದಿವೆ. ಆಯಿನ್ ಸೆಫ್ರ ಪಟ್ಟಣಕ್ಕೆ ಹತ್ತು ಕಿ.ಮೀ. ಪೂರ್ವಕ್ಕಿರುವ ತಿಯೌಟನಲ್ಲಿ ಬಿಲ್ಲುಬಾಣ ಹಿಡಿದ ಬೇಟೆಗಾರರು ಸಿಂಹ, ಜಿಂಕೆ ಹಾಗು ಉಷ್ಟ್ರಪಕ್ಷಿಗಳನ್ನು ಬೆನ್ನಟ್ಟಿರುವ ಚಿತ್ರಗಳು ದೊರೆತಿವೆ. ಅದೇ ಪಟ್ಟಣದಿಂದ ಅರವತ್ತು ಕಿ.ಮೀ.ದೂರದಲ್ಲಿರುವ ಬಿಲ್ಲಾಸ್ಡ್ ಪಟ್ಟಣದಲ್ಲಿ ಕಲ್ಲಿನ ಬಂಡೆಯಲ್ಲಿ ಕೊರೆದಿರುವ ಕೋಣ ಮತ್ತು ಎರಡು ಜಿಂಕೆಗಳ ಚಿತ್ರಗಳು ಈಚೆಗೆ ಕಂಡುಬಂದಿವೆ. ಆಯಿನ್ ಸೆಫ್ರದಿಂದ ಅಸ್ಲಾಕ್ಕೆ ಹೋಗುವ ರಸ್ತೆಯ ಪಕ್ಕದ ಬಂಡೆಯಲ್ಲಿ ಆನೆಗಳ ಮೆರವಣಿಗೆ ದೃಶ್ಯವನ್ನು ಕೆತ್ತಲಾಗಿದೆ. ದೊಡ್ಡ ಕೊಂಬಿನ ಕೋಣಗಳ ಚಿತ್ರಗಳು ಇಲ್ಲಿವೆ. ಮತ್ತೊಂದು ಗಮನಾರ್ಹ ಚಿತ್ರವೆಂದರೆ ಆಯಿನ್ ಸೆಫ್ರಾದ ಸನಿಹದಲ್ಲೇ ಇರುವ ಆನೆಯ ಚಿತ್ರ. ಇಲ್ಲಿ ಬೃಹತ್ ಬಂಡೆಯನ್ನು ಉಜ್ಜಿ ನುಣುಪುಗೊಳಿಸಿ ಅದರ ಮೇಲೆ ಸುಮಾರು ಎರಡು ಮೀಟರ್ ಎತ್ತರದ ಆನೆಯ ಚಿತ್ರವನ್ನು ಕೊರೆದಿದ್ದಾರೆ. ಆದರೆ ಬಂಡೆ ಕುಸಿದುಬಿದ್ದು ಚಿತ್ರದ ಮೇಲ್ಭಾಗ ಹಾನಿಗೊಂಡಿದೆ.[೧೦]

ಉತ್ತರ ಆಫ್ರಿಕಾದ ಸಹಾರ ಮರುಭೂಮಿಯ ಸರೋವರ ತೀರದ ಬಂಡೆಗಳಲ್ಲಿ ಜಿರಾಫೆ, ಸಿಂಹ, ದನ, ಮನುಷ್ಯ ಮುಂತಾದ ಪ್ರಾಣಿಗಳ ಚಿತ್ರಗಳು ಕೆತ್ತಲ್ಪಟ್ಟಿವೆ. ಜಿರಾಫೆ ಚಿತ್ರಗಳು ನೈಜ ಪ್ರಮಾಣದಲ್ಲಿವೆ. ಮನುಷ್ಯ ಚಿತ್ರಗಳು ನಗ್ನವಾಗಿದ್ದು ಮೈಮೇಲೆ ಅನೇಕ ಅಡ್ಡ ಉದ್ದ ರೇಖೆಗಳಿವೆ.

ಕೆಲವು ಕಲ್ಲಾಸರೆ, ಗವಿಗಳಲ್ಲಿ ಮನುಷ್ಯ ಮತ್ತು ಪ್ರಾಣಿಗಳ ವರ್ಣಚಿತ್ರಗಳಿವೆ. ಬಂಡೆಗಳಲ್ಲಿ ದೊಡ್ಡ ಪ್ರಮಾಣದ ಕುಟ್ಟು ಚಿತ್ರಗಳು ಇವೆ.[೧೧]

**ಆಸ್ಟ್ರೇಲಿಯಾ :** ಉತ್ತರ ಆಸ್ಟ್ರೇಲಿಯಾದ ಮಧ್ಯಭಾಗದಲ್ಲಿ ೧೯೫೫ರಲ್ಲಿ ಇ.ಎ.ವಾರ್ಮ್ಸ್‌ರವರು ಚಿತ್ರಗಳನ್ನು ಶೋಧಿಸಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ "Austaralian Institute of Aboriginal Studies" ಕಲಾನೆಲೆಗಳ ಗುರುತಿಸುವಿಕೆ ಮತ್ತು ಚಿತ್ರಗಳ ದಾಖಲಾತಿಯಲ್ಲಿ ತೀವ್ರ ಆಸಕ್ತಿಯನ್ನು ವಹಿಸುತ್ತಿದೆ.[೧೨]

**ಸ್ವಿಡ್ಜರ್‌ಲ್ಯಾಂಡ್ :** ೧೯೭೭ರಲ್ಲಿ ಸ್ವಿಡ್ಜರ್‌ಲ್ಯಾಂಡ್‌ನಲ್ಲಿ ""Society for Comparative Rock Art Studies" ಎಂಬ ಸಂಸ್ಥೆಯನ್ನು ಜಾಗತಿಕ ಬಂಡೆ ಚಿತ್ರಗಳ ಅಧ್ಯಯನಕ್ಕಾಗಿ ಸ್ಥಾಪಿಸಲಾಗಿದೆ. ವಿಶೇಷವಾಗಿ ಇಂಡೋ ಯುರೋಪಿಯನ್ ಬಂಡೆ ಚಿತ್ರಗಳ ಅಧ್ಯಯನದ ಕಡೆಗೆ ಗಮನಹರಿಸಿದೆ. ಈಗ್ಗೆ ೨೦ ವರ್ಷಗಳಿಂದಲೂ ಪ್ರತಿ ಎರಡು ವರ್ಷಗಳಿಗೊಮ್ಮೆ ಯುರೋಫ್, ಆಫ್ರಿಕ ಮತ್ತು ವಿಶೇಷವಾಗಿ ಭಾರತದಲ್ಲಿ ಕಲಾನೆಲೆಗಳು ಮತ್ತು ಬೃಹತ್ ಶಿಲಾಯುಗದ ನೆಲೆಗಳ ಅನ್ವೇಷಣೆ, ಅಧ್ಯಯನ, ಕ್ಷೇತ್ರಕಾರ್ಯ ಯೋಜನೆಯನ್ನು ಹಾಕಿಕೊಂಡು ಕಾರ್ಯನಿರ್ವಹಿಸುತ್ತಿದೆ.[೧೩]

## ೨.೨. ಭಾರತದಲ್ಲಿ

ಇರ್ವಿನ್ ನ್ಯೂ ಮೇಯರ್ ಗುರುತಿಸುವಂತೆ ಅಲ್ತಮಿರ ಗವಿಯ ಶೋಧಕ್ಕಿಂತ ಹನ್ನೆರಡು ವರ್ಷ ಮೊದಲೇ (೧೮೬೭-೬೮) ಭಾರತದಲ್ಲಿ ಆರ್ಚಿಬಾಲ್ಡ್ ಕಾರ್ಲೈಲ್ ಉತ್ತರ ಪ್ರದೇಶದ ಮಿರ್ಜಾಪುರ್ ಜಿಲ್ಲೆಯ ಶೋಹಗಿ ಘಾಟ್‌ನ ಕಲ್ಲಾಸರೆಯಲ್ಲಿ ಚಿತ್ರಗಳನ್ನು ಕಂಡರು. ಆ ಬಗೆಗೆ ಅವರ ಲೇಖನ ಕೆಲ ವರ್ಷಗಳ ನಂತರ ಪ್ರಕಟವಾಯಿತಾದರೂ ಆವರ ಶೋಧನೆ ಮತ್ತು ಅದೇ ಅವಧಿಯ ೧೮೮೦ರ ಸಮಯದಲ್ಲಿ ಹೂಬರ್ಟ್‌ನಾಕ್ಸ್‌ರವರು ಬಳ್ಳಾರಿ ಸಮೀಪದ ಕಪಗಲ್ ಗ್ರಾಮದ ಗುಡ್ಡದಲ್ಲಿ ಕುಟ್ಟಿ ಬಿಡಿಸಿದ ಚಿತ್ರಗಳನ್ನು ನೋಡಿ ಅವುಗಳ ಛಾಯಾಚಿತ್ರಗಳನ್ನು ತೆಗೆದು ರಾಬರ್ಟ್‌ಬ್ರೂಸ್ ಫೂಟ್‌ರವರಿಗೆ ಕಳಿಸಿಕೊಟ್ಟರು. ಫೂಟ್ ಅವರು ೧೯೧೬ರಲ್ಲಿ ಪ್ರಕಟಿಸಿದ "ದಿ ಪೂಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರಿ ಹಿಸ್ಟಾರಿಕ್ ಆಂಡ್ ಫ್ರೋಟೊ ಹಿಸ್ಟಾರಿಕ್ ಆಂಟಿಕ್ವಿಟಿಸ್" ಪುಸ್ತಕದಲ್ಲಿ ಇವುಗಳ ವರ್ಣನೆಯನ್ನು ಕೊಟ್ಟಿದ್ದಾರೆ. ಹೀಗೆ ಭಾರತದ ಗವಿ ವರ್ಣ ಮತ್ತು ಬಂಡೆ ಚಿತ್ರಗಳನ್ನು ಮೊದಲಿಗೆ ಬೆಳಕಿಗೆ ತಂದ ಕೀರ್ತಿ ಆರ್ಚಿಬಾಲ್ಡ್ ಕಾರ್ಲೈಲ್[೧೪] ಮತ್ತು ಹೂಬರ್ಟ್‌ನಾಕ್ಸ್[೧೫] ರವರಿಗೆ ಸಲ್ಲುತ್ತದೆ.

೧೯೩೩ರಲ್ಲಿ ಕೆ.ಪಿ.ಜಯಸ್ವಾಲ್‌ರವರು ಓರಿಸ್ಸಾ ರಾಜ್ಯದ ಸಂಬಲ್‌ಪುರ್ ಜಿಲ್ಲೆಯ ವಿಕ್ರಮ್ ಖೋಲ್ ಕಲ್ಲಾಸರೆಯಲ್ಲಿಯ ಕೊರೆದ ಚಿತ್ರಗಳನ್ನು ಬೆಳಕಿಗೆ ತಂದರು.[೧೬] ಇದು ಕೊರೆದ ಚಿತ್ರಗಳಿಗೆ ಸಂಬಂಧಿಸಿದಂತೆ ಪ್ರಥಮ ಶೋಧನೆಯಾಗಿದೆ. ಮಿರ್ಜಾಪೂರ ಪ್ರದೇಶದ ರಾಂಪ್ ಗ್ರಾಮದ ಘೇಂಡಾಮೃಗದ ಬೇಟೆಯ ಚಿತ್ರದ ಬಗೆಗೆ ೧೮೮೩ರಲ್ಲಿ ಕೂಕ್‌ಬರ್ನ್‌ರವರು ಪ್ರಕಟಿಸಿದ ಲೇಖನ[೧೭] ಭಾರತದ ಪ್ರಾಗಿತಿಹಾಸ ಕಾಲದ ಕಲೆಗೆ ಸಂಬಂಧಿಸಿದ ಪ್ರಥಮ ವೈಜ್ಞಾನಿಕ ಲೇಖನವಾಗಿದೆ. ಇವರೇ ೧೮೯೯ರಲ್ಲಿ ಮಿರ್ಜಾಪುರ್ ಜಿಲ್ಲೆಯ ಗೋರಮನಗರ ಕಲ್ಲಾಸರೆ ಮತ್ತು ಹರ್ನಿ ಹರ್ನಾ ಗವಿಯ ಚಿತ್ರಗಳ ಕುರಿತು ವಿವರವಾದ ಲೇಖನ ಪ್ರಕಟಿಸಿದರು.[೧೮] ೧೯೦೭ರ ಸಂದರ್ಭದಲ್ಲಿ ಸಿ.ಎ.ಸಿಲಾಬೆರ್ರಡ್ ರವರು ಬಂದಾ ಜಿಲ್ಲೆಯ ಗವಿ ಚಿತ್ರಗಳ ಕುರಿತು ಸಚಿತ್ರಾ ವಿವರಣಾ ಪುಸ್ತಕವನ್ನು ಪ್ರಕಟಿಸಿದರು.[೧೯] ಸಿ ಡಬ್ಲ್ಯೂ ಅಂಡರ್‌ಸನ್‌ರವರು ಮಧ್ಯ ಪ್ರದೇಶದ ರಾಯಘರ್ ಜಿಲ್ಲೆಯ ಸಿಂಗನಪುರದಲ್ಲಿ ಚಿತ್ರಿತ ಗವಿಗಳನ್ನು ಬೆಳಕಿಗೆ ತಂದರು.[೨೦]

೧೯೩೨ರಲ್ಲಿ ಮನೋರಂಜನ್ ಘೋಷ್‌ರವರು ಹೋಶಂಗಾಬಾದ್ ಹತ್ತಿರದ ಅದಮ್‌ಘರ್‌ನಲ್ಲಿ ವರ್ಣಚಿತ್ರವುಳ್ಳ ಅನೇಕ ಕಲ್ಲಾಸರೆಗಳನ್ನು ಬೆಳಕಿಗೆ ತಂದರು. ಹಾಗೇ ಇವರು ಮಿರ್ಜಾಪುರ ಮತ್ತು ರಾಯಘರ್‌ಗಳ ಚಿತ್ರಗಳ ಕುರಿತು ಅಧ್ಯಯನ ನಡೆಸಿದರು. ಮಹದೇವಬೆಟ್ಟದ ಪಾಚಮಾರಿ ಗವಿ ಚಿತ್ರಗಳನ್ನು ಅಧ್ಯಯನಿಸಿದ ಡಾ.ಡಿ.ಎಚ್.ಗೊರ್ಡನ್‌ರವರು ಆ ಬಗೆಗೆ ದೇಶ ವಿದೇಶಗಳ ನಿಯತಕಾಲಿಕೆಗಳಲ್ಲಿ ಅನೇಕ ಲೇಖನಗಳನ್ನು ಬರೆದರು. ಅವರು ಬರೆದ "ದಿ ಪ್ರಿ ಹಿಸ್ಟಾರಿಕ್ ಬ್ಯಾಕ್ ಗ್ರೌಂಡ್ ಆಫ್ ಇಂಡಿಯನ್ ಓಸ್ಟರಿ" ಪುಸ್ತಕದಲ್ಲಿ ಭಾರತದ ಬಂಡೆ ಚಿತ್ರಗಳ ಬಗೆಗಿನ ವಿಚಾರವಿದೆ.[೨೧] ಉಜ್ಜನಿಯ(ಮಧ್ಯಪ್ರದೇಶ) ವಿ.ಎಸ್.ವಾಕಣಕರ್‌ರವರು ಭಾರತೀಯ ಪ್ರಾಗಿತಿಹಾಸ ಕಲಾಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ. ಅವರು ದೇಶದಾದ್ಯಂತ ವಿಶೇಷವಾಗಿ ಮಧ್ಯಭಾರತದಲ್ಲಿ ಅನೇಕ ಚಿತ್ರಗಳನ್ನು ಬೆಳಕಿಗೆ ತಂದಿದ್ದಾರೆ. ಇವರ ಅಪೂರ್ವ ಶೋಧನೆಯೆಂದರೆ ಭೀಂಬೆಟ್ಕಾ ಗುಹೆಗಳು. ವಾಕ್‌ಕರ್‌ರವರು ಭೂಪಾಲ್‌ನಿಂದ ಸುಮಾರು ೧೫ ಕಿ.ಮೀ. ಆಗ್ನೇಯಕ್ಕಿರುವ ಭೀಂಬೆಟ್ಕಾ ಗುಡ್ಡಗಾಡಿನಲ್ಲಿ ೭೫೪ ಕಲ್ಲಾಸರೆಗಳನ್ನು ಪರಿಶೀಲಿಸಿ ಅವುಗಳಲ್ಲಿ ೫೦೦ ಕಲ್ಲಾಸರೆಗಳಲ್ಲಿ ಚಿತ್ರಗಳನ್ನು ಬೆಳಕಿಗೆ ತಂದರು.[೨೨] ಕರ್ನಾಟಕದ ಬಾದಾಮಿ ಮತ್ತು ಅದರ ಸಮೀಪದಲ್ಲಿಯ ಕೆಲವು ಚಿತ್ರಗಳನ್ನು ಶೋದಿಸಿದ್ದಾರೆ. ಇವುಗಳ ಬಗೆಗೆ 'ಪೆಂಟೆಡ್ ರಾಕ್ ಶೆಲ್ಟರ್ ಆಫ್ ಇಂಡಿಯಾ' ಎಂಬ ಒಂದು ಪಿಎಚ್.ಡಿ.ಮಹಾಪ್ರಬಂಧವನ್ನು ಬರೆದಿದ್ದಾರೆ.[೨೩]

ಉತ್ತರ ಭಾರತದಲ್ಲಿ ಪ್ರಾಗಿತಿಹಾಸ ಕಾಲದ ಕಲೆಯ ಬಗೆಗೆ ಅಧ್ಯಯನ ತೀವ್ರವಾಗಿ ನಡೆದಿದೆ. ತತ್ ಸಂಬಂಧವಾಗಿ ಜಗದೀಶ್ ಗುಪ್ತಾ(೧೯೬೭), ಆರ್.ಕೆ.ವರ್ಮ(೧೯೬೪), ಎಸ್.ಕೆ.ಪಾಂಡ್ಯ(೧೯೭೯), ಬ್ರಿಗೆಟ್ ಆಲ್ಚಿನ್(೧೯೫೮), ಜೆ.ಜಾಕೊಬ್‌ಸನ್(೧೯೭೦) ಗ್ರಂಥಗಳನ್ನು ರಚಿಸಿದ್ದಾರೆ. ಸ್ಟೋನ್ ಏಜ್ ಪೇಟಿಂಗ್ಸ್ ಇನ್ ಇಂಡಿಯಾ (ವಿ.ಎಸ್.ವಾಕಣಕರ್ ಮತ್ತು ರಾಬರ್ಟ್‌ಬ್ರೂಕ್ಸ್) ಮತ್ತು ಪ್ರಿ ಹಿಸ್ಟಾರಿಕ್ ಇಂಡಿಯನ್‌ರಾಕ್ ಪೇಟಿಂಗ್ಸ್ (ಇರ್ವಿನ್ ನ್ಯೂ ಮೇಯರ್) ಎಂಬ ಎರಡು ಪಿಎಚ್.ಡಿ. ಮಹಾಪ್ರಬಂಧಗಳು ಪ್ರಕಟವಾಗಿವೆ. ಇರ್ವಿನ್ ನ್ಯೂ ಮೇಯರ್‌ರವರ ಇನ್ನೊಂದು ಪುಸ್ತಕ ಲೈನ್ಸ್ ಆನ್ ಸ್ಟೋನ್(೧೯೯೪)ಗಮನಾರ್ಹವಾಗಿವೆ. ಹೀಗೆ ಭಾರತದಲ್ಲಿ ಪ್ರಾಗಿತಿಹಾಸ ಕಾಲದ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳ ಬಗೆಗೆ ಅನ್ವೇಷಣೆ, ಅಧ್ಯಯನ, ಪ್ರಕಟಣೆ ನಡೆದಿದೆ. ಇತ್ತೀಚೆಗೆ ಮಧ್ಯಪ್ರದೇಶದಲ್ಲಿಯ ಇತರೆಡೆಗಳಲ್ಲಿ ಉತ್ತರ ಪ್ರದೇಶ, ಗುಜರಾತ್, ರಾಜಸ್ಥಾನ್, ಕರ್ನಾಟಕ, ಆಂಧ್ರ ಪ್ರದೇಶ, ತಮಿಳುನಾಡು ಮತ್ತು ಕೇರಳ ರಾಜ್ಯಗಳಲ್ಲಿ ಇಂತಹ ನೂರಾರು ಚಿತ್ರಿತ ಗವಿ, ಕಲ್ಲಾಸರೆಗಳು ಬೆಳಕಿಗೆ ಬಂದಿವೆ.

ದೆಹಲಿಯ "ಇಂದಿರಾ ಗಾಂಧಿ ನ್ಯಾಶನಲ್ ಸೆಂಟರ್ ಫಾರ್ ದಿ ಆರ್ಟ್ಸ್", "ರಾಕ್ ಆರ್ಟ್ ಸೊಸೈಟಿ ಆಫ್ ಇಂಡಿಯಾ" ಮತ್ತು "ಇಂಡಿಯನ್ ರಾಕ್ ಆರ್ಟ್ ರಿಸರ್ಚ್ ಅಸೋಸಿಯೇಷನ್" ಸಗರ್ ಈ ಸಂಸ್ಥೆಗಳು ಭಾರತದಲ್ಲಿಯ ಬಂಡೆ ಮತ್ತು ಗವಿವರ್ಣಚಿತ್ರಗಳ ವಿಶೇಷ ಅಧ್ಯಯನವನ್ನು ಕೈಗೊಂಡಿವೆ.

ಭಾರತದಲ್ಲಿ ಸದ್ಯ ತಿಳಿದಿರುವಂತೆ ಸು. ೫೦೦ಕ್ಕೂ ಅಧಿಕ ಸ್ಥಳಗಳಲ್ಲಿ ೫ ಸಾವಿರಕ್ಕೂ ಹೆಚ್ಚು ಚಿತ್ರಿತ ಕಲ್ಲಾಸರೆ, ಗವಿ ಬಂಡೆಗಲ್ಲು ಚಿತ್ರಗಳ ನೆಲೆಗಳು ಕಂಡುಬಂದಿವೆ. ಈ ಎಲ್ಲಾ ನೆಲೆಗಳನ್ನು ಗುಪ್ತಾರವರು ೧೯ ವಲಯಗಳನ್ನಾಗಿ,[೨೪] ವಾಕನಕರರವರು ೩೬ ವಲಯಗಳನ್ನಾಗಿ ವಿಂಗಡಿಸಿದ್ದಾರೆ.[೨೫] ದಕ್ಷಿಣ ಭಾರತಕ್ಕೆ ಸಂಬಂಧಿಸಿದಂತೆ ಗುಪ್ತಾರವರು, ಹೈದರಾಬಾದ್ ರಾಯಚೂರಿನ ೧೮ನೇ ವಲಯದಲ್ಲಿ ಆಂಧ್ರದ ಮತ್ತು ಉತ್ತರ ಕರ್ನಾಟಕದ ನೆಲೆಗಳ ಬಗೆಗೆ, ೨೦ನೇ ವಲಯ ತೀರ ದಕ್ಷಿಣದಲ್ಲಿ ಕೇವಲ ಕೇರಳದ ನೆಲೆಗಳ ಬಗ್ಗೆ ಹೇಳಿದ್ದಾರೆ. ವಾಕನ್‌ಕರವರು ಇಡೀ ದಕ್ಷಿಣ ಭಾರತಕ್ಕೆ ಸಂಬಂಧಿಸಿದಂತೆ ಬಾದಾಮಿ(೩೧), ಬೆಣಕಲ್ (೩೨), ಬಳ್ಳಾರಿ(೩೪), ಎಡಕಲ್(೩೫), ಕರ್ನೂಲ್-ಬೇತಮ್‌ಚರ್ಲಾ ಮತ್ತು ಶೋರಾಪುರ(೩೬) ಎಂದು ಆರು ವಲಯಗಳನ್ನು ಮಾಡಿದ್ದಾರೆ. ಆದರೆ ಈಗ ದಕ್ಷಿಣ ಭಾರತದ ಎಲ್ಲಾ ಆರು ರಾಜ್ಯಗಳಾದ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮತ್ತು ಗೋವಾದಲ್ಲಿ ಗವಿ/ಬಂಡೆ ಚಿತ್ರ ನೆಲೆಗಳು ಬೆಳಕಿಗೆ ಬಂದಿವೆ. ಹಾಗಾಗಿ ದಕ್ಷಿಣ

ಭಾರತದಲ್ಲಿ ಆಯಾ ರಾಜ್ಯವಾರು ನೆಲೆಗಳನ್ನು ಗುರುತಿಸಬಹುದು. ಭಾರತದ ಪ್ರಮುಖ ಕಲಾನೆಲೆಗಳನ್ನು ಈ ಮುಂದೆ ಗಮನಿಸಲಾಗಿದೆ.[೨೬]

**ರಾಯಘರ್ :** ಮಧ್ಯಪ್ರದೇಶದ ರಾಯಘರ್ ಜಿಲ್ಲೆಯ ರಾಯಘರ್‌ನಗರದ ಸುತ್ತಲಿನ ಕೆಲವು ಗ್ರಾಮಗಳಲ್ಲಿ ವರ್ಣಚಿತ್ರ ಗವಿಗಳಿವೆ. ಅವುಗಳಲ್ಲಿ ಸಿಂಗನಪುರ[೨೭] ಮತ್ತು ಕಬ್ರಪಹರ್‌ನ[೨೮] ಗವಿಚಿತ್ರಗಳು ಪ್ರಮುಖವಾಗಿವೆ. ಸಿಂಗನಪುರ ಗವಿಯಲ್ಲಿ ತ್ರಿಕೋನಾಕಾರದಲ್ಲಿದ್ದು, ಅದರ ಎರಡೂ ಗೋಡೆಗಳ ಮೇಲೂ ಚಿತ್ರಗಳಿವೆ. ಅವುಗಳಲ್ಲಿ ಹುಲಿ, ಜಿಂಕೆಗಳನ್ನು ದಟ್ಟ ಕೆಂಪು, ಕಿತ್ತಳೆ ಮತ್ತು ನೇರಿಳೆ ವರ್ಣಗಳಲ್ಲಿ ಚಿತ್ರಿಸಲಾಗಿದೆ. ಕಬ್ರಪಹರ್‌ವು ರಾಯಘರ್‌ಗೆ ದಕ್ಷಿಣಕ್ಕೆ ಸುಮಾರು ೧೬ ಕಿ.ಮೀ ದೂರದಲ್ಲಿ ಭಾಜರ್‌ಬಲಿ ಗ್ರಾಮದ ಹತ್ತಿರವಿದೆ. ಇಲ್ಲಿ ಮುಖ್ಯವಾಗಿ ಮನುಷ್ಯನ, ಪ್ರಾಣಿಗಳ ಚಿತ್ರಗಳು ಮತ್ತು ಕೆಲವು ಸಂಕೇತಾಕೃತಿಗಳ ಚಿತ್ರಗಳಿವೆ.

**ಪಾಚಮಾರಿ :** ಮಹಾದೇವ ಬೆಟ್ಟದಲ್ಲಿ ಪಾಚಮಾರಿ ಎಂಬ ಐದು ಗವಿಗಳಿವೆ. ಇವುಗಳನ್ನು ಪಾಂಡವರು ಬಳಸಿದ್ದರೆನ್ನುವ ನಂಬಿಕೆ ಇರುವುದರಿಂದ ಪಾಚಮಾರಿ ಎಂಬ ಹೆಸರು ಬಂದಿದೆ. ಈ ಐದು ಗವಿಗಳ ವರ್ಣಚಿತ್ರಗಳು ಇಂತಿವೆ.

ಲಾಸ್ಕರಿಯ ಕೋಹ(ಬರ್ಘಾರ್ ಗವಿ) ಗವಿಯಲ್ಲಿ ಬಲಬದಿಯ ಗೋಡೆಯ ಚಿತ್ರಗಳು ಮಾತ್ರ ಇಂದು ಉಳಿದಿವೆ. ಕಾಲ್ಪನಿಕ ಪ್ರಾಣಿಗಳು, ಜಿಂಕೆ, ಕಾಡು(ಗಂಡು) ಹಂದಿ, ಆಡುಗಳು, ಬೇಟೆಗಾರರು ಮತ್ತು ಸಂಗೀತಗಾರರು ಹಾಗೂ ಮತ್ತಿತರ ಚಿತ್ರಗಳು ಇಲ್ಲಿವೆ. ಇವನ್ನು ಬಿಳಿಬಣ್ಣದಲ್ಲಿ ಚಿತ್ರಿಸಿ ಕೆಂಪುಬಣ್ಣದ ಬಾಹ್ಯರೇಖೆಯಿಂದ ಆಲಂಕರಿಸಲಾಗಿದೆ.[೨೯]

ನಿಂಬಬೋಜಿ ಗವಿಯು ಲಾಸ್ಕರಿಯ ಕೋಹ ಗವಿಗೆ ಸನಿಹದಲ್ಲಿದೆ. ಇಲ್ಲಿ ಇತಿಹಾಸ ಕಾಲದ ಕೆಂಪು ಮತ್ತು ಬಿಳಿ ವರ್ಣದ ಬಿಲ್ಲು ಬಾಣಗಳನ್ನು ಹಿಡಿದ ಸೈನಿಕರ ಚಿತ್ರಗಳಿವೆ. ಇಮಲಿಕೋಹ ಎರಡು ಚಿಕ್ಕಗವಿಗಳನ್ನು ಒಳಗೊಂಡಿದೆ. ಈ ಗವಿಗಳಲ್ಲಿ ಗೂಳಿ, ಬೇಟೆಯ ದೃಶ್ಯದ, ಸಸ್ಯಹಾರಿ ಪ್ರಾಣಿಗಳ ಮತ್ತು ಹೋರಾಟನಿರತ ಸೈನಿಕರ ಚಿತ್ರಗಳಿವೆ. ಇವುಗಳಲ್ಲಿ ಗೂಳಿಯ ಚಿತ್ರವು ಅತ್ಯಂತ ಸಹಜವಾದ ರಚನೆಯಾಗಿದ್ದು ಗಮನ ಸೆಳೆಯುತ್ತದೆ. ಇವು ಕೆಂಪು ವರ್ಣದ ಬಾಹ್ಯರೇಖೆಗಳನ್ನು ಹೊಂದಿರುವ ಬಿಳಿ ಬಣ್ಣದ ಚಿತ್ರಗಳು. ಇವುಗಳ ಮೇಲೆ ಪುನಃ ಕಪ್ಪು ಬಣ್ಣದಲ್ಲಿ ಚಿತ್ರಗಳನ್ನು ಬರೆಯಲಾಗಿದೆ.

ಮರಾದಿಯೋ ಗವಿಯ ಛಾವಣಿಯಲ್ಲಿ ಚಿತ್ರಗಳಿವೆ. ಅವುಗಳಲ್ಲಿ ಜನರ ಗುಂಪೊಂದು ಹುಲಿಯಮೇಲೆ ದಾಳಿಗೈದಿರುವುದು, ಬೇಟೆಗಾರರು ಪ್ರಾಣಿಗಳನ್ನು ಭಲ್ಲೆಗಳಿಂದ ಚುಚ್ಚಿ ಬೇಟೆಯಾಡುತ್ತಿರುವ, ನೀರಿನ

ಕೊಡ ಹೊತ್ತ ಮಹಿಳೆ, ವಾದ್ಯಗಾರರು ಮತ್ತು ಬಿಲ್ಲು ಬಾಣಗಳನ್ನು ಹಿಡಿದಿರುವ ಸೈನಿಕರ ಚಿತ್ರಗಳು ಪ್ರಮುಖವಾಗಿವೆ.

ಬನಿಯಾ ಬೆರಿ ಕಲ್ಲಾಸರೆಯಲ್ಲಿ ನಿತ್ಯ ಬದುಕಿಗೆ ಸಂಬಂಧಿಸಿದ ಚಿತ್ರಗಳಿವೆ. ಕಟ್ಟಿಗೆ ಕಡಿಯುವುದು, ಜಾನುವಾರುಗಳನ್ನು ಕಾಯುತ್ತಿರುವುದು, ಸಮೂಹ ನೃತ್ಯ, ಸಾಂಪ್ರದಾಯಿಕ ಆಚರಣೆಗಳಲ್ಲಿ ನಿರತರಾದ ಜನರ ಗುಂಪು ಮುಂತಾದ ಚಿತ್ರಗಳಿವೆ. ಇಲ್ಲಿಯ ನೆರಳಚ್ಚು ವಿಧಾನದಲ್ಲಿ ಚಿತ್ರಿಸಿರುವ ಗರ್ಭದ ಹಸುವಿನ ಚಿತ್ರ ಆ ಕಾಲದ ಕಲಾವಿದರ ಕಲಾಜ್ಞಾನಕ್ಕೆ ಸಾಕ್ಷಿಯಾಗಿದೆ.

ರಿಚಗರ್ ಹತ್ತಿರದ ಮೊಂಟೆ ರೋಜ ಬೆಟ್ಟದಲ್ಲಿ ಕೂಡ ಎರಡು ಚಿತ್ರಿತ ಕಲ್ಲಾಸರೆಗಳು ಕಂಡು ಬಂದಿದ್ದು, ಅವುಗಳಲ್ಲಿ ಮೊದಲನೆಯದರಲ್ಲಿ ಕೆಂಪು ಮತ್ತು ಬಿಳಿ ವರ್ಣದ ಕಡ್ಡಿಯಂತೆ ತೆಳುವಾದ ಮನುಷ್ಯ ಚಿತ್ರಗಳು, ಯುದ್ಧಾಳುಗಳ ಮತ್ತು ವೃಕ್ಷಪೂಜೆಯ ಚಿತ್ರಗಳಿವೆ. ದೊರೋತಿ ದೀಪ ಎಂಬ ಮತ್ತೊಂದು ಕಲ್ಲಾಸರೆಯಲ್ಲಿ ಮುಖವಾಡ ಧರಿಸಿದ ಮನುಷ್ಯರ, ಬಿಲ್ಲು ಬಾಣ ಮತ್ತು ಕೊಡಲಿಗಳನ್ನು ಹಿಡಿದು ನಿಂತಿರುವ ಯುದ್ಧಾಳುಗಳ ಸಹಜವಾದ ಚಿತ್ರಗಳು, ಹಾರಾಡುತ್ತಿರುವ ರಥಗಳು ಮತ್ತು ಪ್ರಾಣಿಗಳ ರೇಖಾಚಿತ್ರಗಳಿವೆ. ಇವನ್ನು ತೆಳು ಮತ್ತು ದಟ್ಟ ನೇರಿಳೆ ಬಣ್ಣದಲ್ಲಿ ಚಿತ್ರಿಸಲಾಗಿದೆ.

**ಹೊಷಂಗಾಬಾದ :** ಹೊಷಂಗಾಬಾದ್‌ನ ಅದಮ್‌ನಗರದಲ್ಲಿ ಹತ್ತು ಚಿತ್ರಿತ ಗವಿಗಳಿವೆ. ಅವುಗಳಲ್ಲಿ ಹತ್ತನೆಯ ಗವಿಯ ಚಿತ್ರಗಳು ಮಾತ್ರ ಉತ್ತಮ ಸ್ಥಿತಿಯಲ್ಲಿವೆ. ಇಲ್ಲಿ ೩ ಮೀ. ಉದ್ದ ಮತ್ತು ೮ ಮೀ. ಆಗಲದ ಬೃಹತ್ ಕೋಣದ ಚಿತ್ರವಿದೆ. ಜಾವೊರಾದಲ್ಲಿಯ ಕೋಣನ ನಂತರ ಇದೇ ಎರಡನೇ ದೊಡ್ಡ ಚಿತ್ರವೆನ್ನಬಹುದು. ಇದನ್ನು ದ್ವಿರೇಖೆಯಲ್ಲಿ ಚಿತ್ರಿಸಲಾಗಿದೆ. ಇದರ ಮೇಲೆ ಎರಡು ಸಾಂಬಾರ ಪ್ರಾಣಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ಇವೆಲ್ಲ ಕೆಂಪು ವರ್ಣದವು. ಕೆಳಗೆ ಛಾಯಾರೂಪದ ಆನೆಯ ಚಿತ್ರವಿದೆ. ಅದರ ಮೇಲೂ ಜಿರಾಫೆ ಮತ್ತು ಉದ್ದ ಕತ್ತಿನ ಕುದುರೆ ಮೇಲೆ ಸವಾರನ ರೇಖಾಚಿತ್ರಗಳಿವೆ. ತೀರ ಕೆಳಭಾಗದಲ್ಲಿ ಬಿಲ್ಲುಗಾರರ ಚಿತ್ರಗಳಿವೆ.

ಒಂಭತ್ತನೆಯ ಕಲ್ಲಾಸರೆಯಲ್ಲಿ ಬಿಳಿವರ್ಣದ ತಲೆ ಎತ್ತಿ ನಿಂತ ಸಾಂಬಾರ ಪ್ರಾಣಿಯ ಚಿತ್ರ, ಏಳನೆಯ ಕಲ್ಲಾಸರೆಯಲ್ಲಿ ವಿಚಿತ್ರವಾಗಿ ಚಿತ್ರಿಸಿರುವ ಗೂಳಿಯ ಚಿತ್ರಗಳಿವೆ. ಆರನೆಯ ಕಲ್ಲಾಸರೆಯಲ್ಲಿ ಧನುರ್ಧಾರಿ ಸೈನಿಕರ, ನಾಲ್ಕನೆಯ ಕಲ್ಲಾಸರೆಯಲ್ಲಿ ಪ್ರಾಣಿಗಳನ್ನು ಕಾಯುತ್ತಿರುವ ಕಡ್ಡಿ ರೀತಿಯ ಸವಾರರ, ಕುದುರೆಗಳ ಬಾಗಿದ ಕತ್ತಿನ ಮೇಲೆ ಮನುಷ್ಯ ಚಿತ್ರಗಳು ಮತ್ತು ಖಡ್ಗ ಹಾಗೂ ಎಲೆಯಾಕಾರದ ಡಾಲುಗಳನ್ನು ಹಿಡಿದು ನಿಂತಿರುವ ಸಹಜ ರೂಪದ ಸೈನಿಕರ ಚಿತ್ರಗಳಿವೆ. ಇವು ತಿಳಿಕೆಂಪು ಮತ್ತು ಬಿಳಿ ಬಣ್ಣದಲ್ಲಿವೆ.

ಭೂಪಾಲ : ಭೂಪಾಲ ನಗರ ಹಾಗೂ ಸುತ್ತಲೂ ಅನೇಕ ಚಿತ್ರಿತ ಕಲ್ಲಾಸರೆಗಳಿವೆ. ಒಂದನೆಯದರಲ್ಲಿ ಜಿಂಕೆ ಮತ್ತಿತರ ಅಲಂಕೃತ ಚಿತ್ರಗಳು ತಿಳಿಕೆಂಪು ವರ್ಣದಲ್ಲಿವೆ. ಎರಡರಲ್ಲಿ ಜಿಂಕೆ, ಇಣಿಯುಳ್ಳ ಗೂಳಿ, ಆನೆ, ಚಿರತೆ, ನಾಯಿ, ಹೆಬ್ಬಾವು ಮತ್ತು ಮನುಷ್ಯ ಚಿತ್ರಗಳಿದ್ದು ಹಸಿರು, ತಿಳಿಕೆಂಪು ಮತ್ತು ಕಿತ್ತಳೆ ವರ್ಣದಲ್ಲಿ ಬಿಡಿಸಲಾಗಿದೆ. ಹೆಬ್ಬಾವಿನ ಚಿತ್ರವು ಅಸಹಜವಾಗಿದ್ದು, ಎಂಟು ತಿರುವುಗಳನ್ನು ಹೊಂದಿದೆ. ಕೆಳಗೆ ಓಡುತ್ತಿರುವ ಆನೆ, ಇಬ್ಬರು ಬೇಟೆಗಾರರು ಚಿರತೆಯ ನಾಲ್ಕು ಕಾಲುಗಳನ್ನು ಕಟ್ಟಿಗೆಗೆ ಕಟ್ಟಿ ಹೆಗಲ ಮೇಲೆ ಹೊತ್ತೊಯ್ಯುತ್ತಿರುವ ಚಿತ್ರಗಳಿವೆ. ಬಲಭಾಗದಲ್ಲಿ ಚಿಗರೆಯನ್ನು ಬೆನ್ನಟ್ಟಿರುವ ಮೂವರು ಬೇಟೆಗಾರರ ಚಿತ್ರಗಳಿವೆ. ಕೆಳಗೆ ಬಲಕ್ಕೆ ಉದ್ದವಾದ ಮೇಲ್ಬಟ್ಟೆಯನ್ನು ಧರಿಸಿರುವಂತೆ ತೋರುವ ಮನುಷ್ಯರ, ಇಣಿಯುಳ್ಳ ಗೂಳಿ, ತೀರ ಬಲಕ್ಕೆ ನಾಲ್ಕು ಸುಂದರವಾದ ಹೆಣ್ಣು ಚಿಗರಿಗಳ, ಗಂಡು ಸಾರಂಗಗಳ ಮತ್ತು ಜಿಂಕೆಯ ಚಿತ್ರಗಳಿವೆ.

ಮನು ಭಾನ್ ಕಿ ತೆಕ್ರಿ ಬೆಟ್ಟದ ಮೇಲೆ ಚಿತ್ರಿತ ೧೫ ಕಲ್ಲಾಸರೆಗಳಿವೆ. ಎರಡರಲ್ಲಿ ಮಾತ್ರ ಬಳೆಯ ತೆಳುಕೆಂಪು ವರ್ಣದ ಚಿತ್ರಗಳು ಉಳಿದಿವೆ. ಎಂಟರಲ್ಲಿಯ ಕಾಡು ಕೋಣನ ಚಿತ್ರವು ಗಮನಾರ್ಹವಾಗಿದೆ. ಸಾಂಬಾರ, ಹಸುವಿನ ಚಿತ್ರಗಳು ಇಲ್ಲಿವೆ. ಹದಿನೈದರಲ್ಲಿ ಇಣಿಯುಳ್ಳ ಒಂದು ಮೀಟರ್ ಉದ್ದವಾದ ದೊಡ್ಡ ಗೂಳಿಯ ಚಿತ್ರವಿದೆ. ಇದರ ವಿಸ್ತೃತ ಎತ್ತರದ ಕೋಡುಗಳು ಗಮನಾರ್ಹ. ಬಲಕ್ಕೆ ಐದು ಜನ ಬಿಲ್ಲುಗಾರರ, ನಾಲ್ಕು ಮನುಷ್ಯರ ಸಣ್ಣ ಪ್ರಮಾಣದ ಚಿತ್ರಗಳಿವೆ. ಅವುಗಳಲ್ಲಿ ಓರ್ವನು ಜಿಂಕೆಯ ಮುಖವಾಡ ಹಾಕಿಕೊಂಡು ಚರ್ಮಧರಿಸಿ ನಿಂತಂತಿದೆ.

ಶ್ಯಾಮಲ್ ಬೆಟ್ಟದಲ್ಲಿ ೧೫ ಗವಿಗಳಿವೆ.[೩೦] ಇಲ್ಲಿ ಎತ್ತು, ಹಂದಿ, ಜಿಂಕೆ, ಮಂಗ, ನಾಯಿ ಮುಂತಾದ ಪ್ರಾಣಿಗಳ ಹಾಗೂ ಅಲಂಕೃತ ಆಕೃತಿಗಳ ಚಿತ್ರಗಳು ಪ್ರಮುಖವಾಗಿವೆ. ಇವುಗಳನ್ನು ತಿಳಿಕೆಂಪು, ಕಂದು ಮತ್ತು ವಿರಳವಾಗಿ ಬಿಳಿ, ಹಳದಿ, ಹಳದಿ ಕಂದು ಮತ್ತು ಕಪ್ಪು ವರ್ಣದಲ್ಲಿ ಚಿತ್ರಿಸಲಾಗಿದೆ. ಭಡಭದ ನೆಲೆಯ ಗವಿಯಲ್ಲಿ ಕಡ್ಡಿ ರೀತಿಯ ಮನುಷ್ಯ ಚಿತ್ರಗಳಿವೆ. ಧರ್ಮಪುರಿಯ ಕಲ್ಲಾಸರೆಯಲ್ಲಿ ಕೋಣದ ಬೇಟೆಯ ದೃಶ್ಯ, ಬಿಲ್ಲು ಮತ್ತು ಬಾಣಗಳನ್ನು ಹಿಡಿದಿರುವ ಮನುಷ್ಯನ, ರಥ ಸವಾರನ ಮತ್ತಿತರ ಪ್ರಾಣಿಗಳ ಚಿತ್ರಗಳಿವೆ.[೩೧]

ನಯಾಪುರದಲ್ಲಿ ಏಳು ಶಹಾದ್ ಕರೋರ್‌ನಲ್ಲಿ ಒಂಭತ್ತು ಮತ್ತು ರಾಜ್‌ಘರ್ ಜಿಲ್ಲೆಯ ಕತ್ರವಿಹಾರ್ ಎಂಬಲ್ಲಿ ಅರವತ್ತು ಚಿತ್ರಿತ ಕಲ್ಲಾಸರೆಗಳನ್ನು, ವಾಕನಕರ್‌ರವರು ಶೋಧಿಸಿದ್ದಾರೆ.[೩೨] ಆದೇ ರೀತಿ ಬೆಟ್ಟ ಕಣಿವೆಯಲ್ಲಿ ಜೋರಾ ಚಿಕ್ಲೊಡ್, ಕಾಥೂತಿಯಾ, ಭಾಗರಾಜ್, ಕರೊರ್ ಭಾಗವಾಗಿ ಕರೊರ್ ಮತ್ತು ಝಿರಿಗಳಲ್ಲಿ ಚಿತ್ರಗವಿಗಳಿವೆ. ಜೋರಾ ಕಲ್ಲಾಸರೆಗಳ ಗುಂಪಿನ ಚಿತ್ರಗಳು

ವೈವಿಧ್ಯತೆ ಮತ್ತು ಅಧಿಕ ಸಂಖ್ಯಾ ದೃಷ್ಟಿಯಿಂದ ಗಮನಾರ್ಹವಾಗಿವೆ. ಇಲ್ಲಿ ನೂರಕ್ಕೂ ಮಿಕ್ಕಿ ಆನೆ, ಘೇಂಡಾಮೃಗ, ಕೋಣ, ಸಿಂಹ, ಕಾಡುಹಂದಿ, ಸಾಂಬಾರ ಮತ್ತಿತರ ಪ್ರಾಣಿಗಳ ಬೇಟೆಗಾರರ, ನೃತ್ಯಗಾರರ, ಯುದ್ಧದ ದೃಶ್ಯ, ಸೈನಿಕರ ಪಥಚಲನ, ಆನೆಸವಾರರು, ಅಶ್ವಸವಾರರು ಮತ್ತು ರಥಗಳ ಚಿತ್ರಗಳಿವೆ. ಇವು ಇತಿಹಾಸ ಕಾಲದ ಚಿತ್ರಗಳೆಂದು ಹೇಳಬಹುದು. ಆದರೆ ಇಲ್ಲಿಯ ಕೋಣನ ಚಿತ್ರ ತನ್ನ ದೊಡ್ಡ ಪ್ರಮಾಣದಿಂದಾಗಿ ಗಮನ ಸೆಳೆಯುತ್ತದೆ. ೩.೬೦ ಮೀ ಉದ್ದ ಮತ್ತು ೧.೯೫ ಮೀ ಎತ್ತರ (ಭುಜದ ಹತ್ತಿರ) ವಿರುವ ಇದು ಭಾರತದ ಗವಿ ಪ್ರಾಣಿ ಚಿತ್ರಗಳಲ್ಲಿಯೇ ಅತ್ಯಂತದೊಡ್ಡ ಚಿತ್ರವಾಗಿದೆ. ಇದು ದ್ವಿವರ್ಣದ್ದು. ಬಿಳಿವರ್ಣದ ಬಾಹ್ಯರೇಖೆಯನ್ನು ಹಾಕಿ ಒಳಭಾಗದಲ್ಲಿ ತೆಳುವಾಗಿ ಬಿಳಿಬಣ್ಣದಿಂದ ತುಂಬಲಾಗಿದೆ. ತಿಳಿಕೆಂಪು ವರ್ಣದಲ್ಲಿ ಚುಕ್ಕೆಗಳನ್ನಿಟ್ಟು ಅಲಂಕರಣ ಮಾಡಲಾಗಿದೆ. ಚಿಕ್ಲೊಡ್ ಕಲ್ಲಾಸರೆಗಳಲ್ಲಿ ತಿಳಿಕೆಂಪು ಮತ್ತು ಬಿಳಿ ಬಣ್ಣದ ಜಿಂಕೆ, ಎತ್ತು, ಅಶ್ವಗಳು, ಅಶ್ವಸವಾರರು ಮತ್ತು ಪದಾತಿ ಸೈನಿಕರ ಚಿತ್ರಗಳಿವೆ.[೩೩]

**ರೈಸಿನ್ :** ಬಿಂಬೆಟ್ಕಾ ನಂತರ ರೈಸಿನ್ ಜಿಲ್ಲೆಯಲ್ಲಿ ಅತೀ ಹೆಚ್ಚು ಚಿತ್ರಿತ ಶಿಲಾಶ್ರಯಗಳಿವೆ. ಇಲ್ಲಿ ೧೧ ನೆಲೆಗಳಲ್ಲಿ ೨೮೩ಕ್ಕೂ ಅಧಿಕ ಕಲ್ಲಾಸರೆಗಳಿವೆ. ಅವುಗಳಲ್ಲಿ ನರವಾರ್, ಖಾರವಾಯಿ, ರಾಮಚಜ್ಜ ಮುಖ್ಯ ಚಿತ್ರಿತ ಕಲ್ಲಾಸರೆಗಳಾಗಿವೆ. ನರವಾರ್‌ನಲ್ಲಿ ಜಿಂಕೆ, ನೀಲ್‌ಗಾಯ್, ಘೇಂಡಾಮೃಗ, ಎಮ್ಮೆ, ಆನೆ, ಒಂಟೆ, ಅಶ್ವಗಳು, ಮಂಗ, ಹಲ್ಲಿ ಇತರ ಪ್ರಾಣಿಗಳ ಚಿತ್ರಗಳಿವೆ. ಇವನ್ನು ಬಿಳಿ, ಹಳದಿ, ತಿಳಿಕೆಂಪು, ದಟ್ಟಕೆಂಪು, ನೀಲಿ ಮತ್ತು ಕಪ್ಪು ಬಣ್ಣಗಳಲ್ಲಿ ಬಿಡಿಸಲಾಗಿದೆ.[೩೪]

ಖಾರವಾಯಿಯಲ್ಲಿ ವನ್ಯಪ್ರಾಣಿಗಳ, ಪಕ್ಷಿಗಳ, ಮುಖವಾಡಧಾರಿಗಳ, ಅಶ್ವಸವಾರರ ಚಿತ್ರಗಳಿವೆ. ರಾಮಚಜ್ಜದಲ್ಲಿ ಚುಕ್ಕೆಗಳಿಂದ ತುಂಬಿ ಅಲಂಕರಿಸಲಾದ ಪ್ರಾಣಿಗಳ ರೇಖಾಚಿತ್ರಗಳು, ಘೇಂಡಾಮೃಗ, ಮೈಮೇಲೆ ಕೂದಲುಳ್ಳ ಎರಡು ಬಾಯಿಯ ವಿಚಿತ್ರ ಪ್ರಾಣಿಗಳ, ವಿವಿಧ ಕ್ರಿಯೆಯಲ್ಲಿರುವ ಮನುಷ್ಯರ ಚಿತ್ರಗಳಿವೆ.

ಸಾಂಚಿ ಸಮೀಪದ ನಗೋರಿ ಬೆಟ್ಟಗಳಲ್ಲಿ ೧೨ಕ್ಕೂ ಅಧಿಕ ಕಲ್ಲಾಸರೆಗಳಿದ್ದು, ಅವುಗಳಲ್ಲಿ ಒಂದರಲ್ಲಿ ಇತಿಹಾಸ ಕಾಲದ ಅರಸು ಸಂಬಂಧಿ ಚಿತ್ರಗಳಿವೆ. ಸಾಂಚಿ ಸ್ತೂಪದ ದಕ್ಷಿಣದ ಬಂಡೆಯ ಇಳಿಜಾರಿನಲ್ಲಿ ಹುಲಿ, ಎತ್ತು ಮುಂತಾದ ಎಂಟು ಪ್ರಾಣಿಗಳ ಕೊರೆದಿರುವ ಚಿತ್ರಗಳು, ಹೂ ಮತ್ತು ಎಲೆಗಳ ಕುಳಿ ರೇಖೆಯ ಚಿತ್ರಗಳಿವೆ. ಈ ಚಿತ್ರಗಳ ಸಮೀಪ ತೆಳುವಾಗಿ ಕೊರೆದಿರುವ ಮಗುವನ್ನು ಎತ್ತಿ ಕೊಂಡಿರುವ ಮಹಿಳೆಯ ಒಂದು ಮೀ. ಎತ್ತರದ ಚಿತ್ರ ಗಮನ ಸೆಳೆಯುತ್ತದೆ. ಹೊಷಂಗಾಬಾದ್ ಸಮೀಪದ ಬಯಾನ್-ಕಿ ಪಹಾರಿಯಲ್ಲಿ ಆರು ಕಲ್ಲಾಸರೆಗಳಿವೆ. ಅವುಗಳಲ್ಲಿ ದೊಡ್ಡದಾದ ಮೀನುಗಳು,

ಇಣಿಯುಳ್ಳ ಗೂಳಿಯನ್ನು ಬೆನ್ನಟ್ಟಿರುವ ಇಬ್ಬರು ವ್ಯಕ್ತಿಗಳ, ಸಾಲಾಗಿರುವ ಹೆಣ್ಣು ಚಿರತೆಗಳ, ಪಕ್ಷಿಯ ಚಿತ್ರಗಳಿವೆ. ಇವುಗಳನ್ನು ತಿಳಿ ಕೆಂಪು ವರ್ಣದಲ್ಲಿ ಚಿತ್ರಿಸಲಾಗಿದೆ. ಪತಾನಿ ಕಿ ಪಹಾರಿಯಾ ಕಲ್ಲಾಸರೆಗಳಲ್ಲಿ ಪ್ರಧಾನವಾಗಿ ಬೇಟೆಗೆ ಸಂಬಂಧಿಸಿದ ಚಿತ್ರಗಳಿವೆ.

**ಸಾಗರ್ :** ಸಾಗರ್ ಜಿಲ್ಲೆಯಲ್ಲಿ ಗವಿಚಿತ್ರಗಳ ಐದು ನೆಲೆಗಳಿವೆ. ಅಬಚಾಂದ್‌ನಲ್ಲಿ ೧೨ ಕಲ್ಲಾಸರೆಗಳಿದ್ದು, ಇಲ್ಲಿ ಕೆಂಪು ಹಸಿರು ಮತ್ತು ಬಿಳಿ ಬಣ್ಣದಲ್ಲಿ ಬೇಟೆಯ ದೃಶ್ಯ, ಅಶ್ವಸವಾರ, ಯುದ್ಧದ, ನೃತ್ಯ, ಮತ್ತು ಅನೇಕ ರೀತಿಯ ಪ್ರಾಣಿಯ ಚಿತ್ರಗಳನ್ನು ಬಿಡಿಸಲಾಗಿದೆ. ಇಲ್ಲಿ ಕೆಲವು ಕೊರೆದ ಚಿತ್ರಗಳು ಇವೆ.[೩೫] ಬರೋಡಾ ಅರಣ್ಯದ ಗುರರ್ ದಹರ್ ಎಂಬಲ್ಲಿ ೬ ಕಲ್ಲಾಸರೆಗಳಿವೆ. ಇಲ್ಲಿ ಕೂಡ ಬೇಟೆ ಹಾಗೂ ಹೋರಾಟದ ಚಿತ್ರಗಳು, ಆನೆ, ಹುಲಿ, ಕುದುರೆ, ಎತ್ತು ಮತ್ತು ಆಡಿನ ಚಿತ್ರಗಳಿವೆ.

ನಾರ್‌ಮೌಲಿ, ಬಾಪೆಲ್ ಮತ್ತು ಬಿಲಾಫಡಿಗಳಲ್ಲಿ ೧೬ ಕಲ್ಲಾಸರೆಗಳಿವೆ. ನಾರಮೌಲಿಯ ಮೂರು ಕಲ್ಲಾಸರೆಗಳಲ್ಲಿ ಖಡ್ಗ, ಡಾಲು, ಈಟಿಗಳನ್ನು ಹಿಡಿದು ನಿಂತಿರುವ ಯುದ್ಧಾಳುಗಳ, ನವಿಲು, ಮೀನು ಮತ್ತು ಚೇಳಿನ ಚಿತ್ರಗಳಿವೆ. ಮೂರು ಹಸ್ತಮುದ್ರಿಕೆಗಳು, ಆನೆಯ ಮೇಲೆ ಐದು ಸವಾರರ, ಮನುಷ್ಯ, ಪ್ರಾಣಿ, ಪಕ್ಷಿ ಚಿತ್ರಗಳಿವೆ.

**ರೇವಾ, ಪನ್ನಾ ಮತ್ತು ಛತ್ತರಪುರ :** ಈ ಮೂರು ಜಿಲ್ಲೆಗಳಲ್ಲಿ ಅನೇಕ ಕಲ್ಲಾಸರೆಗಳಿವೆ. ರೇವಾ ಜಿಲ್ಲೆಯ ಇತರ್ ಪಹರ್‌ನಲ್ಲಿ ಹತ್ತು ಗವಿಗಳಿವೆ. ಅವುಗಳಲ್ಲಿ ಬೇಟೆಯ, ಮೀನು ಹಿಡಿಯುವ, ಜಿಂಕೆ, ಕೋಣ, ನಾಯಿ, ಕತ್ತೆ, ಘೇಂಡಾಮೃಗಗಳ ಚಿತ್ರಗಳಿವೆ. ಹಾಗೇ ಅರ್ಧತೋಳಿನ ಅಂಗಿ ಧರಿಸಿರುವ ಮನುಷ್ಯರ, ಅಶ್ವಸವಾರರ, ಗಿಡ ಮತ್ತು ಸೂರ್ಯನ ಸಂಕೇತ ಚಿತ್ರಗಳಿವೆ.[೩೬] ಬರೋಕಾ-ಗೀತಾಪುರ ಮತ್ತು ಭಲಭಲಿಯಾಗಳಲ್ಲಿಯೂ ಕೂಡ ಆನೆ, ಅಶ್ವಸವಾರ ಮತ್ತಿತರ ಚಿತ್ರಗಳಿವೆ.[೩೭]

ಪನ್ನಾ ಜಿಲ್ಲೆಯಲ್ಲಿ ಕರ್‌ಪತೀಯಾ, ಬೃಹಸ್ಪತಿ ಕುಂಡಗಳಲ್ಲಿ ಗವಿಗಳಿದ್ದು, ಕೆಂಪು ವರ್ಣದ ಬೇಟೆಯ ಮತ್ತು ನೃತ್ಯದ ಚಿತ್ರಗಳಿವೆ. ಬೃಹಸ್ಪತಿ ಕುಂಡದಲ್ಲಿ ಕೆಂಪು, ಹಳದಿ ಮತ್ತು ಹಸಿರು ವರ್ಣದಲ್ಲಿ ಪ್ರಾಣಿಗಳ, ನೃತ್ಯ, ಬೇಟೆ, ಜಿರಾಫೆ ರೀತಿಯ ಪ್ರಾಣಿಯ ಚಿತ್ರಗಳಿವೆ.[೩೮]

ಛತ್ತರ್‌ಪುರ ಜಿಲ್ಲೆಯಲ್ಲಿ ಪುರ್ನಕಾದತ್ತ ಮತ್ತು ಪುತ್ರಿಕಾದತ್ತ ಎಂಬೆರಡು ಕಲ್ಲಾಸರೆಗಳಿದ್ದು ಅಲ್ಲಿ ಆನೆ, ಹುಲಿ, ಎತ್ತು, ನೀಲ್‌ಗಾಯಿ, ಸಾಂಬಾರ್, ನಾಯಿ, ನವಿಲು, ಮೀನು ಮತ್ತು ಮನುಷ್ಯ ಚಿತ್ರಗಳು ಕೆಂಪು ಮತ್ತು ಹಳದಿ ವರ್ಣದಲ್ಲಿವೆ.

**ಕತ್ನಿ ಮತ್ತು ನರಸಿಂಹಪುರ :** ಜಬಲಪುರಜಿಲ್ಲೆಯ ಕತ್ನಿ ಸಮೀಪದ ಮರಳು ಶಿಲಾ ಬೆಟ್ಟದಲ್ಲಿ ಐದು ಮತ್ತು ಮದನಮಹಲನಲ್ಲಿ ಐದು ಕಲ್ಲಾಸರೆಗಳಿವೆ. ಕತ್ನಿಯ ಕಲ್ಲಾಸರೆಗಳಲ್ಲಿ ಬಿಳಿಬಣ್ಣದ ಆನೆ, ಎತ್ತು, ನೀಲಗಾಯಿ, ಸಾಂಬಾರ್, ಬಿಲ್ಲು ಬಾಣಗಳನ್ನು ಹಿಡಿದು ನಿಂತ ವ್ಯಕ್ತಿಯ ಚಿತ್ರಗಳಿವೆ. ಮದನಪುರದಲ್ಲಿ ಮನುಷ್ಯ ಚಿತ್ರಗಳಿವೆ.[೩೯] ನರಸಿಂಹಪುರ ಜಿಲ್ಲೆಯ ಬಿಜೋರಿ ಕಲ್ಲಾಸರೆಯಲ್ಲಿ ಕೆಂಪು ವರ್ಣದ ಆನೆ ಮತ್ತು ಪಕ್ಷಿಗಳ ಚಿತ್ರಗಳಿವೆ. ಅವುಗಳ ಮೇಲೆ ಬಿಳಿಬಣ್ಣದಲ್ಲಿ ಬೇಟೆಯ ದೃಶ್ಯ, ಅಶ್ವಸವಾರನ, ನೃತ್ಯಗಾರರ ಚಿತ್ರಗಳನ್ನು ಪುನಃ ಬರೆಯಲಾಗಿದೆ.[೪೦]

**ಗ್ವಾಲಿಯರ್ :** ಗ್ವಾಲಿಯರ್ ನಗರದ ಸಮೀಪದಲ್ಲಿರುವ ಗುಪ್ತೇಶ್ವರ ಶಿವಪುರ ಜಿಲ್ಲೆಯ ಚೋರಪುರಗಳಲ್ಲಿ ಹತ್ತು ಕಲ್ಲಾಸರೆಗಳಿದ್ದು, ಅವುಗಳಲ್ಲಿ ಚಿತ್ರಗಳು ಹಾಗೂ ೧ ರಿಂದ ೪ನೇ ಶತಮಾನದವರೆಗಿನ ಶಿಲಾಶಾಸನಗಳು ಇವೆ.[೪೧] ತಿಕಾಲ ಗ್ರಾಮದ ಹತ್ತಿರ ಪಾರ್ವತಿ ನದಿಯ ದಕ್ಷಿಣ ತೀರದಲ್ಲಿ ೮ ಚಿತ್ರಿತ ಕಲ್ಲಾಸರೆಗಳು ಇದ್ದು, ಪ್ರಾಣಿಗಳ, ಬೇಟೆಗಾರರ ಚಿತ್ರಗಳು ಇಲ್ಲಿ ಪ್ರಧಾನವಾಗಿವೆ.

**ಚಂಬಲ್ ಕಣಿವೆ :** ಚಂಬಲ್ ಕಣಿವೆಯ ೨೦ ನೆಲೆಗಳಲ್ಲಿ ೧೫೦ಕ್ಕೂ ಅಧಿಕ ಚಿತ್ರಿತ ಕಲ್ಲಾಸರೆಗಳಿದ್ದವು. ಆದರೆ ಈಗ ಅವು ಗಾಂಧಿಸಾಗರ ಅಣೆಕಟ್ಟಿನ ಜಲಾಶಯದಲ್ಲಿ ಕಣ್ಮರೆಯಾಗಿವೆ. ಬಾನಪುರ ಸಮೀಪದ ಚಬ್ಬರನಾಲಾದ ನಾಲ್ಕು ಕಲ್ಲಾಸರೆಗಳಲ್ಲಿ ಕೊಡಲಿ, ಬಿಲ್ಲು ಬಾಣ ಹಿಡಿದ ಮನುಷ್ಯರು, ಮರದ ಮೇಲೆ ಕುಳಿತ ನವಿಲು, ಕಾಡೆಮ್ಮೆಯ ಚಿತ್ರಗಳು ಪ್ರಮುಖವಾಗಿವೆ.[೪೨] ಕನವಾಲ ಕಲ್ಲಾಸರೆಯಲ್ಲಿ ದೊಡ್ಡ ಕೊಂಬಿನ ಎತ್ತಿನ ಚಿತ್ರ, ಸಿತಾಖರಡಿ ಕಲ್ಲಾಸರೆಯಲ್ಲಿ ಕೆಂಪುವರ್ಣದಿಂದ ವನ್ಯಪ್ರಾಣಿಗಳ, ಮನುಷ್ಯರ ರೇಖಾಕೃತಿಗಳ ಚಿತ್ರಗಳನ್ನು ಛಾಯಾರೂಪದಲ್ಲಿ ಚಿತ್ರಿಸಲಾಗಿದೆ. ಕತಾರಿಯ ಕುಂಡ ಕಲ್ಲಾಸರೆಯಲ್ಲಿ ನೀಲ್‌ಗಾಯಿಗಳ ಸುಜನಪುರ ಮತ್ತು ಮಾಲ್‌ಸೇರಿ ಕಲ್ಲಾಸರೆಗಳಲ್ಲಿ ಪ್ರಾಣಿಗಳ ಮತ್ತು ಮನುಷ್ಯರ ಚಿತ್ರಗಳಿವೆ. ತಕ್ಷಕೇಶ್ವರ, ಕೇದಾರೇಶ್ವರ ಮತ್ತು ಇಂದ್ರಘರ್[೪೩] ಕಲ್ಲಾಸರೆಗಳಲ್ಲಿ ಮನುಷ್ಯ, ಪ್ರಾಣಿ ಪಕ್ಷಿಗಳ ಚಿತ್ರಗಳು ಗುಪ್ತಬ್ರಾಹ್ಮಿ ಹಾಗೂ ಶಂಖಲಿಪಿಯ ಶಿಲಾಶಾಸನಗಳಿವೆ. ರಾಮಪುರ, ರೇವಾಲ್ಕ್, ಅರಿಯಾ, ಕೋಟಾ, ದರ್ರಾ, ಗಗ್ರಾನ್ ಮತ್ತು ಭಾಯಿನ್‌ಸರ್‌ಘರ್‌ಗಳಲ್ಲಿ ಕೂಡ ಚಿತ್ರಿತ ಕಲ್ಲಾಸರೆಗಳಿವೆ.

**ಬಸ್ತರ್ :** ವಾಕನಕರ್‌ರವರು ಬಸ್ತರ್ ಜಿಲ್ಲೆಯಲ್ಲಿ ಎರಡು ಕಲ್ಲಾಸರೆಗಳನ್ನು ವರದಿಮಾಡಿದ್ದಾರೆ. ಅವು ಗೋಪನ್‌ಸರ್ ಮತ್ತು ಚಿತ್ರಕೋಟ್ ಫಾಲ್ಸ್ ಹತ್ತಿರದಲ್ಲಿವೆ.[೪೪]

**ಬಿಂಬೇಟ್ಕಾ ಪ್ರದೇಶ :** ಭಿಂಬೇಟ್ಕಾ ಪ್ರದೇಶದ ವಿನಾಯಕ ಬೆಟ್ಟ, ಬೊನ್ರವಾಲಿ, ಭಿಂಬೇಟ್ಕಾ, ಪೂರ್ವ ಲಖಾ ಜುಹಾರ್, ಪಶ್ಚಿಮ ಲಖಾ ಜುಹಾರ್, ಚೋಂದ್ರಾ ಮತ್ತು ಮುನಿ ಬಾಬಾ ಕಿ ಪಹಾರಿ ಎಂಬ ಏಳು ಬೆಟ್ಟಗಳಲ್ಲಿ ೬೪೨ ಚಿತ್ರಿತ ಕಲ್ಲಾಸರೆಗಳಿವೆ. ಇವುಗಳಲ್ಲಿ ಭಿಂಬೇಟ್ಕ ಬೆಟ್ಟವೊಂದರಲ್ಲೆ ೨೪೩ ಕಲ್ಲಾಸರೆಗಳಿದ್ದರೇ, ಉಳಿದ ಆರು ಬೆಟ್ಟಗಳಲ್ಲಿ ೩೯೯ ಕಲ್ಲಾಸರೆಗಳಿವೆ. ಅವುಗಳಲ್ಲಿ ವಿನಾಯಕ ಬೆಟ್ಟದಲ್ಲಿ ೧೦, ಬೊನ್ರವಲಿಯಲ್ಲಿ ೧೮೧ ಕಲ್ಲಾಸರೆಗಳಿವೆ.

ಈ ಎಲ್ಲ ಕಲ್ಲಾಸರೆಗಳಲ್ಲಿ II-E-೨೧ ಮತ್ತು II-E-೮ ಕಲ್ಲಾಸರೆಗಳು ಚಿತ್ರಗಳ ದೃಷ್ಟಿಯಿಂದ ಅತ್ಯಂತ ಶ್ರೀಮಂತವಾಗಿವೆ. ಮೊದಲೆಯದರಲ್ಲಿ ಆಹಾರ ಸಂಗ್ರಹಣೆಯ ಮತ್ತು ಬೇಟೆಗಾರಿಕೆಯ ಚಿತ್ರಗಳಿವೆ. ಬೆನ್ನಿಗೆ ಬುಟ್ಟಿ ಹಾಕಿಕೊಂಡು ಮರವನ್ನೇರುತ್ತಿರುವ, ಮತ್ತೊಬ್ಬ ಬುಟ್ಟಿಯನ್ನು ಬೆನ್ನಿಗೆ ಹಾಕಿಕೊಳ್ಳುತ್ತಿರುವ, ಮುಖವಾಡ ಹಾಕಿಕೊಂಡ ಬೇಟೆಗಾರರು ವೃತ್ತಾಕಾರವಾಗಿ ಆಟದಲ್ಲಿ ತೊಡಗಿರುವ ಚಿತ್ರಗಳಿವೆ. ಕೆಂಪು ಮತ್ತು ಬಿಳಿವರ್ಣದಲ್ಲಿ ಚಿತ್ರಿಸಿರುವ ಚಿರತೆಯ ಚಿತ್ರವು ಆನೆ ಸವಾರನ ಚಿತ್ರದಿಂದ ಭಾಗಶಃ ಮುಚ್ಚಲ್ಪಟ್ಟಿದೆ. ತೀರ ಮೇಲ್ಭಾಗದಲ್ಲಿ ಅಶ್ವಸವಾರ, ಸೈನಿಕರ ಮತ್ತು ನೃತ್ಯಗಾರರ ಚಿತ್ರಗಳಿವೆ.

ಎರಡನೆಯ ಕಲ್ಲಾಸರೆಯಲ್ಲಿ ದನಗಾಯಿಯೊಬ್ಬ ತನ್ನ ದನಗಳನ್ನು ಕೂಗಿ ಕರೆಯುತ್ತಿರುವ ಚಿತ್ರವಿದೆ. ಜೊತೆಗೆ ಇಲ್ಲಿರುವ ನೈಜ ಅಳತೆಯ ಕಾಡುಹಂದಿ, ಘೇಂಡಾಮೃಗದ ತಲೆಯ ಮುಖವಾಡವನ್ನು ಧರಿಸಿರುವ ಮನುಷ್ಯ, ಸ್ತ್ರೀಯಕ ಚಿತ್ರಗಳು ಅತ್ಯುತ್ತಮ ರಚನೆಗಳಾಗಿವೆ.

II-B-೩೦ ಕಲ್ಲಾಸರೆಯಲ್ಲಿ ಸಂಯುಕ್ತ ಚಿತ್ರವೊಂದಿದೆ. ಒಂದು ವೃತ್ತದಲ್ಲಿ ಮೂರು ಮಕ್ಕಳನ್ನು ತೋರಿಸಲಾಗಿದ್ದು, ವ್ಯಕ್ತಿಯೊಬ್ಬ ಆ ವೃತ್ತದ ಸುತ್ತ ಕಂಬಗಳನ್ನು ನೆಡುತ್ತಿದ್ದಾನೆ. ಇಬ್ಬರು ತಮ್ಮ ಕೈಗಳನ್ನು ತಲೆಯ ಮೇಲೆ ಹೊತ್ತು ಕುಳಿತಿದ್ದಾರೆ. ಇದೊಂದು ಮಕ್ಕಳ ಶವ ಸಂಸ್ಕಾರದ ದೃಶ್ಯವೆಂದು ಗುರುತಿಸಬಹುದು.

ಲಖಾ ಜುಹಾರ್‌ನ ಎರಡು ಬೆಟ್ಟಗಳಲ್ಲಿ ೧೭೮ ಕಲ್ಲಾಸರೆಗಳಿವೆ. ಇವು ಕೂಡ ಭಿಂಬೇಟ್ಕಾದಂತೆ ಗವಿಚಿತ್ರಗಳ ದೃಷ್ಟಿಯಿಂದ ಶ್ರೀಮಂತವಾಗಿವೆ. ಬೇಟೆ ಮತ್ತು ಆಹಾರ ಸಂಗ್ರಹಣೆಯ ಚಿತ್ರಗಳು ಇಲ್ಲಿ ಮುಖ್ಯವಾಗಿವೆ. ಕೈಗಳನ್ನು ಮೇಲಕ್ಕೆತ್ತಿ ಓಡುತ್ತಿರುವ ಬೇಟೆಗಾರರ ಕಡ್ಡಿ ರೀತಿಯ ಚಿತ್ರಗಳು ಘೇಂಡಾಮೃಗ (೨-ಎ-೯) ದೊಡ್ಡ ಮೀನುಗಳು (೪-ಎ-೨೧) ಹಲವು ಗುಂಪುಗಳಲ್ಲಿ ಬೇಟೆಯಾಡುತ್ತಿರುವ ೮೦ ಬೇಟೆಗಾರರ(೨-೩) ಚಿತ್ರಗಳಿವೆ. ೪-ಸಿ-೧೧ರಲ್ಲಿನ ಗಿಡದ ಮೇಲೆ ಕುಳಿತಿರುವ ನವಿಲಿಗೆ ಬಾಣ ಹೂಡಿರುವ ಬಿಲ್ಲುಗಾರ ನೈಜ ಆಳತೆಯ ಕಾಡು ಹಂದಿ ಮತ್ತು ಶಿಲಾಯುಗದ ಕುಟುಂಬಗಳ ವಸತಿಯ

ಚಿತ್ರಗಳು ಇವೆ. ಪಶ್ಚಿಮ ಲಖಾ ಜುಹಾರ್‌ನ ಚಿತ್ರಗಳಲ್ಲಿ ಹಸಿರು ವರ್ಣದಲ್ಲಿ ಚಿತ್ರಿಸಿರುವ ನೃತ್ಯಗಾರರ ಗುಂಪಿನ, ಕೊಂಬಿನ ಮುಖವಾಡ, ಪ್ರಾಣಿಯ ಚರ್ಮವನ್ನು ಒಣಗಲು ಹಾಕಿರುವ ವಿಶೇಷ ಚಿತ್ರಗಳಿವೆ. ಜೊಂದ್ರಾದಲ್ಲಿ ಎಲೆಯಂತೆ ತೋರುವ ಮೂರು ಮೀನಿನ ಚಿತ್ರಗಳು ಗಮನ ಸೆಳೆಯುತ್ತವೆ.[೪೫]

**ಮಿರ್ಜಾಪುರ :** ಮಧ್ಯ ಪ್ರದೇಶದ ನಂತರ ಉತ್ತರ ಪ್ರದೇಶದ ಮಿರ್ಜಾಪುರವು ಪ್ರಾಗಿತಿಹಾಸ ಕಾಲದ ಚಿತ್ರಗಳ ದೃಷ್ಟಿಯಿಂದ ಅತ್ಯಂತ ಶ್ರೀಮಂತ ಪ್ರದೇಶವಾಗಿದೆ. ಮತ್ತು ಭಾರತದಲ್ಲಿ ಮೊಟ್ಟ ಮೊದಲಿಗೆ ಬೆಳಕಿಗೆ ಬಂದ ನೆಲೆಯು ಕೂಡ ಇದೇ ಪ್ರದೇಶದ್ದೆಂಬ ಹೆಗ್ಗಳಿಕೆ ಇದಕ್ಕಿದೆ. ಈ ಪ್ರದೇಶದಲ್ಲಿ ೩೬ ನೆಲೆಗಳಲ್ಲಿ ೬೦ ಕಲ್ಲಾಸರೆಗಳು ಇದ್ದು ಅವನ್ನು ನಾಲ್ಕು ಉಪವಿಭಾಗಗಳಲ್ಲಿ ವಿಂಗಡಿಸಲಾಗಿದೆ.[೪೬]

**ಅ. ಅಹರೌರ :** ಅಹರೌರ ನಗರಕ್ಕೆ ಸಮೀಪದ ಲಿಖಾನಿಯ ಕಲ್ಲಾಸರೆಯಲ್ಲಿ ಆನೆಯ ಸೆರೆ ಹಿಡಿಯುವಿಕೆಯ ದೃಶ್ಯ ಅತ್ಯಂತ ಸಹಜವಾಗಿದೆ. ಆನೆಯೊಂದನ್ನು ಒಬ್ಬ ಆನೆಸವಾರ ಹಾಗೂ ಅನೇಕ ಅಶ್ವಸವಾರರು ಸುತ್ತುವರಿದಿರುವ ಚಿತ್ರಗಳು ಕೆಂಪು ವರ್ಣದಲ್ಲಿವೆ. ಕಭರ್ ನಿಖಾನಿಯದ ಕಲ್ಲಾಸರೆಯಲ್ಲಿ ನೃತ್ಯನಿರತ ಮನುಷ್ಯ, ಜಿಂಕೆ ಮತ್ತು ಕೆಲವು ಸಂಕೇತ ಚಿತ್ರಗಳಿವೆ. ಮಹಾದರಿಯಾ ಕಲ್ಲಾಸರೆಯಲ್ಲಿ ನೀಳವಾದ ಕೂದಲಿನ ವ್ಯಕ್ತಿಯೊಬ್ಬ ನೃತ್ಯ ನಿರತವಾಗಿರುವ ಚಿತ್ರವಿದೆ. ಬಲಾದರಿಯದ ಮೂರು ಕಲ್ಲಾಸರೆಗಳಲ್ಲಿ ಅಶ್ವ ಸವಾರ, ನೀರಲ್ಲಿ ನಿಂತ ನೀರಹಕ್ಕಿಗಳು ಗಿಡದ ಕೆಳಗೆ ನಿಂತ ಎರಡು ಪ್ರಾಣಿಗಳ ಚಿತ್ರಗಳಿವೆ. ಇಲ್ಲಿರುವ ಗಾಯಗೊಂಡು ಬಾಯನ್ನು ತೆರದಿರುವ ಹಂದಿಯ ಚಿತ್ರವು ಗವಿಚಿತ್ರಗಳಲ್ಲಿಯೇ ಅತ್ಯುತ್ತಮವೆನ್ನಬಹುದು.

**ಆ. ರಾಬರ್ಟ್ಸ್‌ಗಂಜ್ :** ರಾಬರ್ಟ್ಸ್‌ಗಂಜ್ ನಗರದ ಸನಿಹದಲ್ಲಿ ೯ ಚಿತ್ರಿತ ಕಲ್ಲಾಸರೆಗಳಿವೆ. ಅವುಗಳಲ್ಲಿ ಲೊಹಾರಿಯ ಕಲ್ಲಾಸರೆಯಲ್ಲಿ ಹುಲಿಯ ಮುಂದೆ ಪಂಜನ್ನು ಹಿಡಿದು ನಿಂತಿರುವ ಮನುಷ್ಯನ ಚಿತ್ರ, ಪಾಚಮುಖಿ ಕಲ್ಲಾಸರೆಯಲ್ಲಿ ಅನೇಕ ಮನುಷ್ಯರ ರೇಖಾಚಿತ್ರಗಳು. ಗೊರಮನಗರ ಕಲ್ಲಾಸರೆಯಲ್ಲಿ ಘೇಂಡಾಮೃಗವನ್ನು ಬೇಟೆಯಾಡುತ್ತಿರುವ ಮನುಷ್ಯರ ಚಿತ್ರಗಳಿವೆ. ಬಿಜಯಗರ್ ಕೋಟೆಯ ಹತ್ತಿರ ಮೂರು ಕಲ್ಲಾಸರೆಗಳಿದ್ದು ಅವುಗಳಲ್ಲಿ ಪ್ರಾಣಿಗಳ ಚಿತ್ರಗಳು ಮತ್ತು ೩೪ ಶಿಲಾಶಾಸನಗಳಿವೆ. ದೋನ್ವಾ ಕಲ್ಲಾಸರೆಯಲ್ಲಿ ಮುಳ್ಳುಹಂದಿಯನ್ನು ಬೇಟೆಯಾಡುತ್ತಿರುವ ಇಬ್ಬರು ಮನುಷ್ಯ ಚಿತ್ರಗಳಿವೆ. ಕಂಡಕೋಟ ಬೆಟ್ಟದಲ್ಲಿ ಮೂರು ಕಲ್ಲಾಸರೆಗಳಿದ್ದು, ಅವುಗಳಲ್ಲಿ ಪ್ರಾಣಿಗಳ ಮತ್ತು ಹಸ್ತ ಮುದ್ರಿಕೆಯ ಚಿತ್ರಗಳಿವೆ. ಲಿಖಾನಿಯ II ಕಲ್ಲಾಸರೆಯಲ್ಲಿ ನೃತ್ಯಗಾರ, ಮಗುವಿನೊಂದಿಗೆ

ಆಟವಾಡುತ್ತಿರುವ ಮಹಿಳೆ, ಆಕಳು, ಕರುವಿನ ಚಿತ್ರಗಳಿವೆ. ಚಮಸ್ವಾ ಕಲ್ಲಾಸರೆಯಲ್ಲಿ ನೃತ್ಯಗಾರರ ಮತ್ತು ಐದು ಹಸ್ತ ಮುದ್ರಿಕೆಗಳ ಚಿತ್ರಗಳಿವೆ.[೪೭]

**ಇ. ಮೊರ್ಹನ್ :** ಈ ಉಪವಿಭಾಗದಲ್ಲಿ ಹತ್ತು ಕಲ್ಲಾಸರೆಗಳಿವೆ. ಅವುಗಳಲ್ಲಿ ಮೊರ್ಹನ್ ಪಹರ್ ಕಲ್ಲಾಸರೆಯ ಚಿತ್ರಗಳು ಮಹತ್ವದ್ದಾಗಿವೆ. ಕಿತ್ತಳೆ, ಕೆಂಪು, ನೇರಳೆ ಮತ್ತು ಬಿಳಿ ಬಣ್ಣಗಳಲ್ಲಿ ನೃತ್ಯದ, ಬೇಟೆಯ, ಪ್ರಾಣಿಗಳ ಚಿತ್ರಗಳನ್ನು ಚಿತ್ರಿಸಲಾಗಿದೆ. ಸೋನಾಭಂದ್ರ ಕಲ್ಲಾಸರೆಯಲ್ಲಿ ಸಾಂಬಾರ್, ನಾಯಿ, ನವಿಲು ಮತ್ತು ಜೇನು ಸಂಗ್ರಹಣೆಯ ಚಿತ್ರಗಳಿವೆ. ಈ ಪ್ರದೇಶದ ಇತರ ಕಲ್ಲಾಸರೆಗಳಲ್ಲೂ ಚಿತ್ರಗಳಿವೆ.

**ಈ. ಬೈನ್‌ಸೌರ್ :** ಬೈನ್‌ಸೌರ್‌ನಲ್ಲಿ ಒಂಭತ್ತು ಕಲ್ಲಾಸರೆಗಳಿವೆ. ಭಾಗ್, ಮೊರ್, ಛ್ವವಾ, ಖಾರಿ, ಪಥಾರಿ, ಭಗೈಕೋರ್, ಮುನಿಬಾಬಾ ಮತ್ತು ಲಿಖಾಹಹಿಯಾ ಕಲ್ಲಾಸರೆಗಳು ಪ್ರಮುಖವಾಗಿವೆ. ಬಾಗ್‌ನಲ್ಲಿ ಜಿಂಕೆ ರೀತಿಯ ಪ್ರಾಣಿಗಳ, ಮೂರು ಕೋಡಿನ ಶಿರಸ್ತ್ರಾಣ ಧರಿಸಿರುವ ಮನುಷ್ಯನ ಚಿತ್ರಗಳಿವೆ. ಮೊರ್ ಛ್ವವಾದಲ್ಲಿ ಇಣಿಯ ಗೂಳಿ ಸಂಕೇತ ಆಕೃತಿಗಳ ಚಿತ್ರಗಳಿವೆ.[೪೮] ಖಾರಿ ಫಥಾರಿಯಲ್ಲಿ ಪ್ರಾಣಿ, ಮನುಷ್ಯನ ಚಿತ್ರಗಳಿವೆ. ಭಗೈಖೋರ್ ದೊಡ್ಡಕಲ್ಲಾಸರೆ. ಇಲ್ಲಿ ಮನುಷ್ಯ ಹಾಗೂ ಗುರುತಿಸಲಾಗದ ಪ್ರಾಣಿಗಳಚಿತ್ರಗಳು, ಮುನಿಬಾಬಾ ಪಹಾರಿಯಲ್ಲಿ ಅಲಂಕೃತ ಆಕೃತಿಗಳ, ಪ್ರಾಣಿಗಳ ಚಿತ್ರಗಳಿವೆ. ಲಿಖಾ ಹಿಯಾ ಕಿ ಪಹಾರಿಯಲ್ಲೂ ಐದು ಕಲ್ಲಾಸರೆಗಳಿವೆ. ಆನೆಗಳ ಸಾಲಿನಲ್ಲಿ ಪಾಲಕಿ ಮೆರವಣಿಗೆಯ ಚಿತ್ರ ಇಲ್ಲಿ ಮುಖ್ಯವಾಗಿದೆ.[೪೯]

**ಬಂದಾ :** ಇಲ್ಲಿ ಒಂಭತ್ತು ಗವಿಚಿತ್ರಗಳ ನೆಲೆಗಳಿವೆ. ಇವುಗಳಲ್ಲಿ ಸರ್‌ಹತ್ ನೆಲೆಯಲ್ಲಿಬೇಟೆಗಾರರ, ರಥ ಸವಾರ ಮತ್ತು ಪ್ರಾಣಿಗಳ ಚಿತ್ರಗಳು, ಮಾಳ್ವ ನೆಲೆಯಲ್ಲಿ ಮೂರು ಅಶ್ವಸವಾರರ ಚಿತ್ರಗಳಿವೆ. ಕುರ್ಕೈಕುಂದದಲ್ಲಿ ಅಶ್ವಸವಾರರ ಚಿತ್ರಗಳಿವೆ. ಆಮುಲಿ, ಧರ್ಮಕುಂಡಿ, ಅಬರ್‌ಖಾನ್, ಮುರಾಖಂಡಿ, ಮುಜಹಾಗಾಂವ ಮತ್ತು ಉಲ್ದನ್ ಈ ಪ್ರದೇಶದ ಇತರ ಚಿತ್ರನೆಲೆಗಳು.[೫೦]

**ಅಲಹಾಬಾದ್ :** ಅಲಹಾಬಾದ್‌ನ ಮೇಜಾ ಉಪವಿಭಾಗದಲ್ಲಿ ಅನೇಕ ಚಿತ್ರಿತ ಕಲ್ಲಾಸರೆಗಳಿವೆ. ಅವುಗಳಲ್ಲಿ ಚಾಂದ್‌ತಾರಿ, ಚಂದ್ವಾ, ದರಿಯಾ, ಕುಪಗರ್, ಲಖಹಾರ್, ದೇವ್‌ಘಾಟ್, ರಾಮಘರ್ ಮತ್ತು ಪಿಯಾರಿ ಕಲ್ಲಾಸರೆಗಳು ಮಹತ್ವದ್ದಾಗಿವೆ. ಇಲ್ಲಿ ಕೆಂಪು ಮತ್ತು ಬಿಳಿ ವರ್ಣದಲ್ಲಿ ನೃತ್ಯಗಾರರ ಮತ್ತು ಆನೆ, ಹುಲಿ, ಕುದುರೆ, ನೀಲ್‌ಗಾಯಿ, ಹಂದಿ, ಸಾಂಬಾರ ಪ್ರಾಣಿಗಳ ಮತ್ತು ಹಲವಾರು ಸಂಕೇತಗಳ ಚಿತ್ರಗಳಿವೆ. ದರಿಯಾದಲ್ಲಿ ಹಿಂದಿನ ಚಿತ್ರಗಳ ಮೇಲೆ ಪುನಃ ಬರೆದ ಚಿತ್ರಗಳಿವೆ. ವಸಾಹ ಮತ್ತು ಚಾಂದ್ವಾಕಿ ಪಹಾರಿಯಲ್ಲಿ ಕೂಡ ಮೂರು ಚಿತ್ರಿತ ಕಲ್ಲಾಸರೆಗಳಿವೆ.[೫೧]

**ವಾರಣಾಸಿ :** ವಾರಣಾಸಿ ಜಿಲ್ಲೆಯ ಭೈರಗರ್ ಮತ್ತು ಗಬ್ಲ ಶಹಾಪುರಗಳಲ್ಲಿ ಗವಿಚಿತ್ರಗಳಿವೆ. ಕಂದು ಬಣ್ಣದಲ್ಲಿ ಬೇಟೆಯ ದೃಶ್ಯ ಕವಾಯತು ಮಾಡುತ್ತಿರುವ ಮನುಷ್ಯ ಹಾಗೂ ಅನೇಕ ರೇಖಾತ್ಮಕ ಚಿತ್ರಗಳು ಇಲ್ಲಿವೆ.

**ಆಗ್ರಾ :** ಆಗ್ರಾದ ಕಿರೌಲಿ ತಹಶೀಲ್‌ನ ಬದ್ರೌಲಿ, ಜಾಜುಲಿ, ಪತ್‌ಸಲ್ ಮತ್ತು ರಾಸಿಲ್‌ಪುರ್ ಕಲ್ಲಾಸರೆಗಳಲ್ಲಿ ಜಿಂಕೆ, ಎತ್ತು ಮನುಷ್ಯ ಚಿತ್ರಗಳು ಕಪ್ಪು, ಕೆಂಪು ವರ್ಣದಲ್ಲಿವೆ.

**ಬಿಹಾರ್ ಮತ್ತು ಒರಿಸ್ಸಾ :** ಬಿಹಾರ್ ಮತ್ತು ಒರಿಸ್ಸಾಗಳ ವಿಶಾಲ ಪ್ರದೇಶದಲ್ಲಿ ಕೆಲವೇ ಚಿತ್ರಿತ ಕಲ್ಲಾಸರೆಗಳು ಕಂಡುಬಂದಿವೆ. ಬಿಹಾರ್‌ದ ಸಿಂಗ್‌ಭೂಮ್ ಜಿಲ್ಲೆಯ ಘಟಸಿಲದಲ್ಲಿ ಕೊರೆದ ಚಿತ್ರಗಳು ಇವೆ.[೫೨] ಒರಿಸ್ಸಾದ ಸಂಬಲ್‌ಪುರ ಜಿಲ್ಲೆಯ ವಿಕ್ರಮಖೋಲ್ ಕಲ್ಲಾಸರೆಯಲ್ಲಿ ಅರೆಕೊರೆದ, ಅರೆಬಣ್ಣದಲ್ಲಿ ಬರೆದ ಚಿತ್ರ ಸಹಿತ ಶಾಸನವೊಂದು ಇದೆ.[೫೩]

**ವಾಯುವ್ಯ ಭಾಗ :** ವಾಯುವ್ಯ ಭಾರತದಲ್ಲಿ ಪಾಕಿಸ್ತಾನದ ಸಿಂಧೂನದಿ ದಡದ ಅಟೋಕ ಸೇತುವೆಯ ಬಳಿ ನಾಲ್ಕು ಕಡೆ ಗುಂಡುಗಳಲ್ಲಿ ಕೊರೆದ ಚಿತ್ರಗಳಿವೆ. ಇಣಿಯುಳ್ಳ ಗೂಳಿ, ಆನೆ ಸವಾರನೊಬ್ಬ ಕೈಗಳಲ್ಲಿ ಸ್ತ್ರೀ ಪುರುಷನನ್ನು ಹಿಡಿದಿರುವ ಪೌರಾಣಿಕ ಚಿತ್ರಗಳು ಇಲ್ಲಿವೆ. ಕೆಳಲಡಾಕ್‌ನ ೪ ಸ್ಥಳಗಳಲ್ಲಿ ಅಶ್ವಸವಾರರು, ಬೇಟೆಗಾರರು, ಪ್ರಾಣಿಗಳು, ಸ್ವಸ್ತಿಕ ಚಿನ್ಹೆ ಮತ್ತು ಸ್ತೂಪದ ಕೊರೆದ ಚಿತ್ರಗಳಿವೆ.

**ಕರ್ನಾಟಕ :** ಕರ್ನಾಟಕದ ಬಳ್ಳಾರಿ, ರಾಯಚೂರು, ಕೊಪ್ಪಳ, ಬಿಜಾಪುರ, ಬಾಗಲಕೋಟೆ, ಚಿತ್ರದುರ್ಗ, ಬೆಳಗಾವಿ, ಗುಲಬರ್ಗಾ, ಶಿವಮೊಗ್ಗ, ದಕ್ಷಿಣ ಕನ್ನಡ, ಬೆಂಗಳೂರು ಮುಂತಾದ ಜಿಲ್ಲೆಗಳಲ್ಲಿ ವರ್ಣಚಿತ್ರಿತ ಗವಿಗಳು ಕಲ್ಲಾಸರೆಗಳು ಮತ್ತು ಬಯಲು ಬಂಡೆ ಚಿತ್ರಗಳಿವೆ (ಕರ್ನಾಟಕದ ಕಲಾ ನೆಲೆಗಳ ಬಗ್ಗೆ ಮುಂದೆ ವಿವರಿಸಲಾಗಿದೆ).

**ಆಂಧ್ರಪ್ರದೇಶ :** ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಬಿಲ್ಲಾ ಸರಗಮ್‌ನ ಆದಿಹಳೆಯ ಶಿಲಾಯುಗದ ಗವಿಯಲ್ಲಿ ಕಪ್ಪುವರ್ಣದ ಚಿತ್ರಗಳಿದ್ದ ಬಗ್ಗೆ ತಿಳಿಯುತ್ತದೆ. ಕರ್ನೂಲ್ ಮತ್ತು ಬೇತಮ್‌ಚೇರ್ಲ ನಡುವಿನ ಕಾನ್ವಮದಕಲ್ ಬುಗ್ಗದಲ್ಲಿ ಸುಮಾರು ೩೦ ಚಿತ್ರಿತ ಕಲ್ಲಾಸರೆಗಳಿವೆ. ಇಲ್ಲಿ ವನ್ಯ ಪ್ರಾಣಿಗಳ, ಇಣಿಯುಳ್ಳ ಎತ್ತುಗಳ, ನವಿಲುಗಳ, ಮನುಷ್ಯ ರೇಖಾಕೃತಿಗಳ ಚಿತ್ರಗಳು ದಟ್ಟ, ತಿಳಿ ಕೆಂಪು, ಕಿತ್ತಳೆ ಮತ್ತು ಬಿಳಿ ಬಣ್ಣಗಳಲ್ಲಿ ಚಿತ್ರಿಸಲಾಗಿದೆ.[೫೪]

ಎ.ವಿ.ಎನ್.ಶರ್ಮಾರವರು ಚಿತ್ತೂರು ಜಿಲ್ಲೆಯ ನಾಗಲಾಪುರಮ್ ಬೆಟ್ಟದ ಕಂಭಕ್ಕಂ ಗವಿಗಳಲ್ಲಿ ಸುಮಾರು ೧೫ ಬಿಳಿ ಬಣ್ಣದ ರೇಖಾ ಚಿತ್ರಗಳನ್ನು ಶೋಧಿಸಿದ್ದಾರೆ. ಇತ್ತೀಚೆಗೆ ವಾರಂಗಲ್ ಜಿಲ್ಲೆಯ

ಪಾಂಡವುಲಗತ್ತು ಬೆಟ್ಟದಲ್ಲಿ ಮತ್ತು ರಾವುಲಪಲ್ಲಿ ಗ್ರಾಮದ ಹತ್ತಿರವಿರುವ ಬೆಟ್ಟದಲ್ಲಿ ಕೆಂಪು, ಬಿಳಿ, ಹಳದಿ, ಕಂದು ಮತ್ತು ಹಸಿರು ಬಣ್ಣಗಳಲ್ಲಿ ದನಗಳು, ಜಿಂಕೆ, ಆಡು ಮತ್ತು ಮನುಷ್ಯ ಚಿತ್ರಗಳು ಕಡ್ಡಿ ಮತ್ತು ಪೂರ್ಣರೂಪದಲ್ಲಿ ಕಂಡುಬಂದಿದೆ. ಇವು ದೊಡ್ಡ ಪ್ರಮಾಣದಲ್ಲಿದ್ದು ಗಮನಾರ್ಹವಾಗಿವೆ. ಕರೀಂನಗರ ಹತ್ತಿರದ ಬೂದಿಗೆಪಲ್ಲಿ, ಹೈದ್ರಾಬಾದ್ ಹತ್ತಿರದ ಎರಡನೂರು, ಕೋಕೆಪೇಟೆ, ಬೈನೇತಿಬಂಡ, ಸಂಗನುಂಪಲ್ಲಿ (ಮೆಹಬೂಬ ನಗರ ಹತ್ತಿರ), ಮುದುಮಲ, ಕರ್ನೂಲ್ ಹತ್ತಿರದ ಕೇತವರಂ, ಕಡಪ ಹತ್ತಿರದ ಚಿಂತಕುಂಡ ಮತ್ತು ಬೆದ್ದನಗಡ್ಡೆಗಳಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರಗಳು ಕಂಡುಬಂದಿವೆ.

**ಕೇರಳ :** ಕೇರಳದ ಕೋಜಿಕೋಡ್ ಜಿಲ್ಲೆಯ ಎಡಕಲ್‌ನಲ್ಲಿ ಮನುಷ್ಯರ, ಪ್ರಾಣಿಗಳ ಮತ್ತು ರೇಖಾ ಸಂಕೇತಗಳ ಚಿತ್ರಗಳಿವೆ. ಇತ್ತೀಚೆಗೆ ದಕ್ಷಿಣ ಕೇರಳದ ಈಡುಕ್ಕಿ ಜಿಲ್ಲೆಯ ಮರಿಯೂರಿ ರೇಂಜ್ ರಿಜರ್ವ ಪಾರೆಸ್ಟ್‌ನಲ್ಲಿ ಕಲ್ಲಾಸರೆ ದೊರೆತಿದ್ದು, ಅದರಲ್ಲಿ ಪ್ರಾಣಿಗಳ ಮತ್ತು ಹಿಂದಿನ ಮನುಷ್ಯ ಚಿತ್ರಗಳನ್ನು ಪುನಃ ತಿದ್ದಿದ ಚಿತ್ರಗಳು ಇವೆ.[illegible] ಹಾಗೂ ಉದಕ ಮಂಡಲದ ವೆಲೆರಿಕೊಂಬೆ, ವಿಡುಹಟ್ಟಿಗಳಲ್ಲಿ ಮರೆಯೂರು, ಉಳುತು ಆಲ, ಆಟಲ ಹಾಗೂ ತಿರುವನಂತಪುರಂನ ಪೆರುಕಲ್‌ವಿಲಗಳಲ್ಲಿ ಚಿತ್ರಗಳು ಕಂಡುಬಂದಿವೆ.

**ತಮಿಳುನಾಡು :** ತಮಿಳುನಾಡಿನ ವೆಲ್ಲೂರು ಜಿಲ್ಲೆಯ ಬೆಟ್ಟಗಳಲ್ಲಿ ಚಿತ್ರಗಳು ಕಂಡುಬಂದಿವೆ. ವೆಲ್ಲೂರು ತಾಲೂಕಿನ ಚಿನ್ನಪಲಂಬಕ್ಕಂ ಮತ್ತು ಸಿವಂತಪುರಂ ವಾಲಾಜಪೇಟೆ ತಾಲೂಕಿನ ಕಿಲ್ಮನ್ನಲ್, ಗುಡಿಯಾತ್ತಂ ತಾಲೂಕಿನ ಚನರಾಯನಪಳ್ಳಿ ಹಾಗೂ ವಾಣಿಯಂಬಾಡಿ ತಾಲೂಕಿನ ಪದ್ದೂರ್ ಬೆಟ್ಟಗಳಲ್ಲಿ, ತಿರುಪತೂರ್ ತಾಲೂಕಿನ ಚಂದ್ರಾಪುರಂಗಳಲ್ಲಿ ಗವಿಚಿತ್ರಗಳಿವೆ. ಇಲ್ಲಿಯ ಚಿತ್ರಗಳನ್ನು ಕೆಮ್ಮಣ್ಣು ವರ್ಣ ಮತ್ತು ಬಿಳಿವರ್ಣದಲ್ಲಿ ಬರೆಯಲಾಗಿದ್ದು, ಅಶ್ವಗಳು, ಮನುಷ್ಯ ಚಿತ್ರಗಳು ಸಾಮಾನ್ಯವಾಗಿವೆ. ಮತ್ತು ಕೃಷ್ಣಗಿರಿ ಜಿಲ್ಲೆಯ ಬೀರಪಲ್ಲಿ ಮಹಾರಾಜ ಖಡ್ಡೈ, ಮಲ್ಲಪಾಡಿ, ದಲಪಲ್ಲಿ, ಆಲಂಪಾಡಿ ಕೀಳ್‌ವಳ್ಳೈ, ತಿರುವಣ್ಣಾ ಮಲೈನ ಪಡ್ಯಂದಾಳ್, ಕೊಯಿಮತ್ತೂರು ಜಿಲ್ಲೆಯ ವೆಟ್ಟೈಕರನ್ ಮಲೈ, ಮಧುರೈ, ಸುಂದರರಾಜನಪಟ್ಟಿ, ಶಿರುಮಲೈ, ಮೀನ್‌ಪುಟ, ಕುರುಂಗಲ (ದಿಂಡಿಗಲ್ ಮಧುರೈ ನಡುವೆ)ಗಳಲ್ಲಿ ಚಿತ್ರಗಳು ಕಂಡುಬಂದಿವೆ.

**ಗೋವಾ :** ಗೋವಾ ರಾಜ್ಯದ ರೇಪೆಮ ತಾಲೂಕಿನ ಕಜೂರು ಮತ್ತು ಉಸ್‌ಗಾಲಿಮೋಲ್ ಎಂಬ ಸ್ಥಳಗಳಲ್ಲಿ ಬಂಡೆಗಳ ಮೇಲೆ ಕೊರೆದ ಚಿತ್ರಗಳಿವೆ. ಬಂಡೆಗಳ ಮೇಲೆ ಪ್ರತಿಸಾಲಿನಲ್ಲಿ ನಾಲ್ಕರಂತಿರುವ ೨ ಸಾಲಿನಲ್ಲಿ ಒಟ್ಟು ಎಂಟು ಗೂಳಿಗಳ ಪಾರ್ಶ್ವ ಭಂಗಿಯ ಚಿತ್ರ ದೃಶ್ಯವಿದೆ. ಕೆಲವಕ್ಕೆ ಮಾತ್ರ

ಇಣಿ ಇದೆ. ಕೋಡುಗಳು ನಾನಾ ಪ್ರಕಾರದಲ್ಲಿವೆ. ಒಂದರದ್ದು ಉದ್ದವಾಗಿದ್ದು, ಹಿಂದಕ್ಕೆ ಪೂರ್ಣವಾಗಿ ಬಗ್ಗಿದ್ದರೆ, ಮತ್ತೊಂದರದ್ದು ಕವಲೊಡೆದ ಕೊಂಬೆಯಂತೆ ಕಾಣುತ್ತದೆ. ಇನ್ನೊಂದರದ್ದು ಕಂಸಗಳಂತಿದೆ. ಮುಂಡವು ಸಪೂರವಾಗಿ ನೀಳವಾಗಿದ್ದು ಕಾಲು ಉದ್ದವಿದೆ. ಆದರೆ ಮರ್ಮಾಂಗವನ್ನು ಸರಿಯಾಗಿ, ಇಲ್ಲವೆ ಸರಿಯಾದ ಸ್ಥಾನದಲ್ಲಿ ತೋರಿಸಿಲ್ಲ. ಕೆಳಗಿನ ಸಾಲಿನಲ್ಲಿಯ ಒಂದೆರಡು ಗೂಳಿಗಳ ಕೋಡುಗಳು ಮೇಲಿನ ಸಾಲಿನ ಗೂಳಿಗಳ ಕಾಲುಗಳಿಗೆ ಸೇರಿ ಹೋಗಿವೆ. ಇನ್ನೊಂದು ನೆಲೆಯಲ್ಲಿ ತುಂಬ ಬಲಿಷ್ಠವಾದ ಗೂಳಿಯ ಚಿತ್ರವಿದೆ. ಕೊಂಬುಗಳು ಮುಂದೆ ಬಾಗಿದ್ದು ಹಾಯಲು ಬರುವಂತಿದೆ. ಇನ್ನೊಂದು ಚಿತ್ರದಲ್ಲಿ ಕ್ಷಕಿರಣ ಛಾಯಾಚಿತ್ರದಂತೆ ಶರೀರದ ಒಳಭಾಗವನ್ನು ತೋರಿಸುವ ಪ್ರಯತ್ನ ಮಾಡಲಾಗಿದೆ. ಕಾಲುಗಳನ್ನು ಅಗಲಿಸಿ ಕೈಗಳನ್ನು ಅಡ್ಡವಾಗಿ ಸ್ವಲ್ಪ ಮೇಲಕ್ಕೆತ್ತಿ ನಿಂತಿರುವ ಮನುಷ್ಯನ ಚಿತ್ರ ಮತ್ತು ಏಳು ಸುತ್ತಿನ ಕೋಟೆ ವಿನ್ಯಾಸದ ಚಕ್ರವ್ಯೂಹ ಚಿತ್ರಗಳು ಇಲ್ಲಿವೆ. ಚಕ್ರವ್ಯೂಹ ಚಿತ್ರದ ಮೇಲಿನ ಎಡಬದಿಯಲ್ಲಿ ಕತ್ತಿ ಹಿಡಿದ ಯೋಧರ, ಬಲಬದಿಯಲ್ಲಿ ಮೇಲಿನ ಮೂಲೆಯಲ್ಲಿ ಉದ್ದನೆ ಕತ್ತಿನ ಒಂದು ಪಕ್ಷಿಯ ಚಿತ್ರಗಳಿವೆ.[೫೬]

## ೪.೩. ಕರ್ನಾಟಕದಲ್ಲಿ

ಕರ್ನಾಟಕದಲ್ಲಿ ೧೮೮೦ರ ಸಮಯದಲ್ಲಿ ಹ್ಯೂಬರ್ಟ್ ನಾಕ್ಸ್ ಕಪಗಲ್‌ನಲ್ಲಿ ಕುಟ್ಟಿದ ಚಿತ್ರಗಳನ್ನು ಶೋಧಿಸಿದ ನಂತರ ೧೯೩೫ರಲ್ಲಿ ಲಿಯೋನಾರ್ಡ್‌ಮನ್ ಅವರು ಹಿರೇಬೆನಕಲ್- (ಗಂಗಾವತಿ ತಾ. ಕೊಪ್ಪಳ ಜಿಲ್ಲೆ) ಗುಡ್ಡದಲ್ಲಿ ಮೂರು ಗವಿ ವರ್ಣಚಿತ್ರಗಳನ್ನು ಸುಮಾರು ಅದೇ ಸಮಯದಲ್ಲಿ ಭಿಲ್ಲಮರಾಯನ ಗುಡ್ಡದಲ್ಲಿ ಕುಟ್ಟಿದ ಮತ್ತು ಗೀರು ಚಿತ್ರಗಳನ್ನು ಕಂಡುಹಿಡಿದರು.[೫೭]

ಲಿಯೋನಾರ್ಡ್‌ಮನ್ ಅವರ ಶೋಧನೆಯ ನಂತರ ೧೯೪೦ರ ದಶಕದಲ್ಲಿ ಮಸ್ಕಿ ಕಲ್ಲೂರು (ರಾಯಚೂರು ತಾ.) ಬಲಿಚಕ್ರ (ಯಾದಗೀರಿ ತಾ. ಗುಲಬರ್ಗಾ ಜಿಲ್ಲೆ) ಮತ್ತು ಆತನೂರು ಎಂಬಲ್ಲಿ ಹಿಂದಿನ ಹೈದ್ರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣ ಮತ್ತು ಭೂ ವಿಜ್ಞಾನ ವಿಭಾಗಗಳು ಕ್ರಮವಾಗಿ ಕುಟ್ಟಿದ ಮತ್ತು ಗವಿವರ್ಣ ಚಿತ್ರಗಳನ್ನು ಶೋಧಿಸಿ ತಮ್ಮ ಶಾಖೆಗಳ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿವೆ.[೫೮] ಆಗಿನ ಮುಂಬೈ ಸರ್ಕಾರದ ಕನ್ನಡ ಸಂಶೋಧನ ಸಂಸ್ಥೆಯು(೧೯೫೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸೇರಿಸಲ್ಪಟ್ಟಿತು). ಕುಳ್ಳೊಳ್ಳಿ[೫೯] (ಜಮಖಂಡಿ ತಾ., ಬಿಜಾಪುರ ಜಿಲ್ಲೆ) ಯಲ್ಲಿಯ ಗೀರಿದ ಕುಟ್ಟಿದ ಚಿತ್ರಗಳನ್ನು ೧೯೫೧ರಲ್ಲಿ ಪ್ರಕಟಿಸಿತು. ಅಲ್ಚಿನ್ ದಂಪತಿಗಳು ಪಿಕ್ಲಿಹಾಳ್ (ಲಿಂಗಸುಗೂರು ತಾ., ರಾಯಚೂರು ಜಿಲ್ಲೆ) ದಲ್ಲಿ ತಾವು ಶೋಧಿಸಿದ ಪ್ರಾಚೀನ ನೆಲೆಯ ಉತ್ಖನನ ಕಾಲದಲ್ಲಿ ಇವೆರಡೂ ತರಹದ ಚಿತ್ರಗಳನ್ನು ಕಂಡುಹಿಡಿದು ಅಧ್ಯಯನ ಮಾಡಿದ್ದಾರೆ.[೬೦]

ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ[೬೧](ಶಿರಗುಪ್ಪ ತಾ.) ಸಂಗನಕಲ್ಲು,[೬೨] ಬೆಳಗಲ್ಲು ಮತ್ತು ಕುರುಗೋಡು(ಬಳ್ಳಾರಿ ತಾ.) ಅಪ್ಪಯ್ಯನಹಳ್ಳಿಗಳಲ್ಲಿ ಇಂತಹ ಚಿತ್ರಗಳನ್ನು ಎಂ.ಎಸ್.ನಾಗರಾಜ್‌ರಾವ್, ರು.ಮ.ಷಡಕ್ಷರಯ್ಯ ಮೊದಲಾದವರು ಶೋಧಿಸಿದರು.

ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆಯ ಶೋಧನೆ ಮತ್ತು ಅಧ್ಯಯನ ಕ್ಷೇತ್ರದಲ್ಲಿ ಡಾ.ಅ.ಸುಂದರ ಅವರ ಕೊಡುಗೆ ಅಪೂರ್ವವಾಗಿದೆ. ಆ ಬಗೆಗೆ ಇಲ್ಲಿ ವ್ಯವಸ್ಥಿತ ಅಧ್ಯಯನ ನಡೆಸಿದವರಲ್ಲಿ ಅವರೇ ಮೊದಲಿಗರಾಗಿದ್ದಾರೆ. ೧೯೬೮ರಲ್ಲಿ ಡಾ.ಅ.ಸುಂದರರವರು ಲಿಯೋನಾರ್ಡ್ ಮನ್ ಅವರು ಹಿಂದೆ ಹಿರೇಬೆನಕಲ್ಲಿನಲ್ಲಿ ಶೋಧಿಸಿದ ಚಿತ್ರಗಳ ನೆಲೆಯನ್ನು ಗುರುತಿಸುವ ಸಂದರ್ಭದಲ್ಲಿ ಇನ್ನೂ ಒಂಭತ್ತು ಕಡೆ ಚಿತ್ರಗಳನ್ನು ಶೋಧಿಸಿ[೬೩] ಆ ಬಗೆಗೆ ಲೇಖನ ಪ್ರಕಟಿಸಿದರು.[೬೪] ತದನಂತರ ಅವರು ೧೯೭೪ ರಿಂದ ಕರ್ನಾಟಕದ ಹಲವಾರು ಭಾಗಗಳಲ್ಲಿ ಅನ್ವೇಷಣೆ ಕಾರ್ಯವನ್ನು ಕೈಗೊಂಡು ರಾಮದುರ್ಗ, ಬಾದಾಮಿ, ಹೊಸಮಹಾಕೂಟ, ಐಹೊಳೆ, ಕೊಪ್ಪಳ ಜಿಲ್ಲೆಯ ಬಿಳೆಬಾವಿ, ನಾರಾಯಣಪೇಟೆ, ಬಂಡಿಹರ್ಲಾಪುರ (ಎಲ್ಲವೂ ಕೊಪ್ಪಳ ತಾ.) ಮಲ್ಲಾಪುರ, ಆನೆಗುಂದಿ, ತಿರುಮಲಾಪುರ (ಗಂಗಾವತಿ ತಾ.) ಮಾನ್ವಿ, ಬೈಲಮರ್ಚೇಡ್ (ಮಾನ್ವಿ ತಾ.) ಮುಂತಾದೆಡೆಗಳಲ್ಲಿ ವರ್ಣಚಿತ್ರಗಳನ್ನು ಹಾಗೂ ತಾವರೆಗೆರೆ (ಕೊಪ್ಪಳ ಜಿಲ್ಲೆ) ಕುರುಗೋಡು, ಹಳಕುಂದಿ, (ಬಳ್ಳಾರಿ ಜಿಲ್ಲೆ), ಬ್ರಹ್ಮಗಿರಿ, ಜಟ್ಟಿಂಗ ರಾಮೇಶ್ವರ, ಚಿತ್ರದುರ್ಗ, ಚಂದ್ರವಳ್ಳಿ, (ಚಿತ್ರದುರ್ಗ ಜಿಲ್ಲೆ) ಬೋಳೆ (ಅಂಕೋಲಾ ಹತ್ತಿರ ಉತ್ತರ ಕನ್ನಡ ಜಿಲ್ಲೆ)ಗಳಲ್ಲಿ[೬೫] ಹಾಗೂ ಇತ್ತೀಚೆಗೆ ಹೊಳಲೂರು,[೬೬] ಮುತ್ತನಹಳ್ಳಿ(ಶಿವಮೊಗ್ಗ ತಾ.) ಹಿರೇಮಾದಾಪುರ(ಧಾರವಾಡ ಜಿಲ್ಲೆ)[೬೭]ನಲ್ಲಿ ಕುಟ್ಟಿದ ಹಾಗೂ ಗೀರಿದ ಚಿತ್ರಗಳನ್ನು ಶೋಧಿಸಿದ್ದಾರೆ. ಇವುಗಳ ಜೊತೆಗೆ ಶೋಧವಾದದ್ದನ್ನೆಲ್ಲಾ ಅಧ್ಯಯನ ಮಾಡಿ ಅನೇಕ ಲೇಖನಗಳನ್ನು[೬೮] ಮತ್ತು ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ.[೬೯] ವಿತ್ತೀಚಿಗೆ ಅವರು ಸಂಪಾದಿಸಿರುವ ಕರ್ನಾಟಕ ಚರಿತ್ರೆ ಸಂ.೧ರಲ್ಲಿ ಪ್ರಾಗಿತಿಹಾಸಕಾಲದ ಸಂಸ್ಕೃತಿ ಹಾಗೂ ಕಲೆಯ ಬಗೆಗೆ ವಿವರ ಪೂರ್ಣವಾಗಿ ವಿವೇಚಿಸಿದ್ದಾರೆ.

ಚಿತ್ರದುರ್ಗದ ಎಚ್.ಶ್ರೀಶೈಲ ಆರಾಧ್ಯರು, ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಯಲ್ಲಿ ಮತ್ತೆ ಸುಮಾರು ೨೫-೩೦ ವರ್ಣಚಿತ್ರಗಳನ್ನು ಕೆಲವು ಬಯಲುಬಂಡೆ ಚಿತ್ರಗಳನ್ನು ತಮ್ಮ "ಸಂಶೋಧನೆಯ ಹಾದಿಯಲ್ಲಿ" ಎಂಬ ಹೊತ್ತಿಗೆಯಲ್ಲಿ ಪ್ರಕಟಿಸಿದ್ದಾರೆ.[೭೦] ಡಾ. ಅ.ಸುಂದರರವರ ನಂತರ ಈ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ವ್ಯವಸ್ಥಿತ ಅಧ್ಯಯನ ನಡೆಸುತ್ತಿರುವವರೆಂದರೆ ಪ್ರೊ.ಲಕ್ಷ್ಮಣ್ ತೆಲಗಾವಿಯವರು. ಅವರು ಚಿತ್ರದುರ್ಗ ಜಿಲ್ಲೆಯ ೨೦ಕ್ಕೂ ಹೆಚ್ಚು ಗುಡ್ಡಗಳ ಪರಿಸರದಲ್ಲಿ ವ್ಯಾಪಕ

ಶೋಧನೆ ಮತ್ತು ಅಧ್ಯಯನ ಮಾಡಿದ್ದಾರೆ. ಕುಂದಾಪುರ ಹತ್ತಿರ ಗಾವಳಿ(ದ.ಕ.ಜಿಲ್ಲೆ)ಯಲ್ಲಿ ಬಯಲುಬಂಡೆ ಮತ್ತು ಗೀರು ಚಿತ್ರಗಳನ್ನು ವಸಂತ ಶೆಟ್ಟಿಯವರು,[೨೧] ಸೊಂದಾದಲ್ಲಿ ಎಚ್.ಆರ್. ರಘುನಾಥ್ ಭಟ್ಟರು ಚಿತ್ರಗಳನ್ನು ಶೋಧಿಸಿದ್ದಾರೆ.

ಹಂಪಿಯಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ[೨೨] ಮತ್ತು ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯ ನಿರ್ದೇಶನಾಲಯದವರು[೨೩] ಕೆಲವು ಚಿತ್ರಿತ ಕಲ್ಲಾಸರೆಗಳನ್ನು ಶೋಧಿಸಿದ್ದಾರೆ. ಮಲ್ಲಾಪುರದ ಖಾನಸಾಬ ಗವಿಯ ಚಿತ್ರಗಳನ್ನು ರು.ಮ.ಷಡಕ್ಷರಯ್ಯ ಹಾಗೂ ಸ್ವಿಡ್ಜರ್‌ಲ್ಯಾಂಡಿನ ಈ.ಓ.ಟಿಲ್ನರ್ ಮತ್ತು ಬ್ರಿಗೆಟ್ಟೆಯವರು[೨೪] ಬೆಂಗಳೂರು ಜಿಲ್ಲೆಯ ಗೋತಗಿರಿ ಬೆಟ್ಟ ಹಾಗೂ ದೊಡ್ಡ ಕನ್ನೆಳ್ಳಿಯಲ್ಲಿ ಚಿತ್ರಗಳನ್ನು ಗೋರ್ಡನ್‌ರವರು ದಾಖಲಿಸಿದ್ದಾರೆ.[೨೫] ಇದೇ ಜಿಲ್ಲೆಯ ಸಾಸಲು ಗ್ರಾಮದ ಚಿತ್ರಗಳನ್ನು ಜೆ.ವಿಶ್ವನಾಥ ಹಾಗೂ ಎಂ.ಜಿ.ಮಂಜುನಾಥರವರು,[೨೬] ಸೂಳೆಕಲ್ ಮಠದ ಚಿತ್ರಗಳನ್ನು ಮುತ್ತುರಾಜರವರು,[೨೭] ತಾವರೆಗೆರೆಯ (ಕೊಪ್ಪಳ ಜಿಲ್ಲೆ) ವರ್ಣಚಿತ್ರಗಳನ್ನು ವಿಲಾಸ ಜೋಗುಳರವರು,[೨೮] ಗಬ್ಬೂರಿನ (ರಾಯಚೂರುಜಿಲ್ಲೆ) ರೇಖಾಚಿತ್ರಗಳನ್ನು ದೇವರಕೊಂಡಾರೆಡ್ಡಿಯವರು ಶೋಧಿಸಿದ್ದಾರೆ.[೨೯]

ಮಂಡ್ಯ ಜಿಲ್ಲೆಯ ವೇದಿಕ್ ನಗರದ ಚಿತ್ರಗಳನ್ನು ಜೆ.ಟಿ.ಜಯರಾಮಯ್ಯ ಹಾಗೂ ಇತರರು[೩೦] ಕೊಪ್ಪಳದಲ್ಲಿ ಮತ್ತೇ ಟಿ.ಶಂಭುಲಿಂಗಪ್ಪ,[೩೧] ಬಿ.ಸಿ.ಪಾಟೀಲ್‌ರವರು,[೩೨] ಕಮಲಾಪುರದ ವರ್ಣ ಮತ್ತು ಕೊರೆದ ಚಿತ್ರಗಳನ್ನು ಪ್ರೊ.ಲಕ್ಷ್ಮಣ್ ತೆಲಗಾವಿಯವರು ಶೋಧಿಸಿದ್ದಾರೆ.

ಕರ್ನಾಟಕದಲ್ಲಿ ವರ್ಣಚಿತ್ರಗಳು ರಾಮದುರ್ಗ, ಬಾದಾಮಿ, ಐಹೊಳೆ, ಕೊಪ್ಪಳ, ಪಿಕ್ಕಿಹಾಳ್, ಹಿರೇಬೆನಕಲ್, ಆನೆಗುಂದಿ, ಹಂಪಿ, ರಾಯಚೂರು, ಮಾನ್ವಿ, ಬ್ರಹ್ಮಗಿರಿ, ಚಿತ್ರದುರ್ಗ ಪ್ರದೇಶಗಳಲ್ಲಿ ಹೆಚ್ಚಾಗಿ ಇವೆ. ಬಯಲು ಬಂಡೆ ಚಿತ್ರಗಳು ಭಿಲ್ಲಮರಾಯನ ಗುಡ್ಡ, ಪಿಕ್ಲಿಹಾಳ್, ತಾವರಗೆರೆ, ಕುರುಗೋಡು, ಸಂಗನಕಲ್ಲು, ಬೆಳಗಲ್, ಹಳಕುಂದಿ, ಅಪ್ಪಯ್ಯನ ಹಳ್ಳಿಗಳಲ್ಲಿ ಮಲೆನಾಡಿನ ಹೊಳಲೂರು, ಸೊಂದಾ, ಪಶ್ಚಿಮ ಕಡಲು ತೀರದ ಅಂಕೋಲಾ, ಕುಂದಾಪುರ ಪ್ರದೇಶಗಳಲ್ಲಿ, ದಕ್ಷಿಣ ಕರ್ನಾಟಕದ ಬೆಂಗಳೂರು, ಮಂಡ್ಯ ಪ್ರದೇಶದಲ್ಲಿ ಇವೆ. ಬಿಡಿಯಾಗಿ ಗುಲಬರ್ಗಾ, ಬೆಳಗಾವಿ, ಧಾರವಾಡ ಜಿಲ್ಲೆಯಲ್ಲೂ ಇವೆ. ಕರ್ನಾಟಕದಲ್ಲಿ ಇದುವರೆಗೆ ಕಂಡುಬಂದಿರುವ ಪ್ರಮುಖ ಚಿತ್ರನೆಲೆಗಳು ಜಿಲ್ಲಾವಾರು ಇಂತಿವೆ.

**ರಾಯಚೂರು :** ರಾಯಚೂರು ಜಿಲ್ಲೆಯ ಆತನೂರು(ತೊಗಲಗುಡ್ಡ) (ರಾಯಚೂರು ತಾ.) ಮಾನ್ವಿ, ಬೈಲಮರ್ಚೇಡ್, ಶಿರವಾರ್(ಮಾನ್ವಿ ತಾ.) ಪಿಕ್ಲಿಹಾಳ್(ಲಿಂಗಸುಗೂರು ತಾ.)ಗಳಲ್ಲಿ ಚಿತ್ರಿತ ಕಲ್ಲಾಸರೆಗಳಿವೆ. ಮಾನ್ವಿಯಲ್ಲಿ ಸುರುಳಿ ಚಿತ್ರಪಟದಂತೆ ಸಾಲು ಸಾಲಾಗಿ ವರ್ಣಚಿತ್ರ ಪಟ್ಟಿಕೆಗಳಿವೆ. ಇವು ಪೌರಾಣಿಕ ಕಥಾನಕ ದೃಶ್ಯಗಳಾಗಿದ್ದು ಶೈಲಿಯಿಂದ ವಿಜಯನಗರ ಕಾಲದವು. ಬೈಲಮರ್ಚೇಡ್‌ನ ಗುಡ್ಡದ ಅಂಚಿನಲ್ಲಿ 'ಕಾಟಮಯ್ಯನ ಗುಂಡು' ಎಂಬ ಕಲ್ಲಾಸರೆ ಇದೆ. ಅದರ ಒಳಮೈಯಲ್ಲಿ ಎರಡು ಗುಂಪುಗಳ ಚಿತ್ರಗಳಿವೆ. ಮೊದಲ ಗುಂಪಿನಲ್ಲಿ ಕುದುರೆ ಸವಾರರ ಮತ್ತು ಗೂಳಿಗಳ ಚಿತ್ರಗಳಿವೆ. ಕಾದಾಡುತ್ತಿರುವ ಮೂರು ಜೋಡಿ ಅಶ್ವಸವಾರರ, ಎರಡನೇ ಗುಂಪಿನಲ್ಲಿ ಕುದುರೆ ಸವಾರರ, ಓಡುತ್ತಿರುವ ದನಗಳ ಚಿತ್ರಗಳಿವೆ. ಇದು ಗ್ರೋಗ್ರಹಣದ ಚಿತ್ರವಿರಬೇಕು. ಮತ್ತೊಂದು ಬದಿಯಲ್ಲಿ ಅಂಗೈಯ ಮುದ್ರಿತ ಚಿತ್ರಗಳಿವೆ. ಇವುಗಳನ್ನು ಕಂದು ಕೆಂಪು ಬಣ್ಣದಲ್ಲಿ ಬರೆಯಲಾಗಿದೆ.

ಆತನೂರು, ಶಿರವಾರಗಳಲ್ಲಿ ಮನುಷ್ಯರ ಚಿತ್ರಗಳನ್ನು ಕಡ್ಡಿಯ ರೂಪದಲ್ಲಿ ಚಿತ್ರಿಸಲಾಗಿದೆ. ಪ್ರಾಣಿಗಳ, ವಿಚಿತ್ರ ರೀತಿಯ ಪಕ್ಷಿಗಳ ಚಿತ್ರಗಳು ಇಲ್ಲಿವೆ. ಚಿತ್ರಗಳು ಚದುರಿದಂತಿದ್ದು ಮನುಷ್ಯ, ಪ್ರಾಣಿ ಹಾಗೂ ಪಕ್ಷಿಗಳ ಚಿತ್ರಗಳು ಛಾಯಾರೂಪದಲ್ಲಿವೆ. ಪಿಕ್ಲಿಹಾಳಿನ ವರ್ಣಚಿತ್ರಗಳು ಕೆಂಪು ಮತ್ತು ಮಾಸಲು ಕಂದು ವರ್ಣದಲ್ಲಿವೆ. ಒಂದು ಗವಿಯಲ್ಲಿ ದೊಡ್ಡ ಪ್ರಮಾಣದ ಹಲ್ಲಿ, ಕುರಿ ಮತ್ತು ಕೈಗಳನ್ನು ಮೇಲಕ್ಕೆತ್ತಿ ನರ್ತಿಸುತ್ತಿರುವ ಸ್ತ್ರೀಯ ಚಿತ್ರಗಳಿವೆ. ಮತ್ತೊಂದು ಕಲ್ಲಾಸರೆಯಲ್ಲಿ ಹಲ್ಲಿ, ಹಾವು, ಆನೆ ಮತ್ತು ರೇಖಾಚಿತ್ರಗಳಿವೆ. ಮತ್ತೊಂದೆಡೆ ಒಬ್ಬ ವ್ಯಕ್ತಿ ತನ್ನ ಭುಜಗಳನ್ನು, ಕಾಲುಗಳನ್ನು ಆಗಲಿಸಿ ನಿಂತ ಚಿತ್ರ, ಎತ್ತು, ಮನುಷ್ಯ ಮತ್ತು ಸಾಂಬಾರ್ ಪ್ರಾಣಿಗಳ ಚಿತ್ರಗಳಿವೆ. ಇವು ಛಾಯಾರೂಪದ ಚಿತ್ರಗಳಾಗಿವೆ. ಇತರ ಎರಡು ಕಡೆಗಳಲ್ಲಿ ಖಡ್ಗವನ್ನು ಎತ್ತಿ ಹಿಡಿದ ಮನುಷ್ಯನ ಮತ್ತು ಕುದುರೆ ಸವಾರ ಮತ್ತಿತರ ಚಿತ್ರಗಳು ಇವೆ.

ಜಿಲ್ಲೆಯ ಕಲ್ಲೂರು (ರಾಯಚೂರು ತಾ.) ಭಿಲ್ಲಮರಾಯನ ಗುಡ್ಡ, ಪಿಕ್ಲಿಹಾಳ, ಮಸ್ಕಿ (ಲಿಂಗಸುಗೂರು ತಾ.) ಮತ್ತು ಗಬ್ಬೂರು(ದೇವದುರ್ಗ ತಾ.)ಗಳಲ್ಲಿ ಬಯಲುಬಂಡೆ ಕೊರೆದ ಕುಟ್ಟು ಚಿತ್ರಗಳಿವೆ. ಕಲ್ಲೂರಿನ ಎಮ್ಮೆಗುಡ್ಡದಲ್ಲಿ ಒಂದು ದೊಡ್ಡ ಬಂಡೆಯ ಮೇಲೆ ಕೆಲವು ಕುಟ್ಟು ಚಿತ್ರಗಳಿವೆ. ಅವುಗಳಲ್ಲಿ ಒಂದರ ಹಿಂದೆ ಒಂದು ನಿಂತ ಎರಡು ಎಮ್ಮೆಗಳ ದೊಡ್ಡ ಪ್ರಮಾಣದ ಚಿತ್ರಗಳು ಪ್ರಮುಖವಾಗಿವೆ. ನಿಲುವಿನಲ್ಲಿ ಮಂದಗತಿ ಇದೆ. ಚಿತ್ರದ ಉದ್ದಗಲಕ್ಕೂ ಒಂದೇ ಸಮನಾಗಿ ತೆಳ್ಳಗೆ ನಿಬಿಡವಾಗಿ ಕುಟ್ಟಿರುವುದರಿಂದ ಇಡೀ ಚಿತ್ರವು ಕಪ್ಪು ಕಲ್ಲಿನ ಹಿನ್ನೆಲೆಯಲ್ಲಿ ಒಡೆದೆದ್ದು ಕಾಣುತ್ತದೆ. ಇವುಗಳ ಕೋಡುಗಳು ಅಂಡಾಕೃತಿಯಂತೆ ಒಂದೇ ರೀತಿಯಲ್ಲಿ ಒಳಬಾಗಿವೆ. ದೇಹ ಬಲಿಷ್ಠತೆಯನ್ನು ಬಿಂಬಿಸುತ್ತದೆ.

ಬಿಲ್ಲಮರಾಯನಗುಡ್ಡ ಕರಡಿಕಲ್‌ನಿಂದ ವಾಯುವ್ಯಕ್ಕೆ ಒಂದೂವರೆ ಕಿ.ಮೀ.ದೂರದಲ್ಲಿದೆ. ಇಲ್ಲಿಯ ಬಂಡೆಗಳಲ್ಲಿ ಅನೇಕ ಕುಟ್ಟಿದ ಚಿತ್ರಗಳಿವೆ. ಮನುಷ್ಯ, ಪ್ರಾಣಿಗಳ ಮತ್ತು ಅಲಂಕೃತ ಆಕೃತಿಗಳ ಚಿತ್ರಗಳಿವೆ. ಕೈಗಳಲ್ಲಿ ಖಡ್ಗ ಹಿಡಿದ ಇಬ್ಬರು ಮನುಷ್ಯರ ಚಿತ್ರ. ಮತ್ತೊಂದು ಮನುಷ್ಯನ ರೇಖಾಚಿತ್ರ ನೈಜ ಅಳತೆಯಲ್ಲಿದೆ. ಪ್ರಾಣಿಗಳಲ್ಲಿ ಹೆಚ್ಚಿನವು ವೈವಿಧ್ಯಮಯ ಅಳತೆ ಮತ್ತು ಶೈಲಿಯ ಗೂಳಿ ಚಿತ್ರಗಳು. ಇವು ನಾಲ್ಕು ವಿಧದಲ್ಲಿವೆ. ಇಲ್ಲಿಯ ಹುಲಿ ಚಿತ್ರದ ರಚನೆ ವಿಶೇಷವಾಗಿದೆ. ಹುಲಿಯ ಕಾಲುಗಳು ಸ್ವಲ್ಪ ಮುಂಚಾಚಿವೆ. ದೇಹದ ಮೇಲಿನ ಬಿಡಿಪಟ್ಟಿಗಳನ್ನು ದಪ್ಪವಾಗಿ ತೋರಿಸಲಾಗಿದೆ. ಕಾಲುಗಳನ್ನು ಕುಟ್ಟು ರೀತಿಯಿಂದ ಉಳಿದ ಭಾಗವನ್ನು ಕೊರೆದ ರೀತಿಯಿಂದ ಬಿಡಿಸಲಾಗಿದೆ.

ಪಿಕ್ಲಿಹಾಳದಲ್ಲಿ ಎತ್ತಿನ, ಮನುಷ್ಯರ ಚಿತ್ರಗಳು ಅನೇಕ ವಿಧದಲ್ಲಿವೆ. ಜೊತೆಗೆ ಕುದುರೆ, ಸಾಂಬಾರ್, ಕುರಿ, ಆಡು, ಜಿಂಕೆ ಮತ್ತಿತರ ಚಿತ್ರಗಳನ್ನು ಕುಟ್ಟಲಾಗಿದೆ. ಜಿಂಕೆಗಳ ಹಿಂಡನ್ನು ಕೊರೆಯಲಾಗಿದೆ. ಮಸ್ಕಿ ನವಶಿಲಾಯುಗ ಕಾಲದ ಕುಟ್ಟು ಚಿತ್ರಗಳ ಶ್ರೀಮಂತ ನೆಲೆ. ಇಲ್ಲಿಯ ಬೆಟ್ಟದ ಅನೇಕ ಬಿಡಿ ಗುಂಡುಗಳಲ್ಲಿ ಅಧಿಕ ಸಂಖ್ಯೆಯಲ್ಲಿ ಎತ್ತುಗಳ ಮನುಷ್ಯರ ಅಶ್ವಸವಾರರ ಹುಲಿಗಳ ಮತ್ತು ನವಿಲುಗಳ ಚಿತ್ರಗಳನ್ನು ಕುಟ್ಟಿ ಮೂಡಿಸಲಾಗಿದೆ. ಧಾರ್ಮಿಕ ಕಟ್ಟಳೆಯ ಕತ್ತಿಯನ್ನು ಹಿಡಿದುಕೊಂಡ ಮನುಷ್ಯ ಮತ್ತು ಕತ್ತಿಯ ಚಿತ್ರಗಳು ಇಲ್ಲಿವೆ. ಎತ್ತುಗಳಲ್ಲಿ ಉದ್ದವಾದ ಕೋಡುಗಳು ಗಮನ ಸೆಳೆಯುತ್ತವೆ.

**ಕೊಪ್ಪಳ :** ಕೊಪ್ಪಳ ಜಿಲ್ಲೆಯ ಕೊಪ್ಪಳ, ಗಂಗಾವತಿ ಮತ್ತು ಕುಷ್ಟಗಿ ತಾಲೂಕುಗಳಲ್ಲಿ ವರ್ಣಚಿತ್ರ ನೆಲೆಗಳಿವೆ (ಕೊಪ್ಪಳ ಮತ್ತು ಗಂಗಾವತಿ ತಾಲೂಕಿನ ಚಿತ್ರ ನೆಲೆಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ). ಕುಷ್ಟಗಿ ತಾಲೂಕಿನ ತಾವರೆಗೆರೆಯಲ್ಲಿ ಗವಿ ಚಿತ್ರಗಳು ಬಯಲು ಬಂಡೆ ಚಿತ್ರಗಳು ಕಂಡುಬಂದಿದ್ದು ಅವು ಇಂತಿವೆ.

ಒಂದನೇ ಕಲ್ಲಾಸರೆಯಲ್ಲಿ ಒಂದರ ಹಿಂದೆ ಒಂದರಂತೆ ಸಾಲಾಗಿ ಸಾಗುತ್ತಿರುವ ಹನ್ನೆರಡು ಜಿಂಕೆ ಚಿತ್ರಗಳಿವೆ. ಕೋಡುಗಳು ರೋಮನ್ U ಮತ್ತು V ಅಕ್ಷರದಂತಿವೆ. ಇವೆಲ್ಲಾ ತುಂಬು ವರ್ಣದ ಛಾಯಾರೂಪದವು. ಅದೇ ರೀತಿ ಇಲ್ಲಿ ಮಂಗ, ಕುಣಿಯುತ್ತಿರುವ ಇಬ್ಬರು ಮನುಷ್ಯರ, ನೀರಿನ ಜಲಪಾತದ? ಚಿತ್ರಗಳಿವೆ.

ಎರಡನೇ ಕಲ್ಲಾಸರೆಯಲ್ಲಿ ಮೂರು ಜಿಂಕೆಗಳು, ಮೂರರಲ್ಲಿ ಬೇಟೆ ಪ್ರಾಣಿಯೊಂದಿಗಿನ ಬೇಟೆಗಾರ, ನಾಲ್ಕರಲ್ಲಿ ಎರಡು ರೇಖಾಕೃತಿಯ ಮನುಷ್ಯ ಚಿತ್ರಗಳು, ಐದರಲ್ಲಿ ಮೇಜಿನಂತಹ

ಪೀಠೋಪಕರಣ, ಅದರಲ್ಲಿ ಎರಡು ಮಡಿಕೆಗಳು, ಏಳರಲ್ಲಿ ಎರಡು ಮೀನು ಚಿತ್ರಗಳಿವೆ. ಇಲ್ಲಿಯೇ ಅನೇಕ ಕೊರೆದ ಚಿತ್ರಗಳಿವೆ. ಅವುಗಳಲ್ಲಿ ಗೂಳಿಯ ಚಿತ್ರಗಳು ಪ್ರಮುಖವಾಗಿವೆ.

ಬಳ್ಳಾರಿ : ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ಕುರುಗೋಡು(ಬಳ್ಳಾರಿ ತಾ.), ತೆಕ್ಕಲಕೋಟೆ(ಶಿರಗುಪ್ಪ ತಾ.), ಹಂಪಿ, ವೆಂಕಟಾಪುರ, ಕಮಲಾಪುರ (ಹೊಸಪೇಟೆ ತಾ.)ಗಳಲ್ಲಿ ಗವಿವರ್ಣಚಿತ್ರಗಳಿವೆ. ಸಂಗನಕಲ್ಲಿನಲ್ಲಿ ಒಂದು ಚಿತ್ರಿತ ಕಲ್ಲಾಸರೆ ಇದೆ. ಅಲ್ಲಿಯ ಚಿತ್ರಗಳು ಪ್ರಾಗೈತಿಹಾಸಿಕ ಕಾಲದವಲ್ಲ. ಆದರೆ ಅವುಗಳ ಶೈಲಿ ರೇಖಾವಿನ್ಯಾಸಗಳು ಆದಿ ಮಾನವನ ಚಿತ್ರಗಳಂತಿವೆ. ಕುರುಗೋಡಿನಲ್ಲಿ ಎಂಟು ಕಲ್ಲಾಸರೆಗಳಲ್ಲಿ ಚಿತ್ರಗಳಿವೆ. ಗರ್ಭಧರಿಸಿದ ಜಿಂಕೆ, ಕೆಲವು ಜನರ ಕೈಯಲ್ಲಿ ಕೋಲು, ಈಟಿ ಮೊದಲಾದ ಆಯುಧಗಳನ್ನು ಹಿಡಿದುಕೊಂಡು ಪ್ರಾಣಿಗಳನ್ನು ಬೇಟೆಯಾಡುತ್ತಿರುವ, ನೃತ್ಯಗಾರರ ಚಿತ್ರಗಳು, ಆನೆ ಸಮೂಹ, ಕೋಣ, ಎಮ್ಮೆ, ಜಿಂಕೆ, ಚಿಗರೆ, ಎದುರಾಗಿ ನಿಂತಿರುವ ಜೋಡಿ ಜಿಂಕೆಗಳು ಮತ್ತಿತರ ಚಿತ್ರಗಳಿವೆ.

ತೆಕ್ಕಲಕೋಟೆಯಲ್ಲಿಯ ಒಂದು ಕಲ್ಲಾಸರೆಯಲ್ಲಿಯ ಆರು ಮನುಷ್ಯರ, ಎರಡು ನಾಯಿ, ಒಂದು ಗೂಳಿಯ ಚಿತ್ರಗಳು ಒಂದು ಬದಿಯಲ್ಲಿ ಹಾಗೂ ಇನ್ನೊಂದು ಬದಿಯಲ್ಲಿ ಮೂರು ಜನರ ಮತ್ತು ೧೩ ಜನರ ತಂಡ ಕೈ ಕೈ ಹಿಡಿದು ನರ್ತಿಸುತ್ತಿರುವ ಚಿತ್ರಗಳಿವೆ. ಹಂಪಿಯಲ್ಲಿ, ಏಳು ಕಮಲಾಪುರದಲ್ಲಿ ಒಂದು ಮತ್ತು ವೆಂಕಟಾಪುರದಲ್ಲಿ ಎರಡು ಕಲ್ಲಾಸರೆಗಳಿವೆ(ಇವುಗಳ ಬಗೆಗೆ ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ).

ಬಳ್ಳಾರಿ ಜಿಲ್ಲೆಯ ಕಪಗಲ್, ಕುರುಗೋಡು, ಹಳಕುಂದಿ, ಬೆಳಗಲ್ಲು(ಬಳ್ಳಾರಿ ತಾ.), ಕಮಲಾಪುರ, ನಂದಿಬಂಡಿ(ಹೊಸಪೇಟೆ ತಾ.), ಅಪ್ಪಯ್ಯನಹಳ್ಳಿ(ಕೊಟ್ಟೂರು ತಾ.) ಮತ್ತು ರಾಜಾಪುರ, ಬೈರನಾಯಕನ ಹಳ್ಳಿ(ಸಂಡೂರು ತಾ.)ಗಳಲ್ಲಿ ಬಯಲುಬಂಡೆ ಕೊರೆದ ಕುಟ್ಟಿದ ಚಿತ್ರಗಳಿವೆ.

ಕಪಗಲ್‌ನಲ್ಲಿ ವ್ಯಕ್ತಿಯೊಬ್ಬ ಸ್ತ್ರೀಯ ತಲೆಗೂದಲನ್ನು ಹಿಡಿದಿರುವುದು, ಸ್ತ್ರೀ ಪುರುಷರ ಸಂಭೋಗದ ಹಲವು ಚಿತ್ರಗಳು, ದೊಡ್ಡ ಕೊಂಬಿನ ಎತ್ತು ಮತ್ತು ಅದರ ಎರಡೂ ಕೊಂಬುಗಳ ನಡುವೆ ರೋಮನ್ T ಆಕಾರದ ರೇಖೆಯ ಮೇಲೆ ನಿಂತ ಎತ್ತಿನ ಚಿತ್ರ, ನಗ್ನ ವ್ಯಕ್ತಿಯೊಬ್ಬ ಬಲಗೈಯಲ್ಲಿ ತನ್ನ ಶಿಶ್ನ ಹಿಡಿದು ಎಡಗೈಯಲ್ಲಿ ಭರ್ಚಿಯನ್ನು ಹಿಡಿದು ನಿಂತಿರುವ, ಜಿಂಕೆ, ಬೇಟೆ, ಪಾನೀಯವನ್ನು ಸೇವಿಸುತ್ತಿರುವ ವ್ಯಕ್ತಿಗಳು, ಪುಷ್ಪಾಕಾರದಲ್ಲಿ ವೃತ್ತದ ಸುತ್ತ ಎತ್ತುಗಳು, ಅಶ್ವಸವಾರರ, ಆನೆ ಸವಾರ, ಆನೆ, ನವಿಲುಗಳು ಮತ್ತಿತರ ವೈವಿಧ್ಯಮಯವಾದ ಕೊರೆದ ಮತ್ತು ಕುಟ್ಟಿದ ಚಿತ್ರಗಳಿವೆ.

ಕುರುಗೋಡಿನಲ್ಲಿ ಜಿಂಕೆಗಳ, ಆನೆಗಳ, ಗೂಳಿಯ ಚಿತ್ರಗಳಿವೆ. ಹಳಕುಂದಿಯಲ್ಲಿ ವಿವಿಧ ಶೈಲಿಯ ಎತ್ತು, ಕುದುರೆ ಮುಂತಾದ ಪ್ರಾಣಿಗಳ ಚಿತ್ರಗಳಿವೆ. ಸಮಕಾಲೀನ ಮನುಷ್ಯ ಮತ್ತು ಆಂಜನೇಯ ಚಿತ್ರಗಳು ಇಲ್ಲಿವೆ. ಇಲ್ಲಿಯ ವಿವಿಧ ಚಿತ್ರಗಳಲ್ಲಿ ಜಿಂಕೆಗಳ ಸಮೂಹ ವಿಶೇಷವಾಗಿದೆ. ಉದ್ದನೆ ಉರ್ದ್ವ ಕೋಡುಗಳು, ನೀಳವಾದ ಮುಂಡ, ಬೆನ್ನಿನ ಮೇಲೆ ಮಧ್ಯಪಟ್ಟಿಯನ್ನು ಸೂಚಿಸುವ ಪ್ರತ್ಯೇಕ ಗೆರೆಯ ಮೂಲಕ ಈ ಪ್ರಾಣಿಯ ಮುಖ್ಯ ಹಾಗೂ ವಿಶಿಷ್ಟ ಲಕ್ಷಣಗಳನ್ನು ಎತ್ತಿ ತೋರಿಸಲಾಗಿದೆ. ಒಂದು ಗುಂಡು ಕಲ್ಲಿನ ಮೇಲಿನ ಜಿಂಕೆ ಚಿತ್ರದಲ್ಲಿ ಅದರ ಬೆನ್ನಿನಲ್ಲಿ ಬಾಣ ಅಥವಾ ಈಟಿ ನಾಟಿರುವುದು ಸ್ಪಷ್ಟವಾಗಿದೆ. ಬೆಳಗಲ್ಲಿನಲ್ಲಿ ಉದ್ದ ಕೊಂಬಿನ ಗೂಳಿ ಚಿತ್ರಗಳು ಮುಖ್ಯವಾಗಿವೆ.

ಕಮಲಾಪುರದ ವಿದ್ಯಾರಣ್ಯ ಹಾಗೂ ಒಂಟಿ ಗುಂಡಿನಲ್ಲಿ ಅಶ್ವಸವಾರರ, ಎತ್ತುಗಳ ಮತ್ತು ನಂದಿಬಂಡಿ ಅಪ್ಪಯ್ಯನ ಹಳ್ಳಿಗಳಲ್ಲಿ ಗೂಳಿಗಳ, ಶಂಖದ ಹುಳುಗಳ ಚಿತ್ರಗಳಿವೆ. ರಾಜಾಪುರ, ಬೈರನಾಯಕನಹಳ್ಳಿಯ ಚಿತ್ರಗಳು ಶಿಲಾತಾಮ್ರಯುಗದ ಮತ್ತು ಬೃಹತ್ ಶಿಲಾಯುಗ ಕಾಲದವು.

**ಚಿತ್ರದುರ್ಗ :** ಜಿಲ್ಲೆಯ ಚಿತ್ರದುರ್ಗ, ಚಂದ್ರವಳ್ಳಿ(ಚಿತ್ರದುರ್ಗ ತಾ.)ಗಳಲ್ಲಿ ವರ್ಣ ಮತ್ತು ಬಯಲು ಬಂಡೆ ಚಿತ್ರಗಳಿವೆ. ಮನುಷ್ಯ ಚಿತ್ರಗಳು ಗಂಡು ಹೆಣ್ಣು ಪ್ರಾಣಿ ಪಕ್ಷಿಗಳು, ಬೇಟೆಗಾರರ ತಂಡ, ಕೈ ಕೈ ಹಿಡಿದು ಕುಣಿಯುತ್ತಿರುವ ಗಂಡು ಹೆಣ್ಣುಗಳು ಮುಂತಾದ ಚಿತ್ರಗಳಿವೆ. ಚಿತ್ರದುರ್ಗ(ಚಿತ್ರದುರ್ಗಗುಡ್ಡ, ಗಂಡಿಗಟ್ಟೆಗುಡ್ಡ, ಬೂದರದಿಬ್ಬ, ಮೇಲುದುರ್ಗ) ಚಂದ್ರವಳ್ಳಿ, ಬಿಳೇಕಲ್ಲುಬಂಡೆ, ಬಾಳೆಕಾಯಿ ಸಿದ್ದಪ್ಪನಗುಡಿ (ಚಿತ್ರದುರ್ಗ ತಾ.), ಜಟ್ಟಿಂಗ ರಾಮೇಶ್ವರ, ಬ್ರಹ್ಮಗಿರಿ(ಮೊಳಕಾಲ್ಮೂರು ತಾ.), ತಣಿಗೆಕಲ್ಲು (ಹೊಸದುರ್ಗ ತಾ.) ಮತ್ತು ಈಚೆಗೆ ಪತ್ತೆಯಾದ ಬಗ್ಗಲುರಂಗವ್ವನ ಹಳ್ಳಿ(ಚಿತ್ರದುರ್ಗ ತಾ.)ಗಳಲ್ಲಿ ಬಯಲುಬಂಡೆ ಚಿತ್ರಗಳಿವೆ.

**ಬಿಜಾಪುರ :** ಬಿಜಾಪುರ ಜಿಲ್ಲೆಯ ಕುಟಕನಕೇರಿ, ಹೊಸಮಹಾಕೂಟ (ಬಾದಾಮಿ ತಾ.) ಯಲ್ಲಟ್ಟಿ, ಕುಳ್ಳೊಳ್ಳಿ (ಜಮಖಂಡಿ ತಾ.)ಗಳಲ್ಲಿ, ವರ್ಣಚಿತ್ರ ಗವಿಗಳಿವೆ. ಬಾದಾಮಿಯಲ್ಲಿ ಏಳು ಮತ್ತು ನೆರೆಯ ಶಿಡ್ಲಫಡಿ ಹಾಗೂ ಸೀತಿ ದೋಣಿಗಳಲ್ಲಿ ವರ್ಣಚಿತ್ರಗಳಿವೆ. ಬಾದಾಮಿಯಲ್ಲಿ ೧ನೇ ಗವಿ ಪ್ರಧಾನವಾದುದಾಗಿದೆ. ಇದು ಬಾದಾಮಿಯ ಉತ್ತರ ಗುಡ್ಡದ ಉತ್ತರಕ್ಕಿರುವ ಬೆಟ್ಟದ ಸಾಲಿನಲ್ಲಿದೆ. ಇಲ್ಲಿಯ ಚಿತ್ರಗಳು ತೀರ ವಿಚಿತ್ರವಾಗಿವೆ. ಕೆಲವು ಕಾಡಿಗೆಯಂತಹ ಅಚ್ಚ ಕಪ್ಪು ಬಣ್ಣದ, ಸಣ್ಣ ಹಾಗೂ ಮಧ್ಯಮ ಪ್ರಮಾಣದ ಮನುಷ್ಯರ ಛಾಯಾಚಿತ್ರಗಳಿವೆ. ತೋಳುಗಳನ್ನು ಅಡ್ಡಚಾಚಿ ಕೈಗಳನ್ನು ಮೇಲಕ್ಕೆತ್ತಿ ನಿಂತಿವೆ. ಕೇವಲ ಮುಖಕ್ಕೆ ಮಾತ್ರವಲ್ಲದೇ ತಲೆಯಿಂದ ಹಿಡಿದು ಕಾಲು ಗಂಟಿನವರೆಗೆ ದೇಹವನ್ನು ಮುಚ್ಚಿಕೊಂಡಂತಿದೆ. ಇನ್ನೊಂದು ಚಿತ್ರ ಕಪ್ಪು ಬಿಳಿ ಮಿಶ್ರಿತ ಬಣ್ಣದಲ್ಲಿದೆ. ಇದರ

ಸಮೀಪದಲ್ಲಿಯೇ ಗುರುತಿಸಲು ಕಷ್ಟಸಾಧ್ಯವಾದ ಒಂದು ಚಿತ್ರವಿದೆ. ಮೇಲೆ ಮತ್ತು ಎರಡು ಬದಿಗಳಲ್ಲಿ ಎರೆಡೆರೆಡು ಮೊನೆಗಳುಳ್ಳ ಆಯತಾಕಾರದ ಮುಖ, ಕಣ್ಣುಗಳನ್ನು ಸೂಚಿಸುವ ಎರಡು ವೃತ್ತಗಳು ಕಡ್ಡಿಯಂತಹ ಮುಂಡ, ಕಾಲುಗಳು, ಕೈಗಳು ಸ್ಪಷ್ಟವಾಗಿಲ್ಲ. ಬಹುಶಃ ಮನುಷ್ಯನ ಚಿತ್ರವಿರಬಹುದು. ಮೊದಲು ಕಪ್ಪು ಬಣ್ಣದಲ್ಲಿ ಬಾಹ್ಯರೇಖೆಯನ್ನೆಳೆದು ಒಳಗಡೆ ಸ್ವಲ್ಪ ಹಳದಿ ಒತ್ತಿದ ಬಿಳಿ ಬಣ್ಣದಿಂದ ತುಂಬಲಾಗಿದೆ. ಮತ್ತು ಮಸುಕಾದ ಬಿಳಿಬಣ್ಣದ ನಾಯಿಯಂತೆ ತೋರುವ ಒಂದೆರಡು ಚಿತ್ರಗಳು ಇಲ್ಲಿವೆ.

ಬಾದಾಮಿ ಒಂದನೇ ವರ್ಣಚಿತ್ರ ಗವಿಯಿಂದ ಉತ್ತರಕ್ಕೆ ಸುಮಾರು ನಾಲ್ಕು ಕಿ.ಮೀ. ದೂರದಲ್ಲಿ ಶಿಢ್ಳಪಡಿ ಎಂಬ ನೈಸರ್ಗಿಕ ಬಂಡೆಯ ಕಮಾನು ಇದೆ. ಅದರಡಿಯ ಎರಡು ಬದಿಗಳಲ್ಲಿ ಮಬ್ಬುಬಣ್ಣದ ಹಾವು, ಗುಬ್ಬಚ್ಚಿ, ಆನೆ, ಮನುಷ್ಯ ಮೊದಲಾದ ಚಿತ್ರಗಳಿವೆ. ಬಾದಾಮಿಯ ಒಂದನೇ ವರ್ಣಚಿತ್ರ ಗವಿಯಿಂದ ಶಿಢ್ಳಪಡಿಗೆ ಹೋಗುವ ದಾರಿಯಲ್ಲಿ ಸೀತಿದೊಣೆಯ ಹತ್ತಿರ ಒಂದು ಕಲ್ಲಾಸರೆ ಇದೆ ಇಡೀ ಕಲ್ಲಾಸರೆಯು ಚಿತ್ರಗಳಿಂದ ತುಂಬಿ ಹೋಗಿದೆ. ಚಿತ್ರಗಳಲ್ಲಿ ಅಂತಹ ವೈವಿಧ್ಯತೆ ಇಲ್ಲ. ಬಲೆಯಂತಹ ರೇಖಾಚಿತ್ರದ ಒಳಗೆಲ್ಲ ಪ್ರಾಯಶಃ ಜಿಂಕೆ ಮತ್ತು ಕೋಣದ ಚಿತ್ರಗಳಿವೆ.

ಬಾದಾಮಿ ಗುಳೇದಗುಡ್ಡದ ದಾರಿಯಲ್ಲಿ ಬರುವ ಕೆಂದೂರು ಕೆರೆಯ(ಹೊಸ ಮಹಾಕೂಟದ) ಹತ್ತಿರ ಹಿರೇಗುಡ್ಡ, ಅರೇಗುಡ್ಡಗಳ ಕೆಲವು ಕಲ್ಲಾಸರೆಗಳು ಚಿತ್ರಗಳನ್ನು ಒಳಗೊಂಡಿವೆ. ಹೆಚ್ಚಾಗಿ ಮನುಷ್ಯನ ಚಿತ್ರಗಳಿವೆ. ಸ್ವಲ್ಪ ಅತಿರೇಕವಾಗಿ ಉದ್ದುದ್ದವಾದ ಮುಂಡ ಕಡ್ಡಿಯಂತಹ ಕೈ ಕಾಲುಗಳಿವೆ. ಮುಖವಾಡ ಹಾಕಿಕೊಂಡಂತೆ ಕಾಣುವುದೇ ಈ ಚಿತ್ರಗಳ ವೈಶಿಷ್ಟ್ಯ. ಮೈಮೇಲೆ ರೇಖಾ ಚಿತ್ರಗಳಿವೆ. ಹಾಗೂ ಮೈಮೇಲೆ ಪಟ್ಟೆಗಳುಳ್ಳ ಹಾಗೂ ಬಾಲ ಎತ್ತಿಕೊಂಡ ಕಾಡು ಬೆಕ್ಕು ಅಥವಾ ಹುಲಿಯ ಚಿತ್ರ ಮೀನಿನ ಬಲೆಯಂತೆ ಹೆಣೆದ ರೇಖಾಚಿತ್ರಗಳು ಅಲ್ಲಲ್ಲಿ ಇವೆ.

ಬಾದಾಮಿ ಗುಳೆದಗುಡ್ಡದ ದಾರಿಯಲ್ಲಿ ಕುಟುಕನಕೇರಿ ಗ್ರಾಮವಿದ್ದು, ಅಲ್ಲಿಯ ಬೆಟ್ಟದ ಕಲ್ಲಾಸರೆಗಳಲ್ಲಿ ಚಿತ್ರಗಳಿವೆ. ಮನುಷ್ಯವಿವಿಧ ಪ್ರಾಣಿಗಳು ಅಂಕು ಡೊಂಕಿನ ರೇಖಾಚಿತ್ರ ಯುದ್ಧ ಸೈನಿಕರ(ಇತಿಹಾಸ ಕಾಲ) ಚಿತ್ರಗಳಿವೆ. ಯಲ್ಲಟ್ಟಿ (ಭಂಡಿಗಣಿಯ ನೂರಾಳ ಪಡಿ)ಯಲ್ಲಿ ವರ್ಣಚಿತ್ರಗಳಿವೆ.

ಜಿಲ್ಲೆಯ ಶಿಢ್ಳಪಡಿ(ಬಾದಾಮಿ), ಕುಳ್ಳೊಳ್ಳಿ(ಜಮಖಂಡಿ ತಾ.)ಗಳಲ್ಲಿ ಬಯಲುಬಂಡೆ ಚಿತ್ರಗಳಿವೆ. ಬಾದಾಮಿಯಲ್ಲಿ ಒಂದು ಕೊರೆದ ಚಿತ್ರವಿದೆ. ಕುಳ್ಳೊಳ್ಳಿ(ಗೊಂಬೆಗುಡ್ಡ)ಯಲ್ಲಿ ಕುಟ್ಟಿದ/ಕೊರೆದ ಎದುರಾಗಿ ನಿಂತ ಗೂಳಿಗಳು, ಜಿಂಕೆ, ನವಿಲು ಪಕ್ಷಿ, ಆನೆ, ಸಾರಂಗ, ಚಿಗರಿ, ಸ್ತ್ರೀ ಪುರುಷ ಮುಂತಾದ ಚಿತ್ರಗಳಿವೆ.

**ಬಾಗಲಕೋಟೆ :** ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಐಹೊಳೆಯಲ್ಲಿ ಚಿರತೆ ಮತ್ತು ಸಾಂಕೇತಿಕ ರೇಖಾಚಿತ್ರಗಳ ವರ್ಣಚಿತ್ರಗಳಿವೆ.

**ಗದಗ :** ಗದಗ ಜಿಲ್ಲೆಯ ನೀರಗುಂದ(ಮುಂಡರಗಿ ತಾ.),ಮುಳಗುಂದ, ಸುರೇಬಾನ(ಗದಗ ತಾ.)ಗಳಲ್ಲಿ ಚಿತ್ರಿತ ಕಲ್ಲಾಸರೆಗಳಿವೆ. ನೀರಗುಂದದ ಚಿತ್ರಗಳು ಪ್ರಾಗಿತಿಹಾಸ ಕಾಲವಾದರೆ ಉಳಿದವು ಇತಿಹಾಸ ಕಾಲದವು.

**ಬೆಳಗಾವಿ :** ಬೆಳಗಾವಿಯ ರಾಮದುರ್ಗ ತಾಲೂಕಿನ ಖಾಜಿಗುಡ್ಡದಲ್ಲಿ ಚಿತ್ರಿತ ಕಲ್ಲಾಸರೆಗಳಿವೆ. ಖಾಜಿಗುಡ್ಡವು ರಾಮದುರ್ಗದಿಂದ ಪಶ್ಚಿಮಕ್ಕೆ ೪ ಕಿ.ಮೀ. ದೂರದಲ್ಲಿ ಮೇಗುಂಡೇಶ್ವರ ದೇವಾಲಯದ ಬಳಿ ಇದೆ. ಖಾಜಿ ಗುಡ್ಡದಲ್ಲಿಯ ಜರುಗಿನ ದಾರಿ ಹತ್ತಿರದ ಕಲ್ಲಾಸರೆಗಳಲ್ಲಿ ನವಿಲು, ಜಿಂಕೆ, ಮೊಸಳೆ, ಗೂಳಿ ಮೊದಲಾದವುಗಳ ಸುಮಾರು ೨೨ ಚಿತ್ರಗಳಿವೆ. ಜಿಂಕೆಯ ಚಿತ್ರಗಳು ವಿಶೇಷವಾಗಿವೆ. ಅವುಗಳ ಮೈಮೇಲೆ ಸಾಲು ಚುಕ್ಕೆಗಳನ್ನು ನಿರ್ದೇಶಿಸುವ ಸಮನಾಂತರ ಅಡ್ಡಗೆರೆಗಳಿವೆ. ಬೆಳಗಾವಿ ಜಿಲ್ಲೆಯಲ್ಲಿ ಪ್ರಾಗಿತಿಹಾಸ ಕಾಲದ ಬಯಲು ಬಂಡೆ ಕೊರೆದ, ಕುಟ್ಟು ಚಿತ್ರಗಳು ಕಂಡುಬಂದಿಲ್ಲ. ಆದರೆ, ಸೌದತ್ತಿ ತಾಲೂಕಿನ ನವಿಲು ತೀರ್ಥದಲ್ಲಿ ನೆಟ್ಟಗೆ ನಿಲ್ಲಿಸಿದ ಒಂದು ದಪ್ಪ ಕಲ್ಲು ಚಪ್ಪಡಿಯ ಮೇಲೆ ಇತಿಹಾಸ ಕಾಲದ ನಾಗಮಂಡಲದಂತಹ ಆಳವಾದ ಗೀರು ರೇಖಾ ಚಿತ್ರವಿದೆ. ಇದು ಎರಡು ರೇಖೆಗಳ ಆರು ಗಂಟಿನ ನಾಗಮಂಡಲದ ಚಿತ್ರವಾಗಿದೆ.

**ಗುಲಬರ್ಗಾ :** ಗುಲಬರ್ಗಾ ಜಿಲ್ಲೆಯ ಯಾದಗಿರಿ ತಾಲೂಕಿನ ಬಲಿಚಕ್ರದಲ್ಲಿ ಗುಡ್ಡದ ಮೇಲಿನ ಕಲ್ಲಾಸರೆಯಲ್ಲಿ ವರ್ಣಚಿತ್ರಗಳಿವೆ. ವಿಶಾಲವಾದ ಪಟದಂತಿರುವ ಬಂಡೆಯ ಮೇಲೆ ಇದರ ಉದ್ದಗಲಕ್ಕೂ ಒತ್ತೊತ್ತಾಗಿ ಪ್ರಾಣಿ, ಮನುಷ್ಯ, ರೇಖಾಕೃತಿ ಚಿತ್ರಗಳಿಂದ ತುಂಬಿ ಹೋಗಿದೆ. ಮನುಷ್ಯ, ಹಸ್ತ, ಪ್ರಾಣಿ, ಕಮಲದ ಹೂ ವಿವಿಧ ರೇಖಾಕೃತಿ ಮತ್ತು ಕೆಲವು ಅಸ್ಪಷ್ಟ ಚಿತ್ರಗಳಿವೆ. ಇವುಗಳ ಮಾದರಿ ಮತ್ತು ಶೈಲಿಗಳ ಆಧಾರದ ಮೇಲೆ ಇವುಗಳು ಕನಿಷ್ಟ ಮೂರು ಬೇರೆ ಬೇರೆ ಕಾಲಘಟ್ಟಗಳಿಗೆ ಸೇರಿದವೆಂದು ತೋರುತ್ತದೆ. ಜಿಲ್ಲೆಯ ಕೊರೆದ ಚಿತ್ರಗಳನ್ನು ಕೆ.ಪದ್ದಯ್ಯನವರು ದಾಖಲಿಸಿದ ಬಗ್ಗೆ ತಿಳಿಯುತ್ತದೆಯಾದರೂ ಹೆಚ್ಚಿನ ಮಾಹಿತಿ ಇಲ್ಲ.

**ಧಾರವಾಡ :** ಧಾರವಾಡ ಜಿಲ್ಲೆಯಲ್ಲಿ ವರ್ಣಚಿತ್ರಗಳು ಕಂಡುಬಂದಿಲ್ಲ. ಹಿರೇಕೆರೂರು ತಾಲೂಕಿನ ಹಿರೇಮಾದಾಪುರ ದಲ್ಲಿ ಕೊರೆದ ಚಿತ್ರಗಳಿವೆ. ಗ್ರಾಮದ ಆಂಜನೇಯ ದೇವಾಲಯ ಹಾಗೂ ಅಗಸಿ ಹತ್ತಿರದ ಬಿಡಿ ಗುಂಡುಗಳಲ್ಲಿ ಕೊರೆದ ಏಳು ಚಿತ್ರಗಳಿವೆ. ಇವು ನಾಲ್ಕು ಮೂಲೆ ಗಂಟಿನ, ಆರು ಮೂಲೆಗಂಟಿನ ಮತ್ತು ಐದು ಸಂಕೀರ್ಣ ರೇಖಾಚಿತ್ರಗಳು ಇವೆ.

**ಶಿವಮೊಗ್ಗ :** ಶಿವಮೊಗ್ಗ ಜಿಲ್ಲೆಯ ಹೊಳಲೂರು(ಶಿವಮೊಗ್ಗ ತಾ.) ಮತ್ತು ಮುತ್ತಹಳ್ಳಿ(ಹೊನ್ನಾಳಿ ತಾ.)ಯಲ್ಲಿ ಕೊರೆದು ಮೂಡಿಸಿದ ರೇಖಾಚಿತ್ರಗಳಿವೆ. ಹೊಳಲೂರಿನಲ್ಲಿ ಆನೆ, ಗೂಳಿಗಳ, ಜಿಂಕೆಗಳು, ಮನುಷ್ಯ, ಆಮೆ ಮತ್ತು ಅರಳಿದ ಕಮಲ ಪುಷ್ಪದ ಚಿತ್ರಗಳಿವೆ. ಹನ್ನೆರಡು ಪಶುಗಳಲ್ಲಿ ಹಿಂಬಾಗಿದ ಕೋಡುಗಳ ಪಶುಗಳೇ ಹೆಚ್ಚು. ಇವುಗಳ ಮೇಲೆ ಬಂಡೆಯ ತುದಿಯಲ್ಲಿ ಕೋಲು ಹಿಡಿದು ನಿಂತ ಮನುಷ್ಯನ ಸಣ್ಣ ಆಕೃತಿ ಇದೆ. ಇನ್ನೊಂದು ಬದಿಯಲ್ಲಿ ಆನೆಯ ಒಂದು ದೊಡ್ಡ ಚಿತ್ರ ಮತ್ತೊಂದು ಬದಿಯಲ್ಲಿ ಜೋಡಿ ಹಾವು, ಆಮೆ, ಕಮಲ, ಪುಷ್ಪದ ಚಿತ್ರಗಳಿವೆ. ಇವೆಲ್ಲವನ್ನು ಬಾಹ್ಯ ರೇಖೆಯಿಂದ ಮಾತ್ರ ಮೂಡಿಸಲಾಗಿದೆ. ಮುತ್ತನಹಳ್ಳಿಯಲ್ಲಿ ನಾಲ್ಕು ಮೂಲೆ ಗಂಟಿನ ಮಂಡಲಗಳ ರೇಖಾಕೃತಿಯು ಒರಟಾದ ಬಂಡೆಯೊಂದರ ಮೇಲೆ ಕಂಡುಬಂದಿದೆ.

**ಬೆಂಗಳೂರು :** ಬೆಂಗಳೂರು ಜಿಲ್ಲೆಯ ಕನಕಪುರ ತಾಲೂಕಿನ ಸೂಳೆಕಲ್ ಮಠದ ಬೆಟ್ಟದಲ್ಲಿ ವರ್ಣಚಿತ್ರಗಳು ಮತ್ತು ಬೆಂಗಳೂರಿನಿಂದ ನೈರುತ್ಯಕ್ಕೆ ಗೊತಗಿರಿ ಬೆಟ್ಟ ಮತ್ತು ಬೆಂಗಳೂರಿನಿಂದ ೧೬ ಕಿ.ಮೀ. ದೂರದಲ್ಲಿರುವ ದೊಡ್ಡಕನ್ನಳ್ಳಿ ಗ್ರಾಮದಲ್ಲಿ ಕೊರೆದ ಚಿತ್ರಗಳು ಇವೆ. ಸೂಳೇಕಲ್ ಮಠದ ಬೆಟ್ಟದಲ್ಲಿ ಮಂಡಲ ಚಿತ್ರಗಳು, ಅಶ್ವಸವಾರ, ಆಯುಧ ಹಿಡಿದ ವ್ಯಕ್ತಿಗಳು, ಗಿಡ, ಕೈ ಕೈ ಹಿಡಿದು ನರ್ತಿಸುತ್ತಿರುವ ಮನುಷ್ಯರ ಮತ್ತಿತರ ಕೆಂಪು ಬಣ್ಣದ ಚಿತ್ರಗಳಿವೆ.

ಗೊತಗಿರಿ ಬೆಟ್ಟದಲ್ಲಿ ಮನುಷ್ಯ ಮತ್ತು ಪ್ರಾಣಿಗಳ ಚಿತ್ರಗಳು, ನೃತ್ಯ ಮಾಡುತ್ತಿರುವ ಮನುಷ್ಯ, ಗೂಳಿ ಮತ್ತು ಕುದುರೆಯ ಚಿತ್ರಗಳಿವೆ. ಬೆಂಗಳೂರು ಗ್ರಾಮಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲೂಕಿನ ಸಾಸಲು ಗ್ರಾಮದಲ್ಲಿ ಬೃಹತ್ ಶಿಲಾಯುಗದ ಐದು ನಿಲುವುಗಲ್ಲು, ಸಾಂಕೇತಿಕ ರೇಖಾಚಿತ್ರಗಳು ಮತ್ತು ಇಲ್ಲಿಯ 'ಕದರಿ ಕಂಭದ' ಗುಡ್ಡದಲ್ಲಿ ಬಂಡೆಗಳ ಮೇಲೆ ನವಿಲು, ಆನೆ, ಮನುಷ್ಯ, ನಕ್ಷತ್ರ ಮುಂತಾದ ಹದಿನಾಲ್ಕು ಕುಟ್ಟು ಚಿತ್ರಗಳಿವೆ.

**ದಕ್ಷಿಣ ಕನ್ನಡ :** ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಹಲ್ನಾಡಿ ಹರ್ಕಾಡಿ ಹಳ್ಳಿಯ ಒಂದು ಭಾಗವಾದ 'ಗವಳಿ'ಯಲ್ಲಿ ಗೂಳಿಯ ಹಾಗೂ ಮಂಡಲ ಚಿತ್ರಗಳಿವೆ. ಪರಸ್ಪರ ಎದುರಾಗಿ ನಿಂತಿರುವ ಎರಡು ಗೂಳಿಗಳ ಚಿತ್ರಗಳಲ್ಲಿ ಎರಡನೆಯ ಗೂಳಿಯ ಕೋಡುಗಳು ನಡುವೆ ಯಾವುದೋ ಒಂದು ಅಕ್ಷರದ ಹಾಗೆ ಸಣ್ಣ ರೇಖಾಚಿತ್ರವಿದೆ. ಮಂಡಲದ ಚಿತ್ರ ಎಂಟುಗುಣಸಿನ ದ್ವಿಚತುರ್ಭುಜಾಕೃತಿಯದ್ದು.

**ಉತ್ತರ ಕನ್ನಡ :** ಉತ್ತರ ಕನ್ನಡ ಜಿಲ್ಲೆಯ ಸೋಂದಾ (ಸಿರ್ಸಿ ತಾ.) ಬೋಳೆ (ಅಂಕೋಲಾ) ಮತ್ತು ಗುಡ್ನಾಪುರ (ಸಿರ್ಸಿ) ತಾ.ಗಳಲ್ಲಿ ಕೊರೆದ ಕುಟ್ಟಿದ ಚಿತ್ರಗಳಿವೆ. ಸೊಂದಾದಲ್ಲಿ ಶ್ರೀ ಸ್ವರ್ಣದಲ್ಲಿ

ಮಠದ ಹತ್ತಿರ ಕುಟ್ಟಿದ ಚಿತ್ರ ಸಂಕಲನವಿದೆ. ಇದರಲ್ಲಿ ಗೂಳಿಗಳ ಚಿತ್ರಗಳಿವೆ. ಈ ಗೂಳಿಗಳ ಮುಂದಿನ ಹಿಂದಿನ ಕಾಲುಗಳ ಬುಡದಿಂದ ರೇಖೆಗಳು ಕೆಳಮುಖವಾಗಿ ಮುಂದುವರೆದು ಒಂದು ಗಂಟಿನಲ್ಲಿ ಗುಣಿಸಿನಾಕೃತಿಯಲ್ಲಿ ಸೇರಿಕೊಳ್ಳುವಂತಿರುವುದು ವಿಶೇಷ.

ಅಂಕೋಲಾದಿಂದ ಸುಮಾರು ಒಂದುವರೆ ಕಿ.ಮೀ ಅಗ್ನೇಯ ದಿಕ್ಕಿಗಿರುವ ಬೋಳೆ ಪ್ರದೇಶದಲ್ಲಿ ಬಂಡೆಗಳ ಮೇಲೆ ಕೊರೆದ ರೇಖಾಕೃತಿಗಳಿವೆ. ವಿಶಾಲ ಸಮತಟ್ಟಾದ ಜಂಬಿಟ್ಟಿಗೆಯ ಕಲ್ಲಿನ ಮೇಲೆ ಎರಡು ಎದುರುಬದುರಾಗಿ ನಿಂತಿರುವ ಗೂಳಿಗಳು ಅಥವಾ ಹಸುಗಳ, ಸೊಂಡಿಲನ್ನು ಎತ್ತಿದ ಆನೆ, ಹಾವು, ಜಿಂಕೆ, ಮೀನು ಮತ್ತು ನಾಲ್ಕು ಭಾಗಗಳುಳ್ಳ ಒಂದು ಆಯತಾಕೃತಿ ಇಷ್ಟು ಚಿತ್ರಗಳಿವೆ. ಬನವಾಸಿ ಸಮೀಪ ಗುಡ್ನಾಪುರದಲ್ಲಿ ಇತಿಹಾಸ ಕಾಲದ ಊರುಗಲ್ಲಿನಲ್ಲಿ ಕೊರೆದ ಮಂಡಲದ ಜೊತೆಗೆ ಸಂಕೇತಗಳ ಚಿತ್ರಗಳಿವೆ.

**ಮಂಡ್ಯ :** ಮಂಡ್ಯದ ಹತ್ತಿರದ ತೂಬಿನಕೆರೆ ಬಳಿಯ ವೇದಿಕ್‌ನಗರದ ಬೆಟ್ಟದಲ್ಲಿ ಚಕ್ರವ್ಯೂಹದ ಕೊರೆದ ಚಿತ್ರವಿದೆ. ಏಳು ಸುತ್ತನ್ನು ಹೊಂದಿರುವ ಇದು ಒಂದು ಅಡಿ ವ್ಯಾಸ ಅಳತೆಯದ್ದು. ಕೊರೆದ ರೇಖೆಯಲ್ಲಿ ಕೆಂಪು ಬಣ್ಣವನ್ನು ತುಂಬಲಾಗಿದೆ. ಇದು ಗೋವಾದ ಉಸ್‌ಗಾಲಿಮೋಲ್ ಕಜೂರಿನ ಚಕ್ರವ್ಯೂಹ ಚಿತ್ರದಂತಿದೆ.

**ಅಡಿಟಿಪ್ಪಣಿಗಳು**

೧. ಜಾನ್ ಜೂಲಿಯಸ್ ನಾರ್‌ವಿಚ್(ಸಂ.), ೧೯೯೦, **ಆಕ್ಸ್‌ಫರ್ಡ್ ಇಲ್ಲುಸ್ಟ್ರೇಟೆಡ್ ಎನ್‌ಸೈಕ್ಲೋಪಿಡಿಯಾ ಆಫ್ ದಿ ಆರ್ಟ್ಸ್,** ಪು.೮೩.

೨. ಸುಂದರ ಅ., ೧೯೯೪, **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ,** ಪು.೫-೬.

೩. ಬೆರೆಂಜರ್ ಎಂ., ೧೯೭೩, **ಪ್ರಿ ಹಿಸ್ಟಾರಿಕ್ ಮ್ಯಾನ್ ಆ್ಯಂಡ್ ಹಿಜ್ ಆರ್ಟ್ ದಿ ಕೇವ್ಸ್ ಆಫ್ ರಿಬಾಡೆಸೆಲ್ಲಾ,** ಪು.೧೦೪-೧೬೫.

೪. ಏಂಜಲೋ ಪೊಸಾಲೆ ಮತ್ತು ಇತರರು, ೧೯೯೦, **ರೂಪಸ್ಟ್ರೀಯನ್ ಆರ್ಕಿಯಾಲಜಿ**

೫. ಲ್ಹೋಟೆ ಎಚ್., ೧೯೯೧, ದಿ ರಾಕ್ ಆರ್ಟ್ ಆಫ್ ದಿ ಮಾಗ್ರೆಬ್ ಆ್ಯಂಡ್ ಸಹಾರಾ, ಪು.೯೯-೧೫೨.

೬. ಅಲಿಮೆನ್ ಎಚ್., ೧೯೫೭, ದಿ ಪ್ರಿ ಹಿಸ್ಟರಿ ಆಫ್ ಆಫ್ರಿಕಾ, ಪು.೩೫೯.

೭. ನೇವಿಲ್ಲೆ, ಜೆ., ೧೯೪೯, ದಿ ಪ್ರಿ ಹಿಸ್ಟರಿ ಆಫ್ ಸೌಥ್ ರ್‍ಹೊಡೆಸಿಯಾ, ಪು.೫೯.

೮. ಹೊಲ್ಮ್ ಇ., ೧೯೬೧, ದಿ ರಾಕ್ ಆರ್ಟ್ ಆಫ್ ಸೌಥ್ ಆಫ್ರಿಕಾ, ಪು.೧೫೩-೨೦೪.

೯. ಡೆವಿಡ್ ಕೌಲಸನ್., ೧೯೯೯, *ಏನ್ಷೆಂಟ್ ಆರ್ಟ್ ಆಫ್ ದಿ ಸಹರಾ,* ಎನ್‌ಜಿ. ಸಂ.೧೯೫, ನಂ.೬, ಪು.೧೪.

೧೦. ಬೆನ್‌ಸ್ಟಾಲಿ ಎಂ.ಡಿ., ಶಿಲಾಯುಗದ ಮೇಲೆ ಇನ್ನಷ್ಟು ಬೆಳಕು, ಪ್ರಜಾವಾಣಿ ಲೇಖನ.

೧೧. ಡೆವಿಡ್ ಕೌಲಸನ್., ಅದೇ, ಪು.೧೦೨-೧೧೯.

೧೨. ಮೂಲವನೆಯ್ ಡಿ.ಜೆ., ೧೯೭೫, ದಿ ಪ್ರಿ ಹಿಸ್ಟರಿ ಆಫ್ ಆಸ್ಟ್ರೇಲಿಯಾ ಪು.೨೬೩.

೧೩. ಟಿಲ್ಲರ್ ಈ.ಓ., ೧೯೯೭, ಬ್ರಿಫ್ ರಿಪೋರ್ಟ್ ಆನ್ ದಿ ಟ್ವಂಟಿನ್ತ ಎನಿವರಸರಿ, GE.FF, BI ಎಸ್ಪಿಡಿಸನ್ ಇನ್ ಇಂಡಿಯ ಫ್ರಾಮ್ ನವಂಬರ್ ೧೯೯೬, ಟೂ ಮಾರ್ಚ್ ೧೯೯೭.

೧೪. ಸ್ಮಿತ್ ವಿ., ೧೯೦೬, ದಿ ಪಾಮಿ ಫ್ಲಿನ್ಸ್ಟ್ ಐ.ಎ.ಸಂ.೬, ಪು.೧೮೫- ೯೫.

೧೫. ಫೂಟ್ ಆರ್.ಬಿ., ೧೯೧೬, ದಿ ಫೂಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರಿ ಹಿಸ್ಟರಿಕ್ ಆ್ಯಂಡ್ ಫ್ರೋಟ್ರೊ ಹಿಸ್ಟಾರಿಕ್ ಆ್ಯಂಟಿಕ್ಟಿಟಿಸ್, ನೋಟ್ಸ್ ಆನ್ ದೇರ್ ಏಜ್ಸ್ ಆ್ಯಂಡ್ ಡಿಸ್ಟ್ರಿಬ್ಯೂಷನ್, ಪು.೮೭-೮೯.

೧೬. ಜಯಸ್ವಾಲ್ ಕೆ.ಪಿ., ೧೯೩೩, ದಿ ವಿಕ್ರಮ್‌ಖೋಲ್ ಇಸ್ಕ್ರಿಪ್ಷನ್, ಸಂಬಲ್‌ಪುರ ಡಿಸ್ಟ್ರಿಕ್ಟ್ ಐ.ಎ. ಸಂ.೬೨, ಪು.೫೮-೬೦.

೧೭. ಕೂಕಬರ್ನ್ ಜೆ., ೧೯೯೩, ಆನ್ ದಿ ರಿಸೆಂಟ್ ಎಕ್ಸಿಸ್ಟನ್ಸ್ ಆಫ್ ರೈನ್ಗೊಸಾರಸ್ ಇಂಡಿಕಸ್ ಇನ್ ದಿ ನಾಥ್ ವೆಸ್ಟ್ರ್ನ್ ಪ್ರಾವಿಯನ್ಸ್ಸ್ ಆ್ಯಂಡ್ ಎ ಡಿಸ್ಕ್ರಿಪ್ಷನ್ ಆಫ್ ಎ ಟ್ರೆಸಿಂಗ್ ಆಫ್ ಆ್ಯನ್ ಆರ್ಟಿಕ್ ರಾಕ್ ಪೆಂಟಿಂಗ್ ಫ್ರಾಮ್ ಮಿರ್ಜಾಪೂ ರಿಪ್ರೆಸೆಂಟಿಂಗ್ ದಿ ಹಂಟಿಂಗ್ ಆಫ್ ದಿಸ್ ಆ್ಯನಿಮಲ್, ಜೆಎಎಸ್‌ಬಿ. ಸಂ.೫೨, ಪು.೫೬-೬೪.

೧೮. ಅದೇ, ೧೮೯೯, ಕೇವ್ ಡ್ರಾಯಿಂಗ್ಸ್ ಇನ್ ದಿ ಕೈಮೂರ್ ರೆಂಜ್, ನಾಥ್ ವೆಸ್ಟ್ ಪ್ರಾವಿನಯ್ಸ್ಸ್, ಜೆಆರ್‌ಎಎಸ್, ಪು.೮೯-೯೭.

೧೯. ಸಿಲಾಬೆರ್ರಡ್ ಸಿ.ಎ., ೧೯೦೭, ರಾಕ್ ಡ್ರಾಯಿಂಗ್ಸ್ ಇನ್ ದಿ ಬಂದಾ ಡಿಸ್ಟ್ರಿಕ್ಟ್, ಜೆ.ಎ.ಎಸ್.ಬಿ., ಸಂ.೩-೧, ಪು.೫೬೭-೭೦.

೨೦. ಅಂಡ್ರೆಸನ್ ಸಿ.ಡಬ್ಲ್ಯೂ, ೧೯೧೮, ರಾಕ್ ಪೆಯಿಂಟಿಂಗ್ಸ್ ಇನ್ ಸಿಂಗನಪುರ, ಜೆ.ಬಿಓಆರ್‌ಎಸ್. ಸಂ.೪, ಪು.೨೯೮-೩೦೬.

೨೧. ಗೋರ್ಡನ್, ಡಿ.ಹೆಚ್., ೧೯೫೮, ದಿ ಪ್ರಿ ಹಿಸ್ಟಾರಿಕ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ಕಲ್ಚರ್, ಪು.೯೮-೧೧೭.

೨೨. ವಾಕನ್‌ಕರ್ ವಿ.ಎಸ್., ೧೯೫೭, *ರಾಕ್ ಶೆಲ್ಟರ್ಸ್ ಇನ್ ಮಧ್ಯಪ್ರದೇಶ,* ಐಎಆರ್ ೧೯೫೬, ಪು.೫೭-೭೯.

------''----- ., ೧೯೬೧, *ರಾಕ್ ಶೆಲ್ಟರ್ಸ್ ಆಫ್ ಡಿಸ್ಟ್ರಿಕ್ ರೈಸಿನ್,* ಐಎಆರ್, ೧೯೬೦-೬೧, ಪು.೬೧, ಐಎಆರ್, ೧೯೯೪.

-----''-------- ೧೯೭೦, *ಎಕ್ಸ್‌ಪ್ಲೋರೇಷನ್ ಇನ್ ಡಿಸ್ಟ್ರಿಕ್ ಮಾಂಡ್‌ಸೋರ್, ರಾಜ್‌ಘರ್, ಉಜ್ಜೈನ್ ಆ್ಯಂಡ್ ವೆಸ್ಟ್ ನಿಮೂರ್,* ಐಎಆರ್ ೧೯೬೯-೭೦, ಪು.೧೬-೧೭.

೨೩.------''----- ., ೧೯೭೧, ಪೆಯಿಂಟೆಡ್ ರಾಕ್ ಶೆಲ್ಟರ್ಸ್ ಆಫ್ ಇಂಡಿಯಾ

೨೪. ಗುಪ್ತಾ ಜೆ., ೧೯೬೭, ಪ್ರಾಗೈತಿಹಾಸಿಕ ಭಾರತೀಯ ಚಿತ್ರಕಲಾ

೨೫. ವಾಕನ್‌ಕರ್ ವಿ.ಎಸ್. ೧೯೭೩, ಅದೇ ಪು.೧೨-೧೯.

೨೬. ಮಟಫಾಲ್ ವಾಯ್., ೧೯೮೪, ಪ್ರಿ ಹಿಸ್ಟಾರಿಕ್ ರಾಕ್ ಪೆಯಿಂಟಿಂಗ್ಸ್ ಆಫ್ ಭಿಂಬೇಟ್ಕಾ

೨೭. ಪರ್ಸಿಬ್ರೌನ್., ೧೯೧೭, ಇಂಡಿಯನ್ ಪೆಯಿಂಟಿಂಗ್, ಪು.೧೪.

೨೮. ಅಂಡ್ರೆಸನ್ ಡಿ.ಎಚ್., ಅದೇ, ಪು.೬-೧೨

೨೯. ಗುಪ್ತಾ ಜೆ., ಅದೇ, ಪು.೭೫

೩೦. ಖಿಥುರಿಯಾ ಆರ್.ಪಿ., ೧೯೭೫, *ಪ್ರಿಮಿಟಿವ್ ರಾಕ್ ಪೆಯಿಂಟಿಂಗ್ಸ್ ಇನ್ ಭೂಪಾಲ್*, ಜೆಪಿಎನ್‌ಬಿ ಸಂ.೩, ಪು.೪೫-೫೨.

೩೧. ಗುಪ್ತಾ ಜೆ., ಅದೇ, ಪು.೨೪೧-೫೭, ೨೩೩-೬೮.

೩೨. ವಾಕನ್‌ಕರ್ ವಿ.ಎಸ್., ೧೯೫೭, ಪೂರ್ವೋಕ್ತ, ಪು.೭೦.

೩೩. ತಿವಾರಿ ಎಸ್., ೧೯೭೫, ಜಾಓರಾ ದಿ ಶೆಲ್ಟರ್ ಆಫ್ ದಿ ಲಾರ್ಜೆಸ್ಟ್ ರಾಕ್ ಪೆಯಿಂಟಿಂಗ್ಸ್ ಇನ್ ಇಂಡಿಯ ಜೆಪಿಎನ್‌ಬಿ, ಸಂ.೩, ಪು.೯೩-೯೬.

೩೪. ಗುಪ್ತಾ ಜೆ., ಅದೇ ಪು.೮೩, ವಾಕನ್‌ಕರ್ ವಿ.ಎಸ್., ೧೯೭೩, ಪೂರ್ವೋಕ್ತ ಪು.೧೩೭ ಮತ್ತು ಜಾಕೋಬಸನ್, ೧೯೭೦, ಅದೇ ಪು.೧೯೭ ೨೩೯.

೩೫. ವೇದಾನಂದ ೧೯೬೦, ರಾಕ್ ಶೆಲ್ಟರ್ಸ್ ಆಪ್ ಸಾಗರ್ ಡಿಸ್ಟ್ರಿಕ್ಟ್, ಪು.೬೦-೭೦.

೩೬. ರಾವ್ ಎಸ್.ಆರ್., ೧೯೬೨, ಎಕ್ಸ್‌ಪ್ಲೋರೇಷನ್ ಆಫ್ ಡಿಸ್ಟ್ರಿಕ್ಟ್ ರೇವಾ, ಪು.೨೨-೨೪.

೩೭. ಸಿಲಾಬೆರ್ರಡ್ ಸಿ.ಎ., ೧೯೦೭, ಅದೇ, ಪು.೫೬೮.

೩೮. ಜಾಡಿಯಾ ಕೆ.ಪಿ., ೧೯೯೨, ಪೆಯಿಂಟೆಡ್ ರಾಕ್ ಶೆಲ್ಟರ್ಸ್, ಬ್ರಿಜಿಪೂರ್ ಡಿಸ್ಟ್ರಿಕ್ಟ್, ಐ.ಐ., ಸಂ.೬೨, ಪು.೯೯.

೩೯. ವಾಕನಕರ್ ವಿ.ಎಸ್., ೧೯೭೩, ಪೂರ್ವೋಕ್ತ, ಪು.೧೮-೨೫೪.

೪೦. ತ್ರಿಬೇಡಿ ಸಿ.ಬಿ., ೧೯೬೧, ರಾಕ್‌ಶೆಲ್ಟರ್ಸ್ ಡಿಸ್ಟ್ರಿಕ್ಟ್ ನರಸಿಂಹಪುರ, ಪು.೬೦.

೪೧. ವಾಕನ್‌ಕರ್ ವಿ.ಎಸ್., ೧೯೭೩, ಪೂರ್ವೋಕ್ತ, ಪು.೧೭-೨೫೪.

೪೨. ದೀಕ್ಷಿತ್ ಎಂ.ಜಿ., ೧೯೫೮, ಎಕ್ಸ್‌ಪ್ಲೋರೇಷನ್ ಇನ್ ಡಿಸ್ಟ್ರಿಕ್ಟ್ ಮ್ಯಾಂಡಸೋರ್, ಪು.೨೬-೨೭.

೪೩. ತ್ರಿವೇದಿ ಎಚ್.ವಿ., ೧೯೫೯, ರಾಕ್ ಶೆಲ್ಟರ್ಸ್ ಇನ್ ಡಿಸ್ಟ್ರಿಕ್ಟ್ ಮ್ಯಾಂಡ ಸೋರ್, ಪು.೭೨.

೪೪. ವಾಕನ್‌ಕರ್ ವಿ.ಎಸ್., ೧೯೭೩, ಪೂರ್ವೋಕ್ತ, ಪು.೨೬೩-೬೪.

೪೫. ಮಟಪಾಲ್ ವಾಯ್, ಅದೇ,

೪೬. ಕೂಕಬರ್ನ್ ಜೆ., ೧೮೮೩, ಪೂರ್ವೋಕ್ತ, ವರ್ಮ ಪಿ.ಕೆ., ೧೯೬೪, ಸ್ಟೋನ್ ಏಜ್ ಕಲ್ಚರ್ಸ್ ಆಫ್ ಮಿರ್ಜಾಪುರ, ಪು.೨೫೬ ೩೨೭.

೪೭. ವರ್ಮ ಪಿ.ಕೆ., **ಪೂರ್ವೋಕ್ತ**, ಪು.೩೦೭.

೪೮. ಅದೇ, ಪು.೨೮೫.

೪೯. ಅಲ್ಚಿನ್ ಬಿ ಮತ್ತು ಅಲ್ಚಿನ್ ಆರ್., ೧೯೬೮, **ಭರ್ಥ್ ಆಫ್ ಇಂಡಿಯನ್ ಸಿವಿಲೈಜೇಷನ್, ಇಂಡಿಯ ಆ್ಯಂಡ್ ಪಾಕಿಸ್ತಾನ ಬಿಫೋರ್ ೫೦೦ ಬಿ.ಸಿ.**

೫೦. ಸಿಲಾಬೆರ್ರಡ್ ಸಿ.ಎ., ೧೯೦೭, ಅದೇ, ಪು.೫೬೭-೭೦.

೫೧. ಶರ್ಮ ಜಿ.ಆರ್., ೧೯೬೩, **ಎಕ್ಸ್‌ಪ್ಲೊರೇಷನ್ ಇನ್ ಡಿಸ್ಟ್ರಿಕ್ಟ್ ಅಲಹಾಬಾದ್, ಬಂದ್ರಾ ಮಿರ್ಜಾಪುರ ಆ್ಯಂಡ್ ವಾರಣಾಸಿ,** ಐಎಆರ್ ೧೯೬೨-೬೩ ಮತ್ತು ೧೯೭೦, ಪು.೩೫-೩೭, ೧೯೭೧ ಪು.೨೬.

೫೨. ಮಿತ್ರ ಪಿ., ೧೯೨೩, **ಪ್ರಿ ಹಿಸ್ಟರಿಕ್ ಇಂಡಿಯ ಇಟ್ಸ್ ಪ್ಲೇಸ್ ಇನ್ ದಿ ವರ್ಲ್ಡ್ಸ್ ಕಲ್ಚರ್**

೫೩. ಜಯಸ್ವಾಲ್ ಕೆ.ಪಿ., ೧೯೩೩, ಅದೇ, ಪು.೫೮-೬೦.

೫೪. ಮಟಪಾಲ್ ವಾಯ್., ೧೯೮೦, *ಸ್ವರ್ಣಗಿರಿ ಆಜ್‌ಭಿ ಸೋನಾ ಉಗಲ್ ಸಕ್ತಾ ಹೈ, ವಶರ್ತೆ* ಪು.೨೨ ೨೫.

೫೫. ಥಾಂಪಿ, ಎಸ್.ಕೆ., ೧೯೭೬, **ಮರಿಯೂರ್ ಕೀ ಏ ನೋಟ್ ಟೂ ದಿ ಪ್ರಿ ಹಿಸ್ಟಾರಿಕ್ ಆರ್ಕಿಯಾಲಜಿ ಆಫ್ ಸೌಥ್ ಕೇರಳ, ಬಿಡಿಸಿಆರ್‌ಐ.,** ಸಂ.೩೫, ಪು.೩೭-೪೪.

೫೬. ಸುಂದರ ಅ., ೧೯೯೭, **ಕರ್ನಾಟಕದ ಚರಿತ್ರೆ, ಸಂ.೧,** ಪು.೨೫೪.

೫೭ ಮನ್ ಎಲ್., ೧೯೩೪-೩೫, **ಏನಿವಲ್ ರಿಪೋರ್ಟ್ ಆಫ್ ದಿ ಆರ್ಕಿಯಾಲಜಿಕಲ್ ಡಿಪಾರ್ಟ್‌ಮೆಂಟ್ ಆಫ್ ದಿ ಫಾರ್ಮರ್ ಹೈದರಾಬಾದ್ ಸ್ಟೇಟ್**

೫೮. **ಏನಿವಲ್ ರಿಪೋರ್ಟ್ ಆಫ್ ದಿ ಜಿಯಾಲಜಿಕಲ್ ಸರ್ವೆ ಆಫ್ ದಿ ಫಾರ್ಮರ್ ಹೈದಾರಾಬಾದ್ ಸ್ಟೇಟ್** ಸಂ.೪, ೧೯೪೧, ಪು.೮೫-೮೭ ಮತ್ತು ೧೮೮.

೫೯. ಪಂಚಮುಖಿ ಆರ್.ಎಸ್.,೧೯೩೯ ೪೦, **ಏನಿವಲ್ ರಿಪೋರ್ಟ್ ಆಫ್ ದಿ ಕನ್ನಡರಿಸರ್ಚ್ ಇನ್ಸ್ಟಿಟ್ಯೂಟ್,** ಪು.೨೧-೨೩.

೬೦. ಅಲ್ಚಿನ್ ಎಫ್.ಆರ್., ೧೯೬೦, **ಪಿಕ್ಲಿಹಾಳ್ ಎಕ್ಸ್‌ಕಾವೇಷನ್ಸ್** ಎಪಿಜಿಎಎಸ್ ನಂ.೧.

೬೧. ನಾಗಾರಾಜ್‌ರಾವ್ ಎಂ.ಎಸ್., ಮತ್ತು ಮಲ್ಹೋತ್ರ ಕೆ.ಸಿ., ೧೯೬೫, **ದಿ ಸ್ಟೋನ್ ಏಜ್ ಹಿಲ್ ಡ್ವೆಲ್ಲರ್ಸ್ ಆಫ್ ತೆಕ್ಕಲಕೋಟ** ಡಿಸಿಪಿಜಿ ಮತ್ತು ಆರ್‌ಎಸ್, ಪು.೯೭-೯೯.

೬೨. ಅನ್ಸಾರಿ ಝುಡ್ ಡಿ., ಮತ್ತು ನಾಗರಾಜ್‌ರಾವ್ ಎಂ.ಎಸ್., ೧೯೬೯, ಎಸ್ಸ್‌ಕಾವೇಷನ್ಸ್ ಐಟ್ **ಸಂಗನಕಲ್ಲು,** ೧೯೬೪ ೬೫, ಡಿ.ಸಿ.ಪಿ.ಜಿ ಮತ್ತು ಆರ್.ಎಸ್.

೬೩. **ಐ.ಎ.ಆರ್.,** ೧೯೬೭-೬೮, ಪು.೬೭, ೧೯೬೮-೬೯ ಪು.೬೮.

೬೪. ಸುಂದರ ಅ., ೧೯೭೪, *ಫರ್ದರ್ ನೋಟಿಸಸ್ ಆಫ್ ರಾಕ್ ಪೆಯಿಂಟಿಂಗ್ಸ್ ಇನ್ ಬೆನಕಲ್ ರಾಯಚೂರ್ ಡಿಸ್ಟ್ರಿಕ್ಟ್,* **ಜೆಐಎಚ್** ಸಂ.೫೨.

೬೫. ------''------ ಐ.ಎ.ಆರ್, ೧೯೬೧-೬೨, ೬೫-೬೬, ೬೭-೬೮, ೬೮-೬೯, ೭೪-೭೫, ೭೭-೭೮, ೭೮-೭೯ ಮತ್ತು ೭೯-೮೦.

೬೬.------''------ ಪ್ರಿ ಹಿಸ್ಟಾರಿಕ್ ಎನ್‌ಗ್ರೇವಿಂಗ್ಸ್ ಇನ್ ಹೊಳಲೂರು.

೬೭. ------''------ಸಮ್ ರೇರ್ ರಾಕ್ ಎನ್‌ಗ್ರೇವಿಂಗ್ಸ್ ಇನ್ ಹಿರೇ ಮಾದಾಪುರ ಆ್ಯಂಡ್ ಮುತ್ತೇನಹಳ್ಳಿ.

೬೮. ------''------೧೯೭೪, ಕರ್ನಾಟಕದಲ್ಲಿಯ ಪ್ರಾಗೈತಿಹಾಸಿಕ ವರ್ಣಚಿತ್ರಗಳು ಸವಿಸಂಚಯ, ಪು.೧೮೯-೨೦೭.

------''------., ೧೯೯೦, *ರಾಕ್ ಪೆಯಿಂಟಿಂಗ್ಸ್ ಇನ್ ಹಂಪಿ ಸಮ್ ಆಸ್ಪೆಕ್ಟ್ಸ್*, ಆರ್ಕಿಯಾಲಜಿ ಇನ್ ಕರ್ನಾಟಕ, ಪು.೨೫೩-೨೬೮.

------''------., ೧೯೭೮, *ಪ್ರಿ ಹಿಸ್ಟಾರಿಕ್ ಆರ್ಟ್ ಇನ್ ಕರ್ನಾಟಕ*, ಆರ್ಕಿಯಾಲಜಿ ಇನ್ ಕರ್ನಾಟಕ ಪು.೧೦೨- ೧೨೮.

------''------., ೧೯೮೧, *ಉತ್ತರ ಕರ್ನಾಟಕದಲ್ಲಿ ಬಂಡೆಗಲ್ಲಿನ ವರ್ಣಚಿತ್ರಗಳು*, ಬೆಳ್ವೊಲ, ಪು.೩೮೫-೩೯೮.

------''------., ೧೯೮೫, *ರಾಕ್ ಬ್ರೂಸಿಂಗ್ಸ್ ಇನ್ ನಾರ್ಥ್ ಕರ್ನಾಟಕ ವಿಥ್ ಪರ್ಟಿಕುಲರ್ ರೆಫರೆನ್ಸ್ ಟು ಬಿಲ್ಲಮರಾಯನಗುಡ್ಡ*, ಪು.೧೬೦-೧೬೭.

------''------.,೧೯೮೭, *ಸಮ್ ನೋಟ್‌ವರ್ಥಿ ರಾಕ್ ಪೆಯಿಂಟಿಂಗ್ಸ್ ಇನ್ ಚಿಕ್ಕರಾಮಪುರ*, ಜೆ.ಕೆ.ಯು ಎಸ್.ಎಸ್. ಸಂ.೨೩, ಪು.೧೮೪-೨೦೫.

------''------., ೧೯೮೭, *ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲುಬಂಡೆ ಚಿತ್ರಗಳು, ಕರ್ನಾಟಕ* ಹರತಿಸಿರಿ, ಪು.೧- ೩೧.

------''------., ೧೯೯೩, ವಿಶಿಷ್ಟ ವರ್ಣಕಲೆಯ ಅಗರ ಬಾದಾಮಿ, ಚಿತ್ರಕಲಾ ಪ್ರಪಂಚ, ಪು.೨೧-೩೫.

೬೯. ------''------., ೧೯೯೪, ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ,

------''------., (ಲೇ ಮತ್ತು ಸಂ.), ೧೯೯೭, ಕರ್ನಾಟಕ ಚರಿತ್ರೆ ಸಂ.೧

೭೦. ಶ್ರೀ ಶೈಲ ಆರಾಧ್ಯ, ೧೯೮೩, ಸಂಶೋಧನೆಯ ಹಾದಿಯಲ್ಲಿ

೭೧. ವಸಂತಶೆಟ್ಟಿ, ೧೯೮೩, *ಪ್ರಿ ಹಿಸ್ಟಾರಿಕ್ ರಾಕ್ ಬ್ರೂಯಿಸಿಂಗ್ಸ್ ಫ್ರಾಮ್ ದಕ್ಷಿಣ ಕನ್ನಡ*, ಕಿವ್‌ಜೆಎಂಎಸ್ ಸಂ.೭೪.

೭೨. ಐ.ಎ.ಆರ್., ೧೯೭೬-೭೭, ಪು.೨೪-೨೫.

೭೩. ------''------., ೧೯೮೪ ೮೫, ಪು.೩೯.

೭೪. ಅದೇ ಮತ್ತು ಷಡಕ್ಷರಯ್ಯ ಆರ್.ಎಂ., ೧೯೯೦, *ರಾಕ್ ಪೆಯಿಂಟಿಂಗ್ಸ್ ಇನ್ ಮಲ್ಲಾಪುರ*, ಆರ್ಕಿಯಾಲಜಿ ಇನ್ ಕರ್ನಾಟಕ.

೭೫. ಗೋರ್ಡ್‌ನ್ ಡಿ.ಎಚ್., ೧೯೫೮, ದಿ ಪ್ರಿ ಹಿಸ್ಟಾರಿಕ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ಕಲ್ಚರ್, ಪು.೧೧೬.

೭೬. ವಿಶ್ವನಾಥ್ ಜೆ ಮತ್ತು ಮಂಜುನಾಥ್ ಎಂ.ಜಿ., ೧೯೯೬, *ಸಾಸಲುವಿನ ಬೃಹತ್ ಶಿಲಾಯುಗದ ಸ್ಮಾರಕಗಳು ಮತ್ತು ರೇಖಾಚಿತ್ರಗಳು* ಇ.ದ., ಸಂ.೧೧, ಪು.೪೬-೪೮.

೭೭. ಮುತ್ತುರಾಜ್, ೧೯೯೫, *ಸೋಂಕಲ್ ಮರದ ಗುಹಾಚಿತ್ರಗಳು*, ಇ.ದ.ಸಂ.೧೦, ಪು.೭೧.೭೩.

೭೮. ವಿಲಾಸ ಮ.ಜೋಗುಳ, ೧೯೯೭, *ತಾವರಗೇರಾದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳ ಶೋಧನೆ*, ಇ.ದ.,ಸಂ.೧೧, ಪು.೪೪-೪೫.

೭೯. ದೇವರಕೊಂಡಾ ರೆಡ್ಡಿ, ೨೦೦೧, *ಗಬ್ಬೂರಿನಲ್ಲಿ ಪ್ರಾಗೈತಿಹಾಸಿಕ ಅವಶೇಷಗಳ ಪತ್ತೆ*, ರಾಯಚೂರ ವಾಣಿ ದಿನಪತ್ರಿಕೆ, ೨೫.೦೩.೨೦೦೧.

೮೦. ಜಯರಾಮಯ್ಯ, ಜೆ.ಟಿ., ೨೦೦೦, *ಬಯಲುಬಂದ ಚಿತ್ರನೆಲೆ ಮೇದಿಕೇನಗರ*, ಇ.ದ.ಸಂ.೧೫, ಪು.೧೭- ೨೦.

೮೧. ಶಂಭುಲಿಂಗಪ್ಪ ಟಿ., ೧೯೯೩, *ರಾಯಚೂರ ಜಿಲ್ಲೆಯ ಗುಹಾಚಿತ್ರಗಳು*, ತಿರುಳ್ಗನ್ನಡ ಪು.೨೩-೨೯.

೮೨. ಪಾಟೀಲ, ಬಿ.ಸಿ., ೧೯೯೪, ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಪು.೧೩-೧೮.

ದಖನ್ ಪ್ರಸ್ಥಭೂಮಿಯಲ್ಲಿರುವ ಕರ್ನಾಟಕ ರಾಜ್ಯದ ಪಶ್ಚಿಮ ಬಯಲು ಪ್ರದೇಶದಲ್ಲಿ ಕೊಪ್ಪಳ-ಹಂಪಿ ಪ್ರದೇಶವು ಸಮಾವೇಶವಾಗುತ್ತದೆ. ಆಡಳಿತಾತ್ಮಕವಾಗಿ ಈ ಎರಡು ನೆಲೆಗಳು ಎರಡು ಪ್ರತ್ಯೇಕ ಜಿಲ್ಲೆ (ಕೊಪ್ಪಳ ಮತ್ತು ಬಳ್ಳಾರಿ)ಗಳಿಗೆ ಸೇರುತ್ತವೆ. ಎರಡು ಜಿಲ್ಲೆಗಳನ್ನು ತುಂಗಭದ್ರಾ ನದಿ ಪ್ರತ್ಯೇಕಿಸಿದೆ. ಆದರೆ ಭೌಗೋಳಿಕವಾಗಿ ಈ ಎರಡು ಪ್ರದೇಶಗಳು ಏಕಪ್ರಕಾರವಾಗಿವೆ. ತುಂಗಭದ್ರಾ ನದಿಯ ಇಕ್ಕೆಲಗಳಲ್ಲಿ ಇರುವ ಪ್ರದೇಶದಲ್ಲಿ ಕಣಶಿಲೆಯ ಬೆಟ್ಟ-ಗುಡ್ಡಗಳು ವ್ಯಾಪಕವಾಗಿ ಹಬ್ಬಿದ್ದು, ಪ್ರಾಚೀನ ಕಾಲದಿಂದಲೂ ಒಂದೇ ಪ್ರಕಾರವಾದ ಜೀವನ ಸಂಸ್ಕೃತಿ ಇಲ್ಲಿ ಬೆಳೆದು ಬಂದಿದೆ.

## ೨.೧. ಭೌಗೋಳಿಕ ಸನ್ನಿವೇಶ

ಭೂ ವೈಜ್ಞಾನಿಕವಾಗಿ ಕೊಪ್ಪಳ-ಹಂಪಿ ಪ್ರದೇಶವನ್ನು ಒಳಗೊಂಡಂತೆ ದಕ್ಷಿಣ ಭಾರತದ ಪ್ರಸ್ಥಭೂಮಿಯನ್ನು ಅತ್ಯಂತ ಪ್ರಾಚೀನ ನಿರ್ಮಾಣವೆಂದೂ ಆದಿಕಲ್ಪಯುಗಕ್ಕೆ ಸೇರಿದುದೆಂದೂ ಸುಮಾರು ಮೂರುನೂರು ಕೋಟಿ ವರ್ಷ ಹಿರಿಯದೆಂದೂ ಭೂವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಸಾಗರದ ಭಾಗವಾಗಿದ್ದ ಈ ಪ್ರದೇಶ ಮೇಲೆದ್ದು ಕಾಲಾಂತರದಲ್ಲಿ ಹಲವಾರು ಮಾರ್ಪಾಡು ಹೊಂದಿ ಸಸ್ಯ ಹಾಗೂ ಪ್ರಾಣಿಗಳ ವಸತಿಗೆ ತಕ್ಕುದಾಗಿ ಇಂದಿನ ಸ್ಥಿತಿಗೆ ಬಂದಿದೆ. ಈ ಭೂಭಾಗವು ಸಮುದ್ರ ಪಾತಳಿಯಿಂದ (MSL)೨೩೪೫ಅಡಿ ಎತ್ತರದಲ್ಲಿದೆ.[೧] ಈ ಪ್ರದೇಶವು ಆಯಕಟ್ಟಿನದಾಗಿದ್ದು, ಬೆಟ್ಟಗುಡ್ಡಗಳು, ಫಲವತ್ತಾದ ನೆಲ, ಸಮೃದ್ಧ ಜಲ, ವೈವಿಧ್ಯ ವೃಕ್ಷರಾಜಿ, ಪ್ರಾಣಿ ಸಂಪತ್ತಿನಿಂದ ಕೂಡಿದ್ದಾಗಿದೆ.

### ನದಿ, ಹಳ್ಳ, ಕೆರೆ, ಬೆಟ್ಟಗಳು

**ತುಂಗಭದ್ರಾ ನದಿ :** ಕೃಷ್ಣಾ ನದಿಯ ಉಪನದಿಯಾದ ತುಂಗಭದ್ರಾನದಿಯು ಕೊಪ್ಪಳ ಹಂಪಿ ಪ್ರದೇಶದ ಏಕೈಕ ಪ್ರಧಾನ ನದಿಯಾಗಿದೆ. ಪಶ್ಚಿಮ ಘಟ್ಟದ ವರಾಹ ಪರ್ವತದ ಗಂಗಾಮೂಲದಲ್ಲಿ ಹುಟ್ಟುವ ಈ ನದಿಯು ತುಂಗ ಮತ್ತು ಭದ್ರಾ ಎಂಬೆರಡು ಶಾಖೆಗಳ ಸಂಗಮವಾಗಿದೆ. ತುಂಗಭದ್ರಾ ನದಿಯು ಕೊಪ್ಪಳ ಹಂಪಿ ಪ್ರದೇಶವನ್ನು ಕೊಪ್ಪಳ ತಾಲೂಕಿನ ಕೆಸಲಾಪುರ ಎಂಬಲ್ಲಿ ಪ್ರವೇಶಿಸುತ್ತದೆ.

ಮುನಿರಾಬಾದ್ ನಿಂದ ಕಂಪ್ಲಿಯವರೆಗಿನ ನದಿಯ ಹರಿವು ಬಹುಮಟ್ಟಿಗೆ ಬೆಟ್ಟಗುಡ್ಡಗಳ ನಡುವೆಯೇ ಸಾಗಿದ್ದು ಕೆಲವು ಕಡೆ ಚಿಕ್ಕದಾಗಿ ಮತ್ತು ಆಳವಾಗಿಯೂ ಹಾಗೂ ಕೆಲವು ಕಡೆ ಅಗಲವಾಗಿ ಹರಿದಿದೆ. ಈ ನದಿಯು ಸಮುದ್ರ ಮಟ್ಟದಿಂದ ೧,೭೧೦ ಫೀಟ್ ಎತ್ತರದಲ್ಲಿ ಹರಿಯುತ್ತದೆ.[೨] ತುಂಗಭದ್ರಾ ನದಿಯು ಕೊಪ್ಪಳ ಹಂಪಿ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದಿಂದ ಪ್ರಸ್ತುತದವರೆಗಿನ ಮಾನವನ ನಾಗರಿಕ ಬೆಳವಣಿಗೆಗೆ ಮಹತ್ತರವಾದ ಕೊಡುಗೆ ನೀಡಿದೆ.

**ಹಳ್ಳಗಳು :** ತುಂಗಭದ್ರಾ ನದಿಯ ಜಾಲವಾಗಿ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿದಿವೆ. ಅವುಗಳಲ್ಲಿ ಹಿರೇಹಳ್ಳ ಅಥವಾ ಉಸುಕಿನ ಹಳ್ಳ (ಕೊಪ್ಪಳ ತಾ) ಬೆಣ್‌ಕಲ್ ಹಳ್ಳ, ಯಮ್ಮಿಗುಡ್ಡ ಹಳ್ಳ, ಗಡ್ಡಿ ಹಳ್ಳ, ಆಗೋಲಿ ಹಳ್ಳ (ಗಂಗಾವತಿ ತಾ) ಗುಂಡ್ಲುಕೆರೆ ಹಳ್ಳ (ಹೊಸಪೇಟೆ ತಾ) ಮುಖ್ಯವಾಗಿವೆ. ಈ ಎಲ್ಲ ದೊಡ್ಡ ಚಿಕ್ಕ ಹಳ್ಳಗಳು ಸ್ವತಂತ್ರವಾಗಿ ಮತ್ತು ಕೆಲವು ಕಡೆ ಒಟ್ಟಾಗಿ ತುಂಗಭದ್ರಾ ನದಿಯನ್ನು ಸೇರುತ್ತವೆ. ಈ ಹಳ್ಳಗಳು ನೀರಿನ ಚಿಲುಮೆಯಿಂದ ಸಣ್ಣದಾಗಿ ಪ್ರಾರಂಭವಾಗಿ ಕ್ರಮೇಣ ಹಳ್ಳಗಳಾಗಿ ಹರಿಯುತ್ತವೆ. ಬೆಟ್ಟಗಳ ಕಣಿವೆ ಪ್ರದೇಶದಲ್ಲಿ ಇಂಥ ಅನೇಕ ಚಿಲುಮೆಗಳನ್ನು ಕಾಣಬಹುದು. ಇವಕ್ಕೆ ಸ್ಥಳೀಯವಾಗಿ ಊಟಿಗಳೆಂದು ಕರೆಯುತ್ತಾರೆ. ಉದಾಹರಣೆಗೆ ಮಳೆಯಮ್ಮನಊಟಿ (ಚಿಕ್ಕಬೆಣಕಲ್), ಜಬ್ಬಲಊಟಿ, ಅರವಟ್ಟಿಗೆ ಊಟಿ(ಮಲ್ಲಾಪುರ), ಕಣಿವೆ ಆಂಜನೆಯ ಊಟಿ(ಸಂಗಾಪುರ) ಮುಖ್ಯವಾಗಿದೆ.

**ಕೆರೆಗಳು :** ಕೊಪ್ಪಳ ಹಂಪಿ ಪ್ರದೇಶದಲ್ಲಿ ಅನೇಕ ನೈಸರ್ಗಿಕ ಮತ್ತು ಕೃತಕ ಕೆರೆಗಳನ್ನು ಕಾಣಬಹುದು. ನೀರಿನ ಮೂಲಗಳಲ್ಲಿ ಮತ್ತು ಮಳೆ ನೀರು ಸಂಗ್ರಹದ ಪ್ರಾಚೀನ ಚಿಕ್ಕ ಚಿಕ್ಕ ಕೆರೆಗಳನ್ನು ಶಿಲಾಯುಗದ ನೆಲೆಗಳಾದ ಹಿರೇಬೆಣ್‌ಕಲ್, ಸಂಗಾಪುರ, ಅಗೋಲಿ ಚಿಕ್ಕ ಬೆಣಕಲ್, ಬಿಳೆಭಾವಿಗಳಲ್ಲಿ, ಕಾಣಬಹುದು. ಹಾಗೆ ಮುಕ್ಕುಂಪಿ, ಕೆರೆ, ರಾಯರಕೆರೆ (ಚಿಕ್ಕಬೆಣಕಲ್)ಬಸಾಪಟ್ಟಣ ಕೆರೆ, ಹಂಪಸದುರ್ಗ, ರಾಮದುರ್ಗ, ಗಂಗಾವತಿ (ಗಂಗಾವತಿ ತಾ) ಕಮಲಾಪುರ, ಅಳ್ಳಿಕೆರೆ, ಗುಂಡ್ಲುಕೆರೆ (ಹೊಸಪೇಟೆ) ಪ್ರಮುಖ ಕೆರೆಗಳಾಗಿವೆ.

**ಬೆಟ್ಟಗಳು :** ಕೊಪ್ಪಳ-ಹಂಪಿ ಪ್ರದೇಶದ ಕೊಪ್ಪಳ ಸ್ಥಾನಿಕ ಮತ್ತು ತುಂಗಭದ್ರಾ ನದಿಯ ಇಕ್ಕೆಲ ಪ್ರದೇಶವು ಬಹುಮಟ್ಟಿಗೆ ಬೆಟ್ಟಗಳಿಂದ ಆವೃತವಾಗಿದೆ. ಕೊಪ್ಪಳ ತಾಲೂಕಿನ ಬೂದಗುಂಪಾದಿಂದ ಗಂಗಾವತಿಯವರೆಗೆ ಪೂರ್ವ-ಪಶ್ಚಿಮವಾಗಿ ಹಬ್ಬಿರುವ ಬೆಟ್ಟ ಸಾಲುಗಳಿವೆ. ಇವುಗಳಿಗೆ ಏಳು ಗುಡ್ಡಗಳೆಂದು ಹೆಸರು. ಈ ಏಳು ಸಾಲುಗಳಲ್ಲಿ ಒಂದೆರಡು ಬಿಟ್ಟು ಉಳಿದವು ಒಂದರ ಪಕ್ಕ ಒಂದರಂತೆ ಸುಮಾರು ೫೦ ಕಿ.ಮೀ ಎಡೆಬಿಡದೆ ನಿರಂತರವಾಗಿ ಹಬ್ಬಿವೆ. ಈ ಬೆಟ್ಟ ಸಾಲುಗಳು

ಪ್ರಧಾನವಾಗಿ ಕಣಶಿಲೆಯ ರಚನೆಗಳಾಗಿವೆ. ಅಲ್ಲಲ್ಲಿ ಕಪ್ಪುಶಿಲೆಯ ಶ್ರೇಣಿಗಳನ್ನು (ಟ್ರಾಪ್ ಶಿಲೆಗಳ ಉಬ್ಬು) ಕಾಣಬಹುದು. ಈ ಬೆಟ್ಟಸಾಲಿನಲ್ಲಿ ನಿಶಾನಿಗುಡ್ಡ (೧,೯೩೩ ಫೀಟ್)ಎಮ್ಮಿಗುಡ್ಡ ಎತ್ತರವಾಗಿವೆ. ನದಿಯ ಬಲಬದಿಯಲ್ಲಿ ದರಮರಗುಡ್ಡ, ಹಂಪಿ, ಬುಕ್ಕಸಾಗರ, ರಾಮಸಾಗರ, ಬೆಟ್ಟಗಳು ಪ್ರಮುಖವಾಗಿವೆ. ಈ ಸಾಲಿನಲ್ಲಿ ತಿಮ್ಮಾಪುರ ಬೆಟ್ಟವು (೨,೧೩೩ ಫೀಟ್) ಅತೀ ಎತ್ತರದ್ದಾಗಿದೆ.[೩]

**ಮಣ್ಣು, ಶಿಲೆ, ಖನಿಜ, ಸಸ್ಯ**



**ಮಣ್ಣು :** ಈ ಪ್ರದೇಶದಲ್ಲಿ ಎರೆ (ಕಪ್ಪು), ಕೆಂಪು ಮಸಾರಿ ಕೆಲವು ಕಡೆ ಸವುಳು ಭೂಮಿ ಹಾಗೂ ಜೇಡಿ ಮಣ್ಣಿನಿಂದ ಕೂಡಿದ ಕ್ಷಾರ ಲವಣಗಳನ್ನೊಳಗೊಂಡ ಫಲವತ್ತಾದ ಭೂಮಿ ಇದೆ. ತುಂಗಭದ್ರಾ ನದಿಯ ತೀರ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪು ಜೇಡಿ (ಕೆಸರು ಮಣ್ಣು) ಮಣ್ಣನ್ನು ಕಾಣಬಹುದು. ಹುಲಿ ಹೈದರ್ ಹತ್ತಿರ ಕಾವಿ ಮಣ್ಣಿದೆ. ಬೇರೆ ಬೇರೆ ಭಾಗದಲ್ಲಿ ಮಳೆಯ ಪ್ರಮಾಣಕ್ಕೆ ತಕ್ಕಂತೆ ಬೇರೆ ಬೇರೆ ಮಣ್ಣು ಕಂಡು ಬರುತ್ತದೆ. ಇದು ಈ ಪ್ರದೇಶದ ಪ್ರಾಕೃತಿಕ ವೈಶಿಷ್ಟ್ಯವಾಗಿದೆ.[೪]

**ಶಿಲೆ, ಖನಿಜ :** ಈ ಪ್ರದೇಶದಲ್ಲಿಯ ಶಿಲೆಗಳು ಜಗತ್ತಿನ ಅತೀ ಪುರಾತನವಾದ ಶಿಲೆಗಳಲ್ಲಿ ಪರಿಗಣಿಸಲ್ಪಡುತ್ತವೆ. ಇಲ್ಲಿ ಬರಿದಾಗದ ನಸುಗೆಂಪು ಮತ್ತು ಬೂದಿ ಬಣ್ಣದ ಗ್ರಾನೈಟ್ ಶಿಲೆಗಳ ಅಪಾರ ಸಂಪತ್ತಿದೆ. ಹಂಪಿಯ ಹತ್ತಿರ ಉತ್ತಮ ಮತ್ತು ಮಧ್ಯಮ ಗುಣಮಟ್ಟದ ಬೂದಿ ಬಣ್ಣದ ಕಣ ಶಿಲೆಗಳನ್ನು (Grey Granites) ಎಮ್ಮಿ ಗುಡ್ಡದ ಹತ್ತಿರ ಮಧ್ಯಮ ಕೆಂಪು ಕಣಶಿಲೆಗಳನ್ನು, ಬೆಣಕಲ್‌ನಲ್ಲಿ ಕಂದು ಮತ್ತು ಉದಾ ಕಣಶಿಲೆಯನ್ನು ಕಾಣಬಹುದು. ಆನೆಗುಂದಿ ಸಮೀಪದಲ್ಲಿ ಕೋರಂಡಂ ರೂಬಿ ಶಿಲೆಗಳು ದೊರೆಯುತ್ತವೆ.[೫] ಅಲ್ಲಲ್ಲಿ ಕಪ್ಪುಶಿಲೆಯ (Trap) ಉಬ್ಬುಗಳನ್ನು ವಿಶೇಷವಾಗಿ ಇಂದರಗಿ (ಕೊಪ್ಪಳ), ಧರಮರ ಗುಡ್ಡ (ಹೊಸಪೇಟೆ), ವಾಸಭದ್ರೇಶ್ವರಬೆಟ್ಟ (ಗಂಗಾವತಿ)ಗಳಲ್ಲಿ ಕಾಣಬಹುದು. ಮಾದಿನೂರು (ಕೊಪ್ಪಳ), ಬೂದಗುಂಪಾದ ಲಕ್ಷ್ಮೀಗುಡ್ಡ, (ಗಂಗಾವತಿ), ಮತ್ತು ಕೂಡ್ಲೂರ (ಕುಷ್ಟಗಿ) ಬಳಿ ಬಳಪದ ಕಲ್ಲುಗಳು ದೊರೆಯುತ್ತವೆ.

ಹಂಪಿ ಪ್ರದೇಶದ ರಾಮದುರ್ಗ ಪ್ರಸ್ಥಭೂಮಿಯಲ್ಲಿರುವ ಸ್ಥಳೀಯ ಶಿಲೆಗಳಲ್ಲಿ ಸುರಮ ಅಂದರೆ ಆಂಟಿಮನಿ (Antimony)ಸಲ್ಫೈಡ್ ಅದುರಿನ ಕಣಗಳು ಚೆಲ್ಲಿದಂತಿರುವುದಾಗಿ ವರದಿಯಾಗಿದೆ. ಬಳ್ಳಾರಿ-ಹೊಸಪೇಟೆ ನಡುವಣ ಗುಡ್ಡಗಳಲ್ಲಿಯ ನಿಕ್ಷೇಪಗಳು ಪ್ರಪಂಚದಲ್ಲಿಯೇ ಅತ್ಯುತ್ತಮವಾದಂತವು.[೬] ಸಿಲಿಕ ಖನಿಜಗಳಲ್ಲಿ ಒಂದಾಗಿರುವ ಬಿಳಿ ಬೆಣಚು ಕೊಪ್ಪಳ ಪ್ರದೇಶದ ತಾವರಗೆರೆ ಗ್ರಾಮದಲ್ಲಿ ಪತ್ತೆಯಾಗಿದೆ. ಗ್ರಾಮದ ಸರ್ವೇ ನಂ.೧೪೭ ಮತ್ತು ೫೨೯ಗಳಲ್ಲಿ ಸುಮಾರು

೪.೨೫ ಎಕರೆ ಪ್ರದೇಶದಲ್ಲಿ ಒಂದು ಬಿಳಿ ಬೆಣಚಿನ ಸಿರ ಪೂರ್ವ-ಪಶ್ಚಿಮವಾಗಿ ಸುಮಾರು ೭೦೦ ಮೀ ಉದ್ದ, ೩ ರಿಂದ ೩೦ ಮೀ. ಅಗಲಕ್ಕೆ ಮಸೂರಾಕೃತಿಯಲ್ಲಿ ಹರಡಿದೆ.[೭] ಬೈಲಕ್ಕಂಪುರ ಮತ್ತು ಕನಕಪುರದಲ್ಲಿ (ಗಂಗಾವತಿ ತಾ) ಗ್ರೀನ್ ಕ್ವಾರ್ಟ್ಸ್ ದೊರೆಯುತ್ತದೆ. ಮಧ್ಯಮ ಮತ್ತು ಕೆಳದರ್ಜೆಯ ಕಬ್ಬಿಣದ ಅದಿರುಗಳು ಕಪ್ಪು ಪದರಶಿಲಾ ಪಟ್ಟಿಯಲ್ಲಿವೆ. ಕಬ್ಬಿಣದ ಅದಿರಾದ ಹೆಮೊಟೈಟಿನ ಹಲ ಹಳೆಯ ಗಣಿಗಳು ಕುಷ್ಟಗಿ ತಾಲೂಕಿನ ಜಾಜದಗುಡ್ಡ, ಕಲ್ಮಂಗಿ, ಮೈದಾರದೋಕಿ ಮತ್ತು ನಂದಿಹಳ್ಳಿ ಎಂಬ ಹಳ್ಳಿಗಳಲ್ಲಿವೆ.[೮]

**ಸಸ್ಯ :** ಕೊಪ್ಪಳ-ಹಂಪಿ ಪ್ರದೇಶವು ಹೆಚ್ಚು ಕಲ್ಲು ಬಂಡೆಗಳ ಬೆಟ್ಟಗಳಿಂದ ಕೂಡಿದ್ದು ಸಸ್ಯಗಳು ದಟ್ಟವಾಗಿಲ್ಲ. ಈ ಪ್ರದೇಶದಲ್ಲಿ ಕೊಪ್ಪಳ ಬ್ಲಾಕ್-ಒಂದು (೧೧೧೭೩ ಹೆಕ್ಟೇರ್), ಆಗೋಲಿ ಹಿರೆಬೆಣ್‌ಕಲ್ (೬೬೪೭ ಹೆಕ್ಟೇರ್) ಮತ್ತು ಬುಕ್ಕಸಾಗರ (೨೬೮೫ ಹೆಕ್ಟೇರ್) ಕಾಯ್ದಿಟ್ಟ ಅರಣ್ಯಗಳಿವೆ.[೯] ಈ ಪ್ರದೇಶದಲ್ಲಿ ಜಾಲಾರಿ, ಹೊನ್ನೆ, ಮತ್ತಿ, ಅಳಲೆ, ಬಾಗಿ, ಮರಡಿ, ಬೇವು, ಜಾಲಿ, ಕಕ್ಕೆ, ಹುಣಸೆ, ಸೀತಾಫಲ ಮತ್ತಿತರ ಗಿಡಗಳನ್ನು ಕಾಣಬಹುದು.

**ಪ್ರಾಣಿ, ಪಕ್ಷಿಗಳು :** ಸಸ್ಯ ಪ್ರಾಣಿಗಳಲ್ಲಿ ಮುಖ್ಯವಾಗಿ ಬ್ಲಾಕ್ ಬಕ್ ಜಿಂಕೆಯ ಸಣ್ಣ, ಸಣ್ಣ ಹಿಂಡುಗಳು ಹಿಂದೆ ಕಂಡುಬರುತ್ತಿದ್ದವಾದರೂ ಈಗ ವಿರಳವಾಗಿವೆ. ಪೊದೆಗಳಲ್ಲಿ ಭದ್ರತೆ ಇಲ್ಲದ್ದರಿಂದ ಹಾಗೂ ಬೇಟೆಯಿಂದ ಚುಕ್ಕೆ ಜಿಂಕೆಗಳು ಮತ್ತು ನೀಲ್ ಗಾಯಗಳು ಮತ್ತು ಹುಲಿಗಳು ಈ ಪ್ರದೇಶದಲ್ಲಿ ಪೂರ್ಣವಾಗಿ ನಶಿಸಿ ಹೋಗಿವೆ.

ಸದ್ಯ ಪ್ರಮುಖವಾಗಿ ಕರಡಿ, ಚಿರತೆ, ನರಿ, ತೋಳ, ಕಪ್ಪು-ಕೆಂಪು ಮುಖದ ಮಂಗಗಳು, ಮೊಲ, ಮುಳ್ಳುಹಂದಿ, ಕತ್ತೆಕಿರುಬ ಮತ್ತು ಪ್ಯಾಂಗೋಲಿನ್ ಕಂಡುಬರುತ್ತವೆ. ಹಾವುಗಳಲ್ಲಿ ಹೆಬ್ಬಾವು, ನಾಗರಹಾವು ಮತ್ತು ಕೆರೆಹಾವು ಪ್ರಮುಖವಾಗಿವೆ. ಪಕ್ಷಿಗಳಲ್ಲಿ ನವಿಲುಗಳು ಮತ್ತು ಹಸಿರು ಗಿಳಿಗಳು ಸಾಮಾನ್ಯವಾಗಿವೆ. ತುಂಗಭದ್ರಾ ತೀರ ಪ್ರದೇಶದಲ್ಲಿ ಕಾಡುಕೋಳಿಗಳಿವೆ.

**ಹವಾಮಾನ :** ಕೊಪ್ಪಳ-ಹಂಪಿ ಪ್ರದೇಶವೂ ಸಮುದ್ರ ಸಪಾಟಿಯಿಂದ ಎತ್ತರದಲ್ಲಿರುವುದರಿಂದಲೂ ಹಾಗೂ ಪರ್ಜನ್ಯಛಾಯಾ ಪ್ರದೇಶದಲ್ಲಿರುವುದರಿಂದಲೂ ಇಲ್ಲಿಯ ಹವಾಗುಣ ಸಾಮಾನ್ಯವಾಗಿ ತಂಪಾಗಿರದೆ ಒಣಹವೆ, ಬಿಸಿಲು ಮತ್ತು ಸೆಕೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಅತಿ ಉಷ್ಣ ಹಾಗೂ ಚಳಿಗಾಲದಲ್ಲಿ ಅತಿ ಚಳಿ ಇಲ್ಲಿಯ ವೈಶಿಷ್ಟ್ಯ, ಮಳೆ ಮಾತ್ರ ವಿರಳವಾಗಿರುತ್ತದೆ. ಇಲ್ಲಿಯ ವಾಡಿಕೆ ಮಳೆ ಪ್ರಮಾಣ ೫೯೯ ಮೀ.ಮೀ.ವಾಸ್ತವಿಕ ಸರಾಸರಿ ಮಳೆ ೪೮೯ ಮೀ.ಮೀ[೧೦](ಕೊಪ್ಪಳ ವಲಯ) ಮತ್ತು ೫೭೪.೯ ಮೀ.ಮೀ[೧೧] (ಹಂಪಿ ವಲಯ)ದಾಖಲಾಗಿದೆ.

## ೨.೨ ಪ್ರಾಗಿತಿಹಾಸ

ಕೊಪ್ಪಳ-ಹಂಪಿ ಪ್ರದೇಶವು ಭೌಗೋಳಿಕವಾಗಿ ಸಶಕ್ತವಾಗಿ ದಖನ್ ಪ್ರಸ್ಥಭೂಮಿಯಲ್ಲಿದೆ. ಈ ಪ್ರದೇಶವು ಪ್ರಾಚೀನ ಮಾನವನ ಚಟುವಟಿಕೆಗಳಿಗೆ ಪೂರಕವಾದ್ದರಿಂದ ಇದು ಆ ಕಾಲದ ಮಾನವನ ವಾಸ್ತವ್ಯದ ಪ್ರಮುಖ ಸ್ಥಳವಾಗಿತ್ತೆಂದು ಊಹಿಸಬಹುದು. ಈ ಪ್ರದೇಶದಲ್ಲಿ ಸುಮಾರು ೧೮೩.೫ರಿಂದ ಒಂದಲ್ಲ ಒಂದು ಹಂತದ ಪ್ರಾಗಿತಿಹಾಸ ಮಾನವನ ವಸ್ತು ಅವಶೇಷಗಳು ಹೆಚ್ಚಾಗಿ ಆಕಸ್ಮಿಕವಾಗಿ ಶೋಧವಾಗಿವೆ. ಹಿರೇಬೆಣಕಲ್‌ನ ಶಿಲಾಸಮಾಧಿಗಳನ್ನು ಕಲ್ಮನೆಗಳು ರೆ.ಜಿ.ಕೆಯಿಸ್ ರವರು ಶೋಧಿಸಿದ ಸಂಗತಿಯ ವರದಿಯನ್ನು ೧೮೩೫ರ ರಾಯಲ್ ಏಶಿಯಾಟಿಕ್ ಸೊಸಾಯಿಟಿ, ಬಾಂಬೆ ಶಾಖೆಯ ಜರ್ನಲ್ ಸಂ. ೪ ರಲ್ಲಿ ಕ. ಮೆಡೂಸ್ ಟೈಲರ್‌ರವರು ಪ್ರಕಟಿಸಿ ಬೆಳಕಿಗೆ ತಂದರು.[೧೨] ೧೮೪೨ರಲ್ಲಿ ಕೊಪ್ಪಳದಿಂದ ಆಗ್ನೇಯಕ್ಕೆ ಸುಮಾರು ೮೦ ಕಿ.ಮೀ. ದೂರದಲ್ಲಿ ಲಿಂಗಸ್ಗೂರಿನ ಬಳಿ ಒಬ್ಬ ಇಂಗ್ಲೀಷ್ ಅಧಿಕಾರಿ ತನ್ನ ಮನೆಯ ಹಿಂದಿನ ತೋಟದಲ್ಲಿ ಅಗೆಯುತ್ತಿರುವಾಗ ಕೆಲವು ಕಲ್ಲಿನ ಚಕ್ಕೆಗಳು ದೊರೆತವು.[೧೩] ಅವುಗಳನ್ನು ಪರೀಕ್ಷಿಸಲಾಗಿ ಚುಕ್ಕೆಗಳು ಮಾನವ ನಿರ್ಮಿತ ಉಪಕರಣಗಳಿರಬೇಕೆಂದು ತರ್ಕಿಸಲಾಯಿತು. ೧೮೭೦ ಮತ್ತು ೧೮೮೦ರ ಅವಧಿಯಲ್ಲಿ ಭಾರತೀಯ ಭೂ ವಿಜ್ಞಾನ ಇಲಾಖೆಯ ಅಧಿಕಾರಿಗಳಾಗಿದ್ದ ರಾಬಟ್ ಬ್ರೂಸ್ ಪೂಟ್ ರವರು ತಮ್ಮ ಭೂ ವಿಜ್ಞಾನ ಅನ್ವೇಷಣೆಯ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ಹಂಪಿ ಸುತ್ತ ಮುತ್ತಲಿನ ಅಂದರೆ ನಿಂಬಾಪುರ, ಹಂಪಸಾಗರ, ಹಳಕುಂದಿ, ಸಂಗನಕಲ್ಲು ಮೊದಲಾದ ಸಂಸ್ಕೃತಿಗಳ ಪ್ರಾಚೀನ ನೆಲೆಗಳನ್ನು ಅನೇಕ ಪ್ರಾಚ್ಯಾವಶೇಷಗಳನ್ನು ಸಂಗ್ರಹಿಸಿದರು. ಈ ಪ್ರಾಚ್ಯವಸ್ತುಗಳನ್ನು ೧೯೦೪ರಲ್ಲಿ ಮದರಾಸ್ ಸರ್ಕಾರವು ಪಡೆದುಕೊಂಡು ಮದ್ರಾಸ್ ಮ್ಯೂಜಿಯಂನಲ್ಲಿರಿಸಿದೆ.[೧೪] ಅದರಂತೆಯೆ ಲಿಂಗಸ್ಗೂರಿನ ಅನತಿ ದೂರದಲ್ಲಿ ಎಡಹಳ್ಳಿ (ಸುರಪೂರ ತಾ. ಗುಲಬರ್ಗಾ ಜಿಲ್ಲೆ) ಯಲ್ಲಿ ಒಬ್ಬ ಭೂ ಗರ್ಭಶಾಸ್ತ್ರಜ್ಞರು ಇಪ್ಪತ್ತನೆಯ ಶತಮಾನದ ಆದಿದಶಕದಲ್ಲಿ ಆದಿ ಹಳೆಯ ಶಿಲಾಯುಗದ ಸಂಸ್ಕೃತಿಯ ಕಲ್ಲಿನ ಉಪಕರಣಗಳನ್ನು ಸಂಗ್ರಹಿಸಿದರು.[೧೫] ಈ ಕಲ್ಲಿನ ಉಪಕರಣಗಳನ್ನು ಆ ಪ್ರದೇಶದಲ್ಲಿ ದೊರೆಯುವ ಸುಣ್ಣದ ಕಲ್ಲಿನಲ್ಲಿ ಮಾಡಿದವಾಗಿದ್ದವು.

೧೯೬೫ರ ಸಮಯದಲ್ಲಿ ಪುಣೆಯ ಡೆಕ್ಕನ್ ಕಾಲೇಜ್ ಪೋಸ್ಟ್ ಗ್ರ್ಯಾಜುಯೇಟ್ ಆ್ಯಂಡ್ ರೀಸರ್ಚ ಇನ್ಸ್ಟಿಟ್ಯೂಟ್‌ನ ಪುರಾತತ್ವ ಶಾಸ್ತ್ರ ವಿಭಾಗದ ಝುಡ್. ಡಿ.ಅನ್ಸಾರಿಯವರು ತುಂಗಭದ್ರಾ ನದಿ ದಂಡೆಯ ಮೇಲಿರುವ ನಿಟ್ಟೂರು (ಶಿರಗುಪ್ಪ ತಾ) ನಲ್ಲಿ ಆದಿ ಹಳೆಯ ಶಿಲಾಯುಗದ ಮಹತ್ವದ ಕಲ್ಲಿನ ಉಪಕರಣಗಳನ್ನು ಮತ್ತು ಸಮಕಾಲೀನ ಪ್ರಾಣಿಗಳ ಪಡಿಯಚ್ಚುಗಳನ್ನು ಶೋಧಿಸಿದರು.[೧೬]

೧೯೩೫ರ ಡಿಸೆಂಬರ್ ಮತ್ತು ೧೯೩೬ರ ಜನವರಿ ತಿಂಗಳಲ್ಲಿ ಹೈದರಾಬಾದ್ ಆರ್ಕಿಯಾಲಜಿ ಇಲಾಖೆಯ ನಿರ್ದೇಶಕರಾಗಿದ್ದ ಯಜ್ದಾನಿಯವರು ಈ ಪ್ರದೇಶದಲ್ಲಿ ಅನ್ವೇಷಣಾ ಕಾರ್ಯ ನಡೆಸಿದರು.[೧೭] ಈ ಶೋಧನೆಗಳ ಹಿನ್ನೆಲೆಯಲ್ಲಿ ವಿಶೇಷವಾಗಿ ಕೊಪ್ಪಳ ಹಂಪಿ ಪ್ರದೇಶದಲ್ಲಿ ನೂತನ ಶಿಲಾಯುಗದ, ಕಬ್ಬಿಣ ಯುಗದ ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಇನ್ನಷ್ಟು ನೆಲೆಗಳನ್ನು, ಸಾಂಸ್ಕೃತಿಕ ಅವಶೇಷಗಳನ್ನು ಪ್ರಾಗಿತಿಹಾಸ ಕಾಲದ ವರ್ಣ ಚಿತ್ರ ಗವಿಗಳನ್ನು ಮತ್ತು ಬಂಡೆ ಚಿತ್ರಗಳನ್ನು ಹೈದ್ರಾಬಾದ್ ಸಂಸ್ಥಾನದ ಭೂ ವಿಜ್ಞಾನ ಸರ್ವೇಕ್ಷಣ ಇಲಾಖೆಯ ಅಧಿಕಾರಿ ಕ್ಯಾಪ್ಟನ್ ಲಿಯೋನಾರ್ಡ್‌ಮನ್[೧೮], ಗೋರ್ಡನ್ ಡಿ.ಹೆಚ್.[೧೯] ಆಲ್ಚಿನ್, ಎಫ್.ಆರ್[೨೦] ಮತ್ತು ಅ.ಸುಂದರ[೨೧] ರವರು ಬೆಳಕಿಗೆ ತಂದು ಲೇಖನಗಳನ್ನು ಪ್ರಕಟಿಸಿದ್ದಾರೆ. ವಿಶೇಷವಾಗಿ ಈಚಿನ ದಶಕಗಳಲ್ಲಿ ಅ.ಸುಂದರರವರ ಕಾರ್ಯ ಗಮನಾರ್ಹವಾಗಿದೆ.

ಕೊಪ್ಪಳ ಹಂಪಿ ಪ್ರದೇಶದ ಪ್ರಾಚೀನ ನೆಲೆಗಳ ಶೋಧನೆಗಳ ಬಗ್ಗೆ ಈಗಾಗಲೇ ಮೇಲೆ ಉಲ್ಲೇಖಿಸಲಾಗಿದೆ. ಇಂಥ ಶೋಧಿಸಿದ ನೆಲೆಗಳಲ್ಲಿ ನಾಲ್ಕನ್ನು ವೈಜ್ಞಾನಿಕ ಕ್ರಮದಿಂದ ಉತ್ಖನನ ಮಾಡಲಾಗಿದೆ. ಅವುಗಳು ಮಸ್ಕಿ,[೨೨] ಪಿಕ್ಲಿಹಾಳ[೨೩], ತೆಕ್ಕಲಕೋಟೆ[೨೪] ಮತ್ತು ಸಂಗನಕಲ್ಲು.[೨೫] ಈ ಎಲ್ಲಾ ಉತ್ಖನನಗಳ ವರದಿಗಳು ಪ್ರಕಟವಾಗಿದ್ದು, ಅವುಗಳಲ್ಲಿ ನೂತನ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಜೀವನ ಚಿತ್ರವು ಸ್ಥೂಲವಾಗಿ ವಿವರಿಸಲಾಗಿದೆ. ಆದ್ದರಿಂದ ಕೊಪ್ಪಳ ಹಂಪಿ ಪ್ರದೇಶದಲ್ಲಿ ವ್ಯಾಪಕ ದೃಷ್ಟಿಯಿಂದ ಆದಿ ಹಳೆ ಶಿಲಾಯುಗದ ಕಾಲದಿಂದ ಇತಿಹಾಸ ಆರಂಭ ಕಾಲದವರೆಗಿನ ಜನಜೀವನದ ಚಿತ್ರವನ್ನು ತಿಳಿದುಕೊಳ್ಳಲು ಸಾಧ್ಯವಿದೆ.

ಹೀಗೆ ತಿಳಿದಮಟ್ಟಿಗೆ ಹಳೆಶಿಲಾಯುಗದ ಜನರ ಜೀವನ ಚಿತ್ರದಲ್ಲಿ ಅನುಕ್ರಮವಾಗಿ ನಾಲ್ಕು ಹಂತಗಳನ್ನು ಗುರುತಿಸಲಾಗಿದೆ. ಅವುಗಳು ಆದಿಹಳೆಶಿಲಾಯುಗ, ಮಧ್ಯ ಹಳೆಶಿಲಾಯುಗ, ಅಂತ್ಯ ಹಳೆಶಿಲಾಯುಗ ಮತ್ತು ಸೂಕ್ಷ್ಮಶಿಲಾಯುಗ ಈ ಕೊನೆಯ ಹಂತದಿಂದ ಮತ್ತೇ ಅನುಕ್ರಮವಾಗಿ ನೂತನ ಶಿಲಾಯುಗ ಇದರಲ್ಲಿಯೇ ಶಿಲಾ-ತಾಮ್ರಯುಗದ ಹಂತ ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಹಂತಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಹೀಗೆ ವೈಜ್ಞಾನಿಕ ಕ್ರಮದಿಂದ ತಿಳಿದು ಬಂದ ಜನಜೀವನದ ಸ್ಥೂಲ ಪರಿಚಯವನ್ನು ಈ ಕೆಳಗೆ ಸಂಗ್ರಹಿಸಲಾಗಿದೆ.

**ಹಳೆ ಶಿಲಾಯುಗದ ಸಂಸ್ಕೃತಿ**

**ಆದಿ ಹಳೆ ಶಿಲಾಯುಗದ ಸಂಸ್ಕೃತಿ :** ಕೊಪ್ಪಳ ಹಂಪಿ ಪ್ರದೇಶದಲ್ಲಿ ಈ ಸಂಸ್ಕೃತಿಯ ನಿಟ್ಟೂರು ಮತ್ತು ಹುಣಸಗಿ ನೆಲೆಗಳು ಕಂಡುಬಂದಿದೆ. ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲೂಕಿನಲ್ಲಿ ತುಂಗಭದ್ರಾ

ನದಿಯ ಬಲ ತೀರದಲ್ಲಿರುವ ನಿಟ್ಟೂರು ಒಂದು ಮಹತ್ವದ ನೆಲೆಯಾಗಿದ್ದು ಇಲ್ಲಿ ಅನಿರೀಕ್ಷಿತವಾಗಿ ಹಾಗೂ ಅಪರೂಪವಾಗಿ ಮೊದಲನೆಯ ಬಾರಿಗೆ ಸಾಮಾನ್ಯವಾಗಿ ವರ್ಣಿಸಲಾದ ಬೆನಕನಕಲ್ಲಿನಿಂದ (ಉಂಡೆ ಕಲ್ಲು) ಮಾಡಿದ ಮಚ್ಚಿನಂತಹ ಆಯುಧ (ಚಾಪರ)ಗಳು ದೊರೆತವು. ಇವುಗಳೊಡನೆ ಸಸ್ತನಿ ಪ್ರಾಣಿಗಳಾದ ಆಕಳು, ಎತ್ತುಗಳು, ಆಸ್ತಿಗಳ ಪಡಿಯಚ್ಚುಗಳು ದೊರೆತಿವೆ. ಈ ಆಯುಧಗಳನ್ನು ಕಪ್ಪು - ಹಸಿರು ಶಿಲೆ (ಡೊಲೊರೈಟ್)ಯಲ್ಲಿ ಮೇಲ್ಮುಖವಾಗಿ ಚುಕ್ಕೆಗಳನ್ನು ಎಬ್ಬಿಸುವ ತಾಂತ್ರಿಕ ವಿಧಾನದಿಂದ ಮಾಡಲಾಗಿದೆ. ಇವು ದಕ್ಷಿಣ ಭಾರತದಲ್ಲೆಲ್ಲಾ ಹೆಚ್ಚಾಗಿ ಕಂಡು ಬಂದ ಕೈಕೊಡಲಿ ಸೀಳುಗತ್ತಿ ಸಂಪ್ರದಾಯಕ್ಕೆ ಹೊಂದದ ಪಾಕಿಸ್ತಾನ ಪ್ರದೇಶದ ಸೋನನದಿ ಬಯಲಿನಲ್ಲಿ ಹೆಚ್ಚಾಗಿ ದೊರೆತಿರುವ ಮಚ್ಚುಗತ್ತಿಯಂತಹ ಶಿಲಾಯುಧಗಳ ಸಂಪ್ರದಾಯದ ಉಪಕರಣಗಳಿಗೆ ಹೋಲುತ್ತವೆ. ದಕ್ಷಿಣ ಭಾರತದಲ್ಲಿ ಈ ಪ್ರಕಾರದ ಆದಿ ಹಳೆಯ ಶಿಲಾಯುಗದ ಈ ಸಂಸ್ಕೃತಿಯ ನೆಲೆ ದೊರೆತದ್ದು ಇದೆ ಪ್ರಥಮ. ಹೀಗೆ ಈ ಪ್ರದೇಶದಲ್ಲಿ ಒಂದು ಭಿನ್ನ ಸಂಸ್ಕೃತಿಯ ನೆಲೆ ಇರುವುದು ಗಮನಾರ್ಹವಾಗಿದೆ.[೨೬]

ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಕೃಷ್ಣಾ ನದಿಯ ಬಲ ತೀರಕ್ಕೆ ಸಮೀಪದಲ್ಲಿ ಹಣಸಗಿ ಇದೆ. ಇಲ್ಲಿ ಆಕಸ್ಮಿಕವಾಗಿ ಕಂಡು ಬಂದ ಆಯುಧಗಳ ಮಹತ್ವದಿಂದ ಪದ್ದಯ್ಯ (೧೯೮೨) ನವರು ಈ ನೆಲೆಯಲ್ಲಿ ಉತ್ಖನನ ಕೈಗೊಂಡರು. ಇಲ್ಲಿ ಒಂದು ಮೀಟರ್ ಆಳದ ಕಪ್ಪು ಮಣ್ಣಿನ ಪದರು, ನಿರುಪಯೋಗಿ ಚಕ್ಕೆ ಕಲ್ಲುಗಳು ಮತ್ತು ಉಪಕರಣಗಳಿಂದ ಕಪ್ಪು ಕಂದು ಬಣ್ಣದ ಸಡಿಲು ಮರಳಿನ ಪದರು ಮತ್ತು ಅಶೂಲ ತರಹದ ಆದಿ ಹಳೆಯ ಶಿಲಾಯುಗದ ನೆಲೆಯ ಪದರು ಮತ್ತು ಸ್ವಲ್ಪಮಟ್ಟಿಗೆ ಮೇಲ್ಮೈ ಸವೆದ ತಳಬಂಡೆಯ ಪದರು ಈ ರೀತಿ ಕಂಡುಬಂದವು.

ಕಲ್ಲಿನ ಉಪಕರಣಗಳು ನೆಲೆಯ ಮೇಲೆಲ್ಲಾ ಹರಡಿದ್ದವು. ಬಹುಶ: ಆಯುಧಗಳನ್ನು ತಯಾರು ಮಾಡುವ ಕಾಲದಲ್ಲಿ ನೆರಳನ್ನು ಒದಗಿಸಿಕೊಳ್ಳಲು ನಿರ್ಮಿಸಿದ ಚಿಕ್ಕ ತಟ್ಟಿಗೆಗೆ ಸುತ್ತಲೂ ಇಡಲು ಬಳಸುತ್ತಿದ್ದಿರಬಹುದಾದ ೧೨ ಕಲ್ಲುಗುಂಡುಗಳು ಇಲ್ಲಿ ಕಂಡು ಬಂದಿದ್ದು ಗಮನಾರ್ಹ ಅಡ್ಡಮರೆಗಾಗಿ ನಿಲ್ಲಿಸಿದ ತಟ್ಟಿಗೆಗೆ ಬೆಂಬಲವಾಗಿ ಈ ಕಲ್ಲು ಗುಂಡುಗಳನ್ನು ಇಟ್ಟಿರಬಹುದೆಂದು ತರ್ಕಿಸಲಾಗಿದೆ. ಇಲ್ಲಿಯ ಉಪಕರಣಗಳಲ್ಲಿ ಹೆಚ್ಚಾಗಿ ದಪ್ಪ ಚಕ್ಕೆಗಳಿಂದ ಮಾಡಿದ ಕೈಕೊಡಲಿ, ಸೀಳುಗತ್ತಿ, ಚಾಕುವಿನಂತಹ ಉದ್ದಗತ್ತಿ, ಮಚ್ಚುಗತ್ತಿ, ನೆಲವನ್ನು ಕೆದರುವ, ಹರೆಯುವಂತಹ ಇವೆ. ಮಚ್ಚುಗತ್ತಿ, ಭೂಮಿಯನ್ನು ಕೆದರುವ, ಹರೆಯುವ ಚಕ್ಕೆಗಳಿರುವುದರಿಂದ ಈ ಕೈಗಾರಿಕೆಯು ಅಶೂಲ್ ಸಂಸ್ಕೃತಿಯ ಪ್ರಾಚೀನ ಹಂತಕ್ಕೆ ಸಮೀಪವಾಗಿದೆ.

ಇಲ್ಲಿಯ ಇನ್ನೊಂದು ಅಂಶವೇಂದರೆ ಬಣ್ಣಕ್ಕಾಗಿ ದೂರದಿಂದ ತಂದ ಕೆಮ್ಮಣ್ಣಿನ ಗಟ್ಟಿಗಳನ್ನು ಉಪಯೋಗಿಸುತ್ತಿದ್ದುದು. ಇಂತಹ ಗಟ್ಟಿಗಳು ಇಲ್ಲಿ ದೊರೆತಿವೆ. ಈ ನೆಲೆಯಲ್ಲಿ ಪರಿಸರ ಅಧ್ಯಯನ ಕೂಡ ಕೈಗೊಳ್ಳಲಾಗಿದ್ದು, ಈಗಿನ ಹಳ್ಳದ ಹಿಂದಿನ ಪಾತ್ರ ಬೇಸಿಗೆಯಲ್ಲಿ ತಾತ್ಕಾಲಿಕ ವಾಸ್ತವ್ಯದ ನೆಲೆಯಾಗಿ ಬಳಕೆಯಾಗುತ್ತಿತ್ತು. ಇಲ್ಲಿಯ ಮಣ್ಣಿನ ಪರೀಕ್ಷಣದಿಂದ ಇಪ್ಪತ್ತು ಜಾತೀಯ ಗಿಡಗಳ ಪರಾಗಳಿದ್ದುದು ತಿಳಿದುಬರುತ್ತದೆ. ಈ ಎಲ್ಲಾ ಅಂಶಗಳಿಂದ ಭಾರತದಲ್ಲಿ ಆದಿ ಹಳೆಯ ಶಿಲಾಯುಗದ ಜನರ ವಾಸ್ತವ್ಯದ ಮೂಲ ನೆಲೆಗಳಲ್ಲಿ ಈ ನೆಲಯು ಒಂದಾಗಿದ್ದು ಇಲ್ಲಿ ಅವರ ವಸತಿಯ ಕುರುಹುಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಈ ಸಂಸ್ಕೃತಿಯ ಜನ ನಿಸರ್ಗದಲ್ಲಿ ದೊರೆಯುವ ಆಹಾರ ಸಂಪಾದನೆ ಮಾಡುತ್ತಾ ನೈಸರ್ಗಿಕ ಗುಹೆಗಳಲ್ಲಿ ವಾಸಿಸುತ್ತಿದ್ದರು.

ಇಂತಹ ಇನ್ನೂ ಕೆಲ ಆದಿ ಹಳೆಶಿಲಾಯುಗದ ನೆಲೆಗಳು ಕೊಪ್ಪಳ-ಹಂಪಿ ಪ್ರದೇಶದ ಉತ್ತರಕ್ಕೆ ಇರುವ ಕೃಷ್ಣಾ ನದಿಯ ಉಪನದಿಯಾದ ಮಲಪ್ರಭಾ ನದಿಯ ಬಯಲು ಪ್ರದೇಶದಲ್ಲಿ ಸುಮಾರು ೧೯ ನೆಲೆಗಳು[೨೭] ಹಾಗೂ ಇವುಗಳ ಉತ್ತರಕ್ಕೆ ಅಂದರೆ ಬಾಗಲಕೋಟೆ, ಅಥಣಿ ಪ್ರದೇಶದ ಕೃಷ್ಣಾ ನದಿಯ ಬಯಲು ಪ್ರದೇಶದಲ್ಲಿ ಸುಮಾರು ೧೨ ನೆಲೆಗಳು[೨೮] ಹುಣಸಗಿ ಸಮೀಪದಲ್ಲಿಯೇ ಇಂತಹ ಇನ್ನು ಕೆಲವು ನೆಲೆಗಳು ಶೋಧವಾಗಿವೆ.

**ಮಧ್ಯ ಹಳೆಶಿಲಾಯುಗ ಸಂಸ್ಕೃತಿ :** ಈ ಸಂಸ್ಕೃತಿಯ ಕೆಲವು ನೆಲೆಗಳನ್ನು ಕೃಷ್ಣಾ ತುಂಗಭದ್ರಾ ಪ್ರದೇಶಗಳಲ್ಲಿ ಮತ್ತು ಮರಳಭಾವಿ ಮೊದಲಾದ ಪ್ರದೇಶಗಳಲ್ಲಿ ಶೋಧಿಸಲಾಗಿದೆ. ಕೊಪ್ಪಳ-ಹಂಪಿ ಪ್ರದೇಶದ ಸಂಗನಕಲ್ಲಿನಲ್ಲಿ ನಡೆದ ೧೯೬೪ ಉತ್ಖನನ[೨೯]ದಲ್ಲಿಯ ನವಶಿಲಾಯುಗ ಸಂಸ್ಕೃತಿಯ ಆಯುಧಗಳ ಜೊತೆಗೆ ಈ ಸಂಸ್ಕೃತಿಗೆ ಸೇರಿದ ತೊಗಟೆಯುಳ್ಳ ಉಂಡೆಕಲ್ಲಿನಲ್ಲಿ ಮಾಡಿದ ಹರೆಯುವ ಚಕ್ಕೆಗಳು, ಮೊನೆಗಳು ದೊರೆತಿವೆ. ಇಲ್ಲಿಯ ಉಪಕರಣಗಳ ಪ್ರಬೇಧಗಳಲ್ಲಿ ಬದಿಯಂಚಿನಿಂದ ಹರೆಯುವ ಚಕ್ಕೆಗಳು ಹೆಚ್ಚು. ಕೆಲವು ಒಂದಕ್ಕಿಂತ ಹೆಚ್ಚಿನ ಅಂಚುಗಳಿಂದ ಹರೆಯಬಹುದಾದ ಬಹುಪಯೋಗಿ ಚಕ್ಕೆಗಳು ದೊರೆತಿವೆ. ಆದಿ ಹಳೆಶಿಲಾಯುಗದ ವಿವಿಧ ಉಪಕರಣಗಳಿಗಿಂತ ಈ ಸಂಸ್ಕೃತಿಯ ಉಪಕರಣಗಳ ನಿರ್ದಿಷ್ಟ ಉಪಯೋಗವು ಸ್ಪಷ್ಟವಾಗಿ ತಿಳಿದಿಲ್ಲ.

ಇಂಥ ಉಪಕರಣಗಳಿದ್ದ ರೇವೆಮಣ್ಣಿನಲ್ಲಿಯ ಅವಶೇಷಗಳ ಇಂಗಾಲ-೧೪ ವೈಜ್ಞಾನಿಕ ಕ್ರಮದಿಂದ ಕಾಲಮಾನವನ್ನು ಗೊತ್ತುಪಡಿಸಲಾಗಿದೆ. ಅದು ಇಂದಿನಿಂದ ಹಿಂದಕ್ಕೆ ಸುಮಾರು ೬೯೦೦-೧೯೦೦ ವರ್ಷಗಳ ಅಂತರದಕಾಲದಾಗಿದೆ. ಈ ಸಂಸ್ಕೃತಿಯ ನೆಲೆಗಳು ನದಿ ದಂಡೆಗಳಿಂದ ದೂರದ

ಬಯಲುಗಳಿರುವುದರಿಂದ ಈ ಜನರು ಭಿನ್ನ ಭಿನ್ನ ವಾತಾವರಣಗಳಲ್ಲಿ ಜೀವಿಸಲು ಸಮರ್ಥರಿದ್ದರೆಂದು ಕಾಣುತ್ತದೆ.

**ಅಂತ್ಯ ಹಳೆಶಿಲಾಯುಗ ಸಂಸ್ಕೃತಿ :** ಹಳೆ ಶಿಲಾಯುಗ ಸಂಸ್ಕೃತಿಯಲ್ಲಿ ಈ ಹಂತದ ಬಗ್ಗೆ ತೀರ ಕಡಿಮೆ ತಿಳಿದು ಬಂದಿದೆ. ಕೊಪ್ಪಳ ಹಂಪಿ ಪ್ರದೇಶದ ಸನಿಹದಲ್ಲಿ ಪದ್ದಯ್ಯನವರು ಸಾಲ್ವಡಗಿಯ ಹತ್ತಿರ ಮೇರಲಭಾವಿಯಲ್ಲಿ ಈ ಸಂಸ್ಕೃತಿಯ ಒಂದು ನೆಲೆಯನ್ನು ಶೋಧಿಸಿದರು.[೩೦] ೧೯೬೯ರಲ್ಲಿ ಅವರು ಮೇರಲಭಾವಿ, ಗುಲಬಾಲ್, ಬೆನಹಟ್ಟಿ ಮತ್ತು ಹುಣಸಗಿಯಲ್ಲಿ ಹೆಚ್ಚಿನ ಅನ್ವೇಷಣೆ ಮಾಡಿದಾಗ ಮಧ್ಯ ಹಳೆಶಿಲಾಯುಗದ ಆನಂತರ ಮತ್ತು ಸೂಕ್ಷ್ಮ ಶಿಲಾಯುಗದ ಆನಂತರ ಮತ್ತು ಸೂಕ್ಷ್ಮ ಶಿಲಾಯುಗದ ಹಿಂದಿನ ಹಂತದಲ್ಲಿ ಈ ಸಂಸ್ಕೃತಿ ಇದ್ದದ್ದು ಗೊತ್ತಾಯಿತು. ಈ ಸಂಸ್ಕೃತಿಯು ಹಿಮ ಯುಗದ ಹಾಗೂ ಪ್ರಚಲಿತ ಯುಗದ ಪ್ರಾರಂಭದ ಕಾಲದ್ದೆಂದು ತರ್ಕಿಸಲಾಯಿತು.

**ಸೂಕ್ಷ್ಮ ಶಿಲಾಯುಗ ಸಂಸ್ಕೃತಿ**

ಕೊಪ್ಪಳ ಹಂಪಿ ಪ್ರದೇಶದ ಸಂಗನಕಲ್ಲಿನಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಯು ಕಂಡುಬಂದಿದ್ದು, ಇಲ್ಲಿಯ ನೂತನ ಶಿಲಾಯುಗಕ್ಕಿಂತ ಹಿಂದಿನ ಕಾಲದ ಸಾಂಸ್ಕೃತಿಕ ಪದರುಗಳಲ್ಲಿ ಈ ಸಂಸ್ಕೃತಿಯ ಉಪಕರಣಗಳು ಸಿಕ್ಕಿವೆ. ಆದ್ದರಿಂದ ಈ ಸಂಸ್ಕೃತಿಯು 'ಈಚಿನ ಯುಗದ' ಪ್ರರಂಭ ಕಾಲದ ನಂತರದ್ದು ಎಂದು ಗೊತ್ತುಪಡಿಸಲಾಗಿದೆ. ಇಲ್ಲಿಯ ಉಪಕರಣಗಳು ಗಾರೆಗಲ್ಲಿ (ಕ್ಯಾಲ್ಸಿಡೋಣಿ)ನವು. ಸಮಾನಾಂತರ ಅಂಚುಳ್ಳ ನೀಳ ಚುಕ್ಕೆಗಳು, ಅಲ್ಲದೆ ಮೊನೆಗಳು, ಅರ್ಧಚಂದ್ರಾ ಕೃತಿಯಂತಹ ತ್ರಿಕೋನಾಕಾರದ ಮತ್ತು ದ್ವಿಬಾಹು ಸಮನಾಂತರ ಚತುರ್ಭುಜಾಕೃತಿಯಂತಹ ಮೊದಲಾದ ಉಪಕರಣಗಳ ಆಕೃತಿಗಳಿವೆ. ಇವೆಲ್ಲವು ಸಾಮಾನ್ಯವಾಗಿ ನೀಳಚುಕ್ಕೆಗಳನ್ನು ತುಂಡು ಮಾಡಿ ಅವುಗಳ ಅಂಚುಗಳನ್ನು ಅವಶ್ಯವಾದ ರೀತಿಯಲ್ಲಿ ತಂದು ಉಪಕರಣಗಳನ್ನಾಗಿ ಮಾಡಲಾಗಿದೆ.

ಸಾಮಾನ್ಯವಾಗಿ ಈ ಉಪಕರಣಗಳನ್ನು ಸಮೀಪದಲ್ಲಿಯೇ ಹೆಚ್ಚಾಗಿ ದೊರೆಯುವ ಬೆಣಚುಕಲ್ಲು (ಕ್ವಾಡ್ಜ್ ) ಮತ್ತು ಉತ್ತಮ ಜಾತಿ ಕಲ್ಲುಗಳಾದ ಜಾಸ್ಪರ್ ಮತ್ತು ಚಟ್ಟಿಕಲ್ಲುಗಳಲ್ಲಿ ಮಾಡಿದ್ದಾಗಿದೆ. ಸಾಮಾನ್ಯವಾಗಿ ಇವು ಆಕೃತಿಯಲ್ಲಿ ತೀರಾ ಸಣ್ಣದಾಗಿರುತ್ತವೆ. ಸಾಮಾನ್ಯವಾಗಿ ಒಂದು ಸೆಂ.ಮೀ. ಹಾಗೂ ಐದು ಮೀ.ಮೀ ಉದ್ದಗಲಕ್ಕಿಂತ ಹೆಚ್ಚೇನು ಇಲ್ಲ. ಇವುಗಳ ಇಂಥ ಸಣ್ಣ ಪ್ರಮಾಣದ ಆಕಾರದ ಮೇಲೆಯೇ ಈ ಸಂಸ್ಕೃತಿಯನ್ನು ಸೂಕ್ಷ್ಮಶಿಲಾ ಸಂಸ್ಕೃತಿ ಎಂದು ಕರೆಯಲಾಗಿದೆ. ಸಿದ್ಧಮಾಡಿದ ಒಂದು ಗಿಡದ ರೆಂಬೆಯಲ್ಲಿ ಅವಶ್ಯವಿದ್ದಷ್ಟನ್ನು ಆಳವಾದ ಗೆರೆಗಳನ್ನು ಮೂಡಿಸಿ ಆ ಗೆರೆಯಲ್ಲಿ ಈ ಸಣ್ಣಸಣ್ಣ ಉಪಕರಣಗಳನ್ನು ಒಂದರ ಪಕ್ಕದಲ್ಲಿ ಮತ್ತೊಂದನ್ನು ಜೋಡಿಸಿ

ವಿವಿಧ ಪ್ರಕಾರದ ವ್ಯವಸಾಯಕ್ಕೆ ಉಪಯೋಗಿಸಲಾಗುತ್ತಿತ್ತು. ಈ ಸಂಸ್ಕೃತಿಯಲ್ಲಿ ಬೇರೆಡೆಗಳಲ್ಲಿಯ ಇಂಥ ನೆಲೆಗಳ ಅಧ್ಯಯನದಿಂದ ಮೂರು ಹಂತಗಳನ್ನು ಗುರುತಿಸಲಾಗಿದೆ. ಅತ್ಯಂತ ಪ್ರಾಚೀನ ಹಂತ ಸುಮಾರು ಕ್ರಿ.ಪೂ.೭೦೦೦, ಎರಡನೆಯ ಹಂತ ಸುಮಾರು ಕ್ರಿ.ಪೂ.೫೦೦೦, ಮೂರನೇ ಹಂತ ಸುಮಾರು ಕ್ರಿ.ಪೂ.೩೦೦೦, ಕಾಲಮಾನವೆಂದು ತರ್ಕಿಸಲಾಗಿದೆ. ಬಹುಮಟ್ಟಿಗೆ ಒಂದೆಡೆಯಲ್ಲಿ ನೆಲೆಯಾಗಿ ನಿಂತು ಸಾಧಾರಣ ಗುಡಿಸಲನ್ನು ಕಟ್ಟಿಕೊಂಡು ಈ ಜನಗಳು ವಾಸಿಸುತ್ತಿದ್ದರೆಂದು ಕಂಡುಬಂದಿದೆ. ಹೆಚ್ಚಾಗಿ ಸಂಗ್ರಹಣಾ ಕಾಲದಿಂದ ಆಹಾರ ಸಂಪಾದನೆ ಮಾಡಿದರೂ ಬೀಜಬಿತ್ತಿ ಬೆಳೆಯುವ ಕ್ರಮವನ್ನು ಸ್ವಲ್ಪಮಟ್ಟಿಗೆ ಇವರು ಅನುಸರಿಸುತ್ತಿದ್ದರು. ಕೊನೆಯ ಹಂತದಲ್ಲಿ ಸಂಗ್ರಹಿಸಿದ ಹಾಗೂ ಬೆಳೆದ ದವಸ ಧಾನ್ಯಗಳನ್ನು ಕೂಡಿಡಲು ಮಣ್ಣಿನಿಂದ ಮಾಡಿದ ಬಿಸಿಲಿನಲ್ಲಿ ಒಣಗಿಸಿದ ಮಡಿಕೆ ಕುಡಿಕೆಗಳನ್ನು ಮಾಡುತ್ತಿದ್ದರು. ಇವರಲ್ಲಿ ಶವಸಂಸ್ಕಾರ ಪದ್ಧತಿಯೂ ಬೆಳೆದಿತ್ತು. ಆದ್ದರಿಂದ ಸಾಮಾಜಿಕ ಮೂಲಭೂತ ಅಂಶಗಳು ಈ ಹಂತದಲ್ಲಾಗಲೇ ತಲೆದೋರಿದ್ದವು.

**ನವಶಿಲಾಯುಗ ಸಂಸ್ಕೃತಿ**

ಉಜ್ಜಿ ನಯಗೊಳಿಸಿದ ಆಯುಧಗಳ ಉಪಯೋಗ, ನದಿ ತೀರದ ಫಲವತ್ತಾದ ಭೂಮಿಯಲ್ಲಿ ನೆಲೆಸುವಿಕೆ, ಸುಟ್ಟ ಮಣ್ಣಿನ ಪಾತ್ರೆಗಳ ಉಪಯೋಗ, ನಾಯಿ, ಆಕಳು, ಎತ್ತು, ಮೊದಲಾದ ಸಾಕು ಪ್ರಾಣಿಗಳನ್ನು ಸಾಕುವಿಕೆ, ವ್ಯವಸಾಯ ಬಿಸಿಲಿನಲ್ಲಿ ಒಣಗಿಸಿದ ಬೂದುಬಣ್ಣದ ಮೃತಪಾತ್ರೆಗಳನ್ನು ಮಾಡುವುದು ಇವೆ ಮೊದಲಾದ ಲಕ್ಷಣಗಳಿಂದ ಕೂಡಿದ ಸಂಸ್ಕೃತಿಗೆ ನವಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ.

ಈ ಹಂತದ ಅತೀ ಮುಖ್ಯ ಲಕ್ಷಣವೆಂದರೆ, ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಆಯುಧಗಳ ಬಳಕೆ, ಕೆಲವೆಡೆ ಇವುಗಳ ಜೊತೆಗೆ ಸೂಕ್ಷ್ಮ ಶಿಲಾಯುಧಗಳನ್ನು ಬಳಸುತ್ತಿದ್ದುದರಿಂದ ಈ ಹಂತದ ಸಂಸ್ಕೃತಿಯನ್ನು ಕಂಚಿನ ಅಥವಾ ಶಿಲಾತಾಮ್ರಯುಗವೆಂದು ಕರೆಯಲಾಗಿದೆ.

ಕೊಪ್ಪಳ-ಹಂಪಿ ಪ್ರದೇಶದ ತೆಕ್ಕಲಕೋಟೆ, ಸಂಗನಕಲ್ಲು (ಬಳ್ಳಾರಿ ಜಿಲ್ಲೆ) ತಾವರೆಗೆರೆ, ಮಸ್ಕಿ, ಪಿಕ್ಲಿಹಾಳ್ ಮತ್ತು ವಟಗಲ್ (ರಾಯಚೂರು) ಈ ಸಂಸ್ಕೃತಿಯ ಮಹತ್ವದ ನೆಲೆಗಳಾಗಿವೆ. ತಾವರಗೇರಾವನ್ನು ಬಿಟ್ಟು ಉಳಿದೆಲ್ಲಾ ನೆಲೆಗಳಲ್ಲಿ ಉತ್ಖನನ ಕೈಗೊಂಡಿದ್ದರಿಂದ ಈ ಪ್ರದೇಶದ ನವ ಶಿಲಾಯುಗ ಸಂಸ್ಕೃತಿಯ ಬಗ್ಗೆ ತಿಳಿದು ಬರುತ್ತದೆ. ಸಂಗನಕಲ್ಲು, ಮಸ್ಕಿಗಳ ಉತ್ಖನನ ವರದಿಯನ್ನು ಈ ಮುಂದೆ ವಿವರಿಸಲಾಗಿದೆ.

ಬಳ್ಳಾರಿಯಿಂದ ೫ ಕಿ.ಮೀ.ದೂರದಲ್ಲಿರುವ ಸಂಗನಕಲ್ಲು ಗ್ರಾಮದ ನೆಲೆಯು ಕರ್ನಾಟಕದ ನವ ಶಿಲಾಯುಗ ಮತ್ತು ತಾಮ್ರ ಶಿಲಾಯುಗದ ಸಂಸ್ಕೃತಿಗಳನ್ನು ಚಿತ್ರಿಸಲು ಕೆಲವೊಂದು ಮಹತ್ವದ ಅಂಶಗಳನ್ನು ನೀಡಿದೆ. ರಾಬರ್ಟ್ ಬ್ರೂಸ್ ಫ್ರೂಟ್ ಮೊದಲಿಗೆ ಈ ನಿವೇಶನವನ್ನು ಶೋಧಿಸಿದರು.[೩೧] ೧೯೪೮ರಲ್ಲಿ ಬಿ.ಸುಬ್ಬರಾವ್ ವರು ಇಲ್ಲಿ ಸಣ್ಣ ಸಣ್ಣ ಪ್ರಮಾಣದ ಉತ್ಖನನ ನಡೆಸಿದರು.[೩೨] ಆನಂತರ ಪುಣೆಯ ಡೆಕ್ಕನ್ ಕಾಲೇಜಿನ ಝುಡ್ .ಡಿ.ಅನ್ಸಾರಿ ಮತ್ತು ಎಂ.ಎಸ್.ನಾಗರಾಜರವರು (೧೯೬೯) ಇಲ್ಲಿ ವಿವರಣಾ ಪೂರ್ಣವಾಗಿ ಉತ್ಖನನ ಕಾರ್ಯ ಕೈಗೊಂಡರು. ಇದರಿಂದಾಗಿ ಪೂರ್ವ ಮೆಸೋಲಿತಿಕ್ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ ಎಂಬ ಪ್ರಾಗೈತಿಹಾಸಿಕ ಸಂಸ್ಕೃತಿಗಳ ಹಂತವನ್ನು ಗುರುತಿಸಲಾಗಿದೆ. ಇಲ್ಲಿ ಭೂಗೋಳ, ನೆಲ, ಹವಾಮಾನ ಇತ್ಯಾದಿಗಳನ್ನು ಅಧ್ಯಯನ ಮಾಡಿದ್ದು, ಅದರ ಹಿನ್ನೆಲೆಯಲ್ಲಿ ಉತ್ಖನನ ಕೈಗೊಳ್ಳಲಾಗಿದೆ. ಇಲ್ಲಿಯ ಆಯುಧಗಳನ್ನು ಬಸಾಲ್ಟ್, ಡಯೋರೈಟ್ ಮುಂತಾದ ಶಿಲೆಗಳಿಂದ ಮಾಡಲಾಗಿದೆ. ಹರಿತವಾದ ಅಂಚುಗಳು ಆಯುಧ ಮೊನೆಯುಳ್ಳ ಉಪಕರಣ ಕುಟ್ಟುವ ಅರೆಯುವ ಸಾಧನಗಳು ಮುಂತಾದವುಗಳನ್ನು ಇಲ್ಲಿ ಮುಖ್ಯವಾಗಿ ಹೆಸರಿಸಬಹುದು. ನಯಗೊಳಿಸಿದ ಕಲ್ಲಿನ ಕೊಡಲಿಗಳ ಜೊತೆ ಕೂರಲಗಿನ ಫಲಕಗಳು (ಸೂಕ್ಷ್ಮ ಶಿಲಾಯುಧಗಳು) ದೊರೆತಿದ್ದರಿಂದ ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯೊಂದಿಗೆ ನವಶಿಲಾಯುಗೀನ ಸಂಸ್ಕೃತಿ ಹೇಗೆ ವಿಲೀನವಾಗಿರಬಹುದೆಂದು ಊಹಿಸಲೂ ಸಾಧ್ಯವಿಲ್ಲ. ಇಲ್ಲಿ ದೊರೆತ ಆಯುಧೋಪಕರಣಗಳು ವೈವಿಧ್ಯ ಮತ್ತು ಪ್ರಮಾಣಗಳನ್ನು ಆಧರಿಸಿ ಇದನ್ನು ಉದ್ದಿಮೆ ಸ್ಥಳವೆಂದೆ ಬಣ್ಣಿಸಲಾಗಿದೆ. ಇಲ್ಲಿ ದೊರೆತ ಮಡಿಕೆ ಕುಡಿಕೆಗಳನ್ನು ಜೇಡಿಮಣ್ಣಿನಿಂದ ಮಾಡಲಾಗಿದೆ. ಇವುಗಳ ಮೇಲೆ ಮಾಸುಬೂದುವರ್ಣದ್ರವದ ಲೇಪನವನ್ನು ಕೊಡಲಾಗಿದೆ. ಇವು ಗಮನಾರ್ಹವಾದವು.

ಮೂಳೆಗಳಿಂದ ಮಾಡಿದ ಮೊನಚಾದ ಡಬ್ಬಣ ತರಹ ಉಪಕರಣಗಳು ಹಾಗೂ ಕಲ್ಲಿನ ಮತ್ತು ಕಾರ್ಲೇನಿಯನ್ ಮಣಿಗಳು, ಕುದುರೆಯ ಮೂಳೆಗಳು ದೊರೆತಿವೆ. ನವಶಿಲಾಯುಗದ ನಂತರ ಬೃಹತ್ ಶಿಲಾಯುಗದ ಆರಂಭ ಕಾಲದ ಸಂಸ್ಕೃತಿಯ ಚಿತ್ರಣ ಕೂಡ ಇಲ್ಲಿ ನಡೆಸಿದ ಉತ್ಖನನದಿಂದ ತಿಳಿಯಲು ಸಾಧ್ಯವಾಗಿದೆ. ಮೇಲ್ಪದರಿನಲ್ಲಿ ದೊರೆತ ಬೃಹತ್ ಶಿಲಾಯುಗದ ಅವಶೇಷಗಳಲ್ಲಿ ಕೆಂಪು, ಕಪ್ಪು-ಬಣ್ಣದ ಮಡಿಕೆಗಳು, ಕಬ್ಬಿಣದ ಆಯುಧೋಪಕರಣಗಳು ದೊರೆತಿವೆ. ಇಲ್ಲಿಯ ಉತ್ಖನನದಲ್ಲಿ ತೋರಿಬಂದ ಮುಖ್ಯ ಅಂಶಗಳಲ್ಲಿ ನೂತನ ಶಿಲಾಯುಗದ ಒಂದು ಗುಡಿಸಲಿನ ಮನೆಯ ಅವಶೇಷ. ಮುಖ್ಯವಾದುದು. ವೃತ್ತಾಕಾರದ ಗುಡಿಸಲು ಇದ್ದು ಆಗಿದ್ದು, ಇದರ ನೆಲೆಕ್ಕೆ ಗ್ರಾನೈಟ್ ಕಲ್ಲಿನ ಚೂರುಗಳನ್ನು ಹಾಕಿ ದುಮ್ಮಸ್ಸು ಮಾಡಲಾಗಿತ್ತು. ಬಳ್ಳಿ ಮತ್ತು ಗಿಡದ ಕಾಂಡಗಳಿಂದ ಮಾಡಲ್ಪಟ್ಟ

ತಡಿಕೆಗೆ ಕಲಸು ಮಣ್ಣನ್ನು ಮೆತ್ತಿ ಗೋಡೆಯನ್ನು ಮಾಡಲಾಗಿತ್ತು. ಗುಡಿಸಲಿನ ಮಧ್ಯದಲ್ಲಿ ಅತೀ ಎತ್ತರ ಕಂಬವನ್ನು ನೆಟ್ಟು, ಕಂಬದ ತುದಿಯಿಂದ ಗೋಡೆಯ ಮೇಲೆ ಇಳಿ ಬೀಳುವ ಹಾಗೆ ಮಾಡು ಇದ್ದಿತು. ಈ ರೀತಿಯ ನೂತನ ಶಿಲಾಯುಗದ ಜನರು ಒಂದು ಸಾಮಾನ್ಯ ಮನೆ ಹೇಗೆ ಇರುತ್ತಿತ್ತು ಎಂಬುದು ಈ ಶೋಧನೆಯಿಂದ ಖಚಿತವಾಗಿದೆ.

ಸಂಗನಕಲ್ಲಿನ ಉತ್ಖನನದ ಮತ್ತೊಂದು ಮುಖ್ಯಾಂಶವೆಂದರೆ ಇಲ್ಲಿ ದೊರೆತ ಮಣ್ಣಿನ ಗೊಂಬೆಗಳಲ್ಲಿ ಮುಖ್ಯವಾಗಿ ಆಕಳುಗಳು, ಎತ್ತುಗಳು ಗೊಂಬೆಗಳು ಹೆಚ್ಚಾಗಿದ್ದು, ಬಹು ಸುಂದರವಾಗಿ ಮೈತುಂಬಿದ ಆರೋಗ್ಯಕರ ಎತ್ತು ದನಗಳನ್ನು ರೂಪಿಸಲಾಗಿದೆ. ಆದ್ದರಿಂದ ಅತೀ ಪ್ರಾಚೀನ ವಸ್ತು ಮತ್ತು ಮೂರ್ತಿ ಶಿಲ್ಪದ ಹಿನ್ನೆಲೆ ಅಥವಾ ಪ್ರಾರಂಭ ಘಟ್ಟವನ್ನು ಇವುಗಳಿಂದ ತಿಳಿಯಬಹುದಾಗಿದೆ.

ಮಸ್ಕಿಯು ರಾಯಚೂರು ಜಿಲ್ಲೆಯ ಲಿಂಗಸ್ಗೂರು ತಾಲೂಕಿನಲ್ಲಿದೆ. ಇಲ್ಲಿ ಅಶೋಕನ ಶಾಸನ ದೊರೆತ ಸ್ಥಳದ ಸುತ್ತಮುತ್ತಲಿನ ವಿಸ್ತಾರದಲ್ಲಿ ಕನಿಷ್ಟ ನೂತನ ಶಿಲಾಯುಗದಿಂದ ಎಡೆಬಿಡದೆ ಜನವಸತಿಯ ಕುರುಹುಗಳಿವೆ. ರಾಬರ್ಟ್ ಬ್ರೂಸ್ ಫ್ರೂಟ್[೩೩] ಮೊದಲಿಗೆ ಈ ನೆಲೆಯನ್ನು ಸಂದರ್ಶಿಸಿ ನವಶಿಲಾಯುಗದ ಅನೇಕ ವಸ್ತುಗಳನ್ನು ಸಂಗ್ರಹಿಸಿದರು. ೧೯೨೮-೨೯ರಲ್ಲಿ ಲಿಯೋನಾರ್ಡ್ ಮನ್ ರವರು ಇಲ್ಲಿಯ ವಸ್ತುಗಳ ಕುರಿತಾಗಿ ಲೇಖನ ಪ್ರಕಟಿಸಿದರು. ನಂತರ ೧೯೩೫-೩೭ರಲ್ಲಿ ಆಗಿನ ಹೈದ್ರಾಬಾದ್ ಸರ್ಕಾರ ಇಲ್ಲಿಯ ನೆಲೆಯಲ್ಲಿ ಉತ್ಖನನ ನಡೆಸಿತು. ೧೯೩೪ರಲ್ಲಿ ಭಾರತದ ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯ ವತಿಯಿಂದ ಬಿ.ಕೆ.ಥಾಪರ್[೩೪] ವರು ಇಲ್ಲಿ ಮತ್ತೇ ಉತ್ಖನನ ನಡೆಸಿದರು. ಈ ಉತ್ಖನನದಲ್ಲಿ ಕೆಳಕಂಡ ಸಂಸ್ಕೃತಿಗಳ ಘಟ್ಟಗಳನ್ನು ಈ ಕೆಳಗಿನಂತೆ ಅನುಕ್ರಮಣಿಸಲಾಯಿತು.

| | | |
|---|---|---|
| ತಾಮ್ರ ಶಿಲಾ ಸಂಸ್ಕೃತಿ | - | ಸು.ಕ್ರಿ.ಪೂ.೧೦೦೦-೪೦೦ |
| ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿ | - | ಸು.ಕ್ರಿ.ಪೂ.೨೦೦-೫೦ |
| ಆದಿ ಚಾರಿತ್ರಿಕ ಸಂಸ್ಕೃತಿ | - | ಸು.ಕ್ರಿ.ಪೂ.೫೦-೩೦೦ |
| ಮಧ್ಯಯುಗೀನ ಸಂಸ್ಕೃತಿ | - | ಸು.ಕ್ರಿ.ಪೂ.೧೦೦೦-೧೬೦೦ |

ಇಲ್ಲಿಯ ತಾಮ್ರ ಶಿಲಾಯುಗದ ಸಂಸ್ಕೃತಿಯ ಘಟ್ಟದಲ್ಲಿ ತಾಮ್ರದ ಉಪಯೋಗ ಅತ್ಯಲ್ಪವಾಗಿದ್ದಂತೆ ತೋರುತ್ತದೆ. ಹೆಚ್ಚಿನ ಆಯುಧೋಪಕರಣಗಳಲ್ಲಿ ಚರ್ಟ ಜಾತಿಯ ಹರಿತವಾದ ಚಾಕುವಿನಂತಹ ಆಯುಧ, ಕುಡುಗೋಲಿನಂತಹ ಉಪಕರಣಕ್ಕೆ ಉಪಯೋಗಿಸಿದ ಸಣ್ಣ ಸಣ್ಣ ಚಕ್ಕೆ ಚೂರುಗಳು ಮುಂತಾದ ಸೂಕ್ಷ್ಮ ಶಿಲಾಯುಧಗಳು ಮತ್ತು ಅವುಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದ ದಿಂಡುಕಲ್ಲುಗಳು ಇವೆ. ನಯವಾದ ಕರಿಕಲ್ಲಿನ ಕೊಡಲಿಗಳು ಹಾಗೂ ದನಕುರಿ ಮೊದಲಾದ

ಸಾಕುಪ್ರಾಣಿಗಳ ಮೂಳೆಗಳು ಇಲ್ಲಿ ದೊರೆತಿವೆ. ಆದರೆ ಮನೆಗಳ ಬಗ್ಗೆ ತಿಳಿದು ಬಂದಿಲ್ಲ. ಮಡಿಕೆಗಳು ಕಂದು ಮತ್ತು ನಸುಗೆಂಪು ಬಣ್ಣದಿಂದ ಕೂಡಿದ್ದು, ಹೆಚ್ಚಿನವು ತಿರಗಿಯಲ್ಲಿ ತಯಾರಾಗಿವೆ. ಜೊತೆಗೆ ಕಾರ್ಲಿನಿಯನ್, ಅಗೇಟು, ಶಂಖು ಮತ್ತು ಮಣ್ಣಿನ ಮಣಿಗಳು ದೊರೆತಿವೆ.

ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ಕಾಲದ ವೈಶಿಷ್ಟ್ಯಗಳೆಂದರೆ ಬೃಹತ್ ಶಿಲಾ ಸಮಾದಿಗಳು ಮತ್ತು ಕಬ್ಬಿಣದ ಬಳಕೆ ಈ ಸಂಸ್ಕೃತಿಯಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ತಿಗರಿಯ ಮೇಲೆ ಮಾಡಿದ ಮಡಿಕೆಗಳು, ಹೇರಳವಾಗಿ ಕಂಡುಬಂದಿವೆ. ಶಂಖದ ಬಳೆ, ಮಣ್ಣಿನ ಮಣಿ, ಚಿಕ್ಕ ಚಿಕ್ಕ ಆಟದ ಬಿಲ್ಲೆಗಳು ಮತ್ತು ಗೋಲಿಗಳು ಇಲ್ಲಿ ದೊರೆತಿವೆ. ಕೆಲವು ಕಂಬಗಳ ಗುಳಿಗಳನ್ನು ಬಿಟ್ಟರೆ ಆ ಕಾಲದ ಮನೆಗಳ ಬಗ್ಗೆ ಯಾವ ಮಾಹಿತಿಯೂ ದೊರೆಯುವುದಿಲ್ಲ.

ಇನ್ನು ಈ ಕಾಲಕ್ಕೆ ಸೇರಿದ ಐದು ವಿವಿಧ ಸಮಾಧಿಗಳನ್ನು ಗುರುತಿಸಿ ಅಗೆಯಲಾಯಿತು. ಅವೆಲ್ಲ ಗುಳಿ ಸಮಾಧಿ ರೀತಿಯವು. ಮೊದಲನೆಯ ವಿಧದಲ್ಲಿ ಗುಳಿಯ ಒಳಗೆ ಅಸ್ತಿ ಅವಶೇಷಗಳನ್ನು ಮಡಿಕೆ ಒಳಗೆ ಇಟ್ಟು ಸಮಾಧಿ ಮಾಡಲಾಗುತ್ತಿತ್ತು. ಈ ಎಲ್ಲಾ ಸಮಾಧಿಗಳಲ್ಲಿ ಕಬ್ಬಿಣದ ಆಯುಧ ಮತ್ತು ಕಪ್ಪು, ಕೆಂಪು ಬಣ್ಣದ ಮಡಿಕೆಗಳಿದ್ದವು. ಸಮಾಧಿ ಗುಳಿಯ ನೆಲಕ್ಕೆ ಬೂದಿ ಅಥವಾ ಸುಣ್ಣದ ಪುಡಿಯನ್ನು ಹರಡಿರುವುದು ಹಾಗೂ ಈ ಸಮಾಧಿ ಗುಳಿಗಳು ಅಂಡಾಕೃತಿಯಲ್ಲಿ ಇದು ಸಾಮಾನ್ಯವಾಗಿ ಉತ್ತರ ದಕ್ಷಿಣಾಭಿಮುಖವಾಗಿರುವುದು ವಿಶೇಷವಾಗಿದೆ. ಅಲ್ಲದೇ ಒಂದನೇಯ ಮತ್ತು ನಾಲ್ಕನೆಯ ವಿಧದ ಸಮಾಧಿಗಳು ಉದ್ದಕ್ಕೆ ಮಲಗಿದ ಮಾನವನ ಪೂರ್ಣ ಅಸ್ತಿಪಂಜರಗಳ ಸಮಾಧಿಗಳಾಗಿದ್ದ ಅವು ಈ ಜನ ವಸತಿಯ ನೆಲೆಯಲ್ಲಿಯೇ ಕಂಡುಬಂದಿದ್ದು ಗಮನಾರ್ಹವಾಗಿದೆ. ಸಾಮಾನ್ಯವಾಗಿ ಉಳಿದೆಡೆಗಳಲ್ಲಿ ಕಂಡುಬರುವ ಬೃಹತ್ ಶಿಲಾಗೋರಿಗಳಿಗಿಂತ ಇವು ಭಿನ್ನವಾಗಿವೆ. ಏಕೆಂದರೆ ಇತರೆಡೆಗಳಲ್ಲಿ ಕೇವಲ ಶವದ ಅಸ್ತಿ ಅವಶೇಷಗಳನ್ನು ಗಡಿಗೆಗಳಲ್ಲಿ ಹಾಕಿ ಹುಗಿದರೆ ಇಲ್ಲಿ ಪೂರ್ಣ ಶವವನ್ನೇ ಹುದುಗಿದ್ದು ಕಂಡು ಬರುತ್ತದೆ. ಇದರಿಂದ ಬೃಹತ್ ಶಿಲಾಸಂಸ್ಕೃತಿಯ ಕಾಲದ ಒಂದು ವಿಭಿನ್ನ ಸಂಸ್ಕೃತಿಯ ಜನ ಇಲ್ಲಿ ವಾಸಿಸುತ್ತಿದ್ದರು ಎಂಬುದಾಗಿ ಊಹಿಸಬಹುದಾಗಿದೆ.

ಇತಿಹಾಸ ಆರಂಭಕಾಲಕ್ಕೆ ಸಂಬಂಧಿಸಿದಂತೆ ಸಾಮಾನ್ಯ ರೀತಿಯ ಕೆಂಪು ಹಾಗೂ ಕಪ್ಪು ಮತ್ತು ನಸುಗೆಂಪು ಬಣ್ಣದ ಮಡಿಕೆಗಳ ಜೊತೆಗೆ ಸೌದೆಯ ನೀಳಗಳಿಂದ ಅಲಂಕೃತವಾದ ಮಡಿಕೆಗಳು ಕಂಡು ಬಂದಿವೆ. ಚರ್ಟ್‌ಜಾತಿಯ ಕಲ್ಲುಗಳು ಮತ್ತು ಸುಟ್ಟ ಮಣ್ಣಿನ ಮಗಿಗಳು ಹಾಗೂ ಶಂಖದ ಬಳೆಗಳು ಈ ಸ್ಥಳದಲ್ಲಿ ದೊರೆತವು. ಕಬ್ಬಿಣದ ವಸ್ತುಗಳು ಅಲ್ಪ ಪ್ರಮಾಣದಲ್ಲಿ ದೊರೆತಿವೆ. ಈ ಕಾಲದ ಹೊತ್ತಿಗೆ ನಾಣ್ಯಗಳ ಬಳಕೆ ರೂಪಿಸಲಾಗಿದ್ದು ಇಲ್ಲಿಯ ಉತ್ಖನನದಲ್ಲಿ ಒಂದು ಸತವು ಎಂಬ ಮಿಶ್ರ

ಲೋಹದ ನಾಣ್ಯ ದೊರೆತಿದೆ. ಹೀಗೆ ಇಲ್ಲಿ ದೊರೆತಿರುವ ವಿಫುಲ ಸಾಮಗ್ರಿಗಳಿಂದ ನೆಲೆಯು ಬಹಳ ಮಹತ್ವದ ಪ್ರಾಗೈತಿಹಾಸಿಕ ನಿವೇಶನ ಎಂದು ಗೊತ್ತಾಗುತ್ತದೆ. ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಕಾಲದಲ್ಲಿ ಇದು ಬೃಹತ್ ನಗರವಾಗಿರಬೇಕೆಂದು, ಅಶೋಕನ ಶಿಲಾಶಾಸನಗಳಲ್ಲಿ ಉಲ್ಲೇಖಗೊಂಡಿರುವ ಸುವರ್ಣಗಿರಿಯ ಮಸ್ಕಿ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಉತ್ಖನನಗೊಂಡ ಈ ಮೇಲಿನ ನೆಲೆಯಲ್ಲದೆ ಕೊಪ್ಪಳ-ಹಂಪಿಗಳಲ್ಲಿ ಸುತ್ತಮುತ್ತಲಿನ ಮತ್ತು ವಿಶೇಷವಾಗಿ ಗಂಗಾವತಿ ತಾಲೂಕಿನಲ್ಲಿ ಸುಂದರವರು ನೂತನ ಶಿಲಾಯುಗ ಸಂಸ್ಕೃತಿಯ ಇನ್ನಷ್ಟು ನೆಲೆಗಳನ್ನು ಶೋಧಿಸಿದ್ದಾರೆ.[೩೫] ಅವು ಹಣವಾಳ, ಹೆರೂರು, ಕೆಸರಟ್ಟಿ, ಗೋನಾಳ, ಅರ್ಾಳ, ಹಿರೇಜಂತಕಲ್, ಜಂಗಮರಕಲ್ಲುಡಿ, ಹೊಸಕೇರಾ, ಹೆಬ್ಬಾಳ, ಕುಂಟೋಜಿ, ಸಿಂಗನಾಳ, ತಿಪ್ಪನಾಳ, ಪನ್ನಾಪುರ, ಬೇವಿನಹಾಳ್ ಮತ್ತು ಸೋಮನಾಳ್ ಈ ಗ್ರಾಮಗಳ ನೆಲೆಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಬೂದು ವರ್ಣದ ಮೃತ್ ಪಾತ್ರೆಯ ಚೂರುಗಳು, ಅಪರೂಪವಾಗಿ ಉತ್ತಮ ಜಾತಿಯ ಚಕಮಕಿ ಕಲ್ಲಿನ ಬ್ಲೇಡಿನಂತಹ ಚಕ್ಕೆಗಳ ಸಣ್ಣ ಸಣ್ಣ ಆಯುಧಗಳು ತಿಕ್ಕಿ ನಯ ಮಾಡಿದ ಮೈಯುಳ್ಳ ಕಲ್ಲಿನ ಕೊಡಲಿಗಳ ಅವಶೇಷಗಳು, ಪ್ರಾಣಿಗಳ ಎಲುಬುಗಳು ಇವೆ. ಈ ನೆಲೆಗಳು ಈ ಭಾಗದಲ್ಲಿ ನೂತನ ಶಿಲಾಯುಗದ ವಾಸ್ತವ್ಯದ ಸಾಂದ್ರತೆಯನ್ನು ತಿಳಿಯಲು ಸಹಾಯಕವಾಗುತ್ತದೆ.

ಈ ಮೇಲಿನಂತೆ ನವಶಿಲಾಯುಗ ಸಂಸ್ಕೃತಿಯ ನೆಲೆಗಳ ಸ್ಥೂಲ ವಿವೇಚನೆಯಿಂದ ನಮಗೆ ಕೊಪ್ಪಳ ಹಂಪಿ ಪ್ರದೇಶದಲ್ಲಿ ಈ ಸಂಸ್ಕೃತಿಯು ಯಾವ ರೀತಿ ಬೆಳೆದು ಬಂದಿತ್ತು ಅನ್ನುವುದನ್ನು ತಿಳಿದು ಬರುತ್ತದೆ. ಒಟ್ಟಾರೆ ಸಂಗ್ರಹಿಸಿ ಈ ಸಂಸ್ಕೃತಿಯ ಸ್ವರೂಪವನ್ನು ಹೀಗೆ ಹೇಳಬಹುದು.[೩೬] ಈ ಯುಗದ ಜನರ ಜೀವನ ಸರಳವಾಗಿತ್ತು. ಇವರು ಹೆಚ್ಚಾಗಿ ನದಿ ಹಳ್ಳಗಳ ದಂಡೆಗಳ ಮೇಲೆ ಹುಲ್ಲು ಸೊಪ್ಪು, ಕಟ್ಟಿಗೆಗಳಿಂದ ನಿರ್ಮಿಸಿದ ಮನೆಗಳಲ್ಲಿ ವಾಸಿಸುತ್ತಿದ್ದರು. ತಮಗೆ ಬೇಕಾದ ಆಯುಧಗಳನ್ನು ಕರಿಕಲ್ಲು ಮತ್ತು ಚಕಮಕಿ ಕಲ್ಲಿನಲ್ಲಿ ಮಾಡುತ್ತಿದ್ದರು. ಕರಿಕಲ್ಲಿನಲ್ಲಿ ಕೊಡಲಿ ಬಾಚಿ ಉಳಿ ಕುಳ ಉಂಗುರ ಇವುಗಳನ್ನು, ಚಕಮಕಿ ಕಲ್ಲಿನಲ್ಲಿ ನೀಳವಾದ ಹರಿತವಾದ ಬದಿಯುಳ್ಳ ಆಯುಧಗಳನ್ನು ಮಾಡುತ್ತಿದ್ದರು. ನಿತ್ಯ ಬಳಕೆಗೆ ಬೇಕಾದ ಪಾತ್ರೆಗಳನ್ನು ಮಣ್ಣಿನಿಂದಲೆ ತಯಾರಿಸುತ್ತಿದ್ದರು. ಅವುಗಳಲ್ಲಿ ಉಬ್ಬಿದ ಹೊಟ್ಟೆಯುಳ್ಳ ಕೊಡಗಳು, ತಟ್ಟೆ, ಅರ್ಧಗೋಲಾಕೃತಿಯ ಪಾತ್ರೆಗಳು ಮುಖ್ಯವಾದವು. ಇವು ಬೂದು ಮತ್ತು ಕೆಂಪು ಬಣ್ಣದ್ದಾಗಿರುತ್ತಿದ್ದವು. ಕೆಲ ಪಾತ್ರೆಗಳ ಮೇಲೆ ಪ್ರಾಣಿ, ಪಕ್ಷಿಗಳ ರೇಖಾಚಿತ್ರಗಳಿರುತ್ತಿದ್ದವು.

ಈ ಜನರು ಆಹಾರಕ್ಕಾಗಿ ಭತ್ತ, ಹುರಳಿ, ಗೋಧಿ ಬೆಳೆಸುತ್ತಿದ್ದರು. ಜೊತೆಗೆ ಮಾಂಸವನ್ನು ಆಹಾರಕ್ಕಾಗಿ ಉಪಯೋಗಿಸುತ್ತಿದ್ದರು. ಮೀನುಗಾರಿಕೆ, ಬೇಟೆ, ಪ್ರಾಣಿಗಳನ್ನು ಸಾಕುವುದು ಇವರ

ಕಸುಬಾಗಿದ್ದವು. ಅಲಂಕಾರ ಪ್ರಿಯರಾಗಿದ್ದ ಇವರು ಮಣಿಗಳ ಸರ, ಕಿವಿಯೋಲೆ, ಬಳೆ, ಉಂಗುರ ಧರಿಸುತ್ತಿದ್ದರು. ಇವರು ಮಣ್ಣಿನಲ್ಲಿ ಗೊಂಬೆಗಳನ್ನು ತಯಾರಿಸುತ್ತಿದ್ದರು. ಅವುಗಳಲ್ಲಿ ದನ ಮತ್ತು ಹೆಂಗಸಿನ ಗೊಂಬೆಗಳು ಹೆಚ್ಚು. ಸತ್ತವರನ್ನು ಹೊರಗಡೆ ಹುಗಿಯುವುದಲ್ಲದೆ, ಕೆಲವು ವೇಳೆ ಮನೆಗಳಲ್ಲಿಯೆ ಹುಗಿಯುತ್ತಿದ್ದರು. ಇವರು ಅಲ್ಪಮಟ್ಟಿಗೆ ತಾಮ್ರ ಮತ್ತು ಕಂಚುಗಳ ವಸ್ತುಗಳನ್ನು ಉಪಯೋಗಿಸುತ್ತಿದ್ದರು. ಆದರೆ, ಕಬ್ಬಿಣದ ಯಾವುದೇ ವಿಧದ ವಸ್ತುಗಳನ್ನು ಉಪಯೋಗಿಸುತ್ತಿದ್ದುದು ತಿಳಿದುಬಂದಿಲ್ಲ. ಈ ಜನರು ಉತ್ತರದಲ್ಲಿ ಗೋದಾವರಿ ಪ್ರದೇಶದಲ್ಲಿಯ ದಕ್ಷಿಣದಲ್ಲಿಯ ಕಾವೇರಿ ನದಿ ಬಯಲು ಪ್ರದೇಶದಲ್ಲಿಯ ಸಮಕಾಲೀನ ಜನರೊಡನೆ ಸಂಪರ್ಕವನ್ನು ಹೊಂದಿದ್ದರು.

ಒಟ್ಟಾರೆ ಈ ಸಂಶೋಧನೆಗಳಿಂದ ಈ ಪ್ರದೇಶದಲ್ಲಿ ಒಂದು ಸಾಧಾರಣ ಗ್ರಾಮ ಜೀವನ ಪದ್ಧತಿ ಸುಮಾರು ೩೦೦೦ ಸಾವಿರ ವರ್ಷಗಳ ಹಿಂದೆಯೇ ಚೆನ್ನಾಗಿ ಬೆಳೆದಿತ್ತು ಎಂಬುದು ಸ್ಪಷ್ಟವಾಗಿದೆ. ಆದರೂ ಕೂಡ ಈ ಜನರ ಗವಿವರ್ಣದ ಚಿತ್ರಗಳು ಹಾಗೂ ಮಣ್ಣಿನ ಗೊಂಬೆಗಳನ್ನು ಪರಿಶೀಲಿಸಿದಲ್ಲಿ ಒಬ್ಬ ಉತ್ತಮ ಕಲಾವಿದನಲ್ಲಿರುವ ಸೂಕ್ಷ್ಮ ಪರಿಶೀಲನೆ, ಸಂವೇದನೆ ನೈಜತೆಯ ಗ್ರಹಣಶಕ್ತಿ ಮತ್ತು ಸರಳ ರೇಖೆಯಲ್ಲಿಯ ಮಾರ್ಮಿಕವಾಗಿ ಇವೆಲ್ಲವನ್ನು ಪ್ರತಿಬಿಂಬಿಸುವ ಕಲಾಪ್ರೌಢಿಮೆಯನ್ನು ಚೆನ್ನಾಗಿ ಬೆಳೆಸಿಕೊಂಡು ಮುಂದಿನ ಪೀಳಿಗೆಗಳ ಕಲಾಬಿಜ್ಞತೆಗೆ ಬಲವಾದ ಮತ್ತು ಸರಿಯಾದ ಒಂದು ಬುನಾದಿಯನ್ನು ಹಾಕಿದ್ದಾರೆಂದು ಹೇಳಬಹುದು.

ಆದ್ದರಿಂದ ಮಾನವನ ಸಾಂಸ್ಕೃತಿಕ ಇತಿಹಾಸದಲ್ಲಿ ಇದು ಒಂದು ಮಹತ್ವದ ಕೊಡುಗೆ. ಇನ್ನೊಂದು ಮುಖ್ಯಾಂಶವೆಂದರೆ, ಲೋಹ, ತಂತ್ರಜ್ಞಾನ, ತಾಮ್ರ ಇಲ್ಲವೆ ಕಂಚಿನ ವಸ್ತುಗಳ ಬಳಕೆಯಿಂದ ಇವರಿಗೆ ತಾಮ್ರ ಅದರಿನಿಂದ ನಿಕ್ಷೇಪ ಗುರುತಿಸುವಿಕೆ, ಅದಿರಿನಿಂದ ತಾಮ್ರ, ಲೋಹವನ್ನು ತಯಾರಿಸುವುದು ಮೊದಲಾದ ಕ್ಲಿಷ್ಟ ತಾಂತ್ರಿಕತೆಯನ್ನು ಪ್ರಥಮ ಬಾರಿಗೆ ಹುಟ್ಟುಹಾಕಿ ಬೆಳೆಸಿದ ಸಾಧನೆ ಈ ಜನರಿಗೆ ಸೇರುತ್ತದೆ.

**ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ**

ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ಜನರ ವೈಶಿಷ್ಟ್ಯವೆಂದರೆ, ಸತ್ತವರ ಸಂಸ್ಕಾರ ಮಾಡುವ ಕ್ರಮ. ನೈಸರ್ಗಿಕವಾಗಿ ದೊರೆಯುವ ಒರಟಾದ ದೊಡ್ಡ ದೊಡ್ಡ ಕಲ್ಲು ಬಂಡೆಗಳನ್ನು ಉಪಯೋಗಿಸಿ ಗೋರಿಗಳನ್ನು ಕಟ್ಟುತ್ತಿದ್ದರು. ಈ ಗೋರಿಗಳಲ್ಲಿ ಶವದ ಅವಶೇಷಗಳನ್ನು ಗಡಿಗೆ ಮಡಿಕೆಗಳನ್ನು ಕಬ್ಬಿಣದ ಉಪಕರಣಗಳನ್ನು ಇಟ್ಟು ಮುಚ್ಚುತ್ತಿದ್ದರು. ಈ ಜನರ ವಾಸದ ನೆಲೆಗಳ ಸಮೀಪ ಇಂಥ ನೂರಾರು ಶಿಲಾಸಮಾಧಿಗಳು ಕಂಡುಬರುತ್ತವೆ. ಈ ಜನರು ಕಬ್ಬಿಣದ ಉಪಯೋಗವನ್ನು

ಅರಿತಿದ್ದರು. ಕಬ್ಬಿಣದ ಆಯುಧಗಳನ್ನು ಮತ್ತು ಸಲಕರಣೆಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಆದ್ದರಿಂದ ಇವರ ಸಂಸ್ಕೃತಿಯನ್ನು ಕಬ್ಬಿಣಯುಗದ ಬೃಹತ್ ಶಿಲಾಸಂಸ್ಕೃತಿ ಎಂದು ಕರೆಯಲಾಗಿದೆ.

ಪ್ರದೇಶಕ್ಕೆ ಸಂಬಂಧಿಸಿದಂತೆ ಮಸ್ಕಿ, ಸಂಗನಕಲ್ಲು ಮತ್ತು ಹಿರೇಬೆಣ್‌ಕಲ್ ಗಳಲ್ಲಿ ಈ ಸಂಸ್ಕೃತಿಯ ಕಲ್ಗೋರಿಗಳು ಕಂಡು ಬಂದಿವೆ. ಸಂಗನಕಲ್ಲು ಮತ್ತು ಮಸ್ಕಿಯಲ್ಲಿ ಈ ಸಂಸ್ಕೃತಿಯ ನಾಲ್ಕು ರೀತಿಯ ಶವಗುಂಡಿಗಳನ್ನು ಉತ್ಖನನ ಮಾಡಲಾಗಿದೆ. ಇದರಿಂದ ಈ ಪ್ರದೇಶದಲ್ಲಿ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ಬಗ್ಗೆ ತಿಳಿದು ಬರುತ್ತದೆ.

ಮಸ್ಕಿ ಸಂಗನಕಲ್ಲು, ಮತ್ತು ಹಿರೇಬೆಣಕಲ್‌ಗಳಲ್ಲದೆ ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಸುಂದರರವರು ಇನ್ನಷ್ಟು ನೆಲೆಗಳನ್ನು ಶೋಧಿಸಿದ್ದಾರೆ.[೩೭] ಅವು ಕೊಪ್ಪಳ, ಶಿವಪುರ, ಬಂಡಿಹರ್ಲಾಪುರ, ಬಿಳೇಭಾವಿ (ಕೊಪ್ಪಳ ತಾ) ತಿಪ್ಪನಾಳ, ಗೂಡೂರು, ಬಸರಿಹಾಳ, ಜಿರಾಳಕಲ್ಲುಗಡಿ, ಬಂಡರಹಾಳ, ಗಡ್ಡಿ ಮತ್ತು ಚಿಕ್ಕಮಾದಿಹಾಳ, ಚಿಕ್ಕಬೆಣಕಲ್, ಆಗೋಲಿ, ಮಲ್ಲಾಪುರ, ಕಲ್ಲಪ್ಪನಕ್ಯಾಂಪ್, ಹಿರೇಬೆಣಕಲ್ ಈ ಗ್ರಾಮಗಳ ನೆಲೆಗಳಲ್ಲಿ ದುಂಡು ಕಟ್ಟೆಗಳ, ಶವ-ಕುಣಿಗಳು ಮತ್ತು ಕಂಡಿಕೋಣಿ ಗೋರಿಗಳೆಂದು ಮೂರು ವಿಧವಾದ ಬೃಹತ್ ಶಿಲಾ ಗೋರಿಗಳು ಕಂಡು ಬರುತ್ತವೆ. ಇವು ಮಸ್ಕಿಯ ಬೃಹತ್ ಶಿಲಾಗೋರಿಗಳಿಗೆ ಹೋಲುತ್ತವೆ. ಮತ್ತು ಈ ನೆಲೆಗಳಲ್ಲಿ ಹೊಳಪಾದ ಕಪ್ಪು, ಕೆಂಪು ಬಣ್ಣದ ಮಡಿಕೆಗೆ ಕಬ್ಬಿಣದ ಉಪಕರಣದ ಅವಶೇಷಗಳು, ಮಾನವನ ಅಸ್ಥಿ ಚೂರುಗಳು ಕಂಡುಬರುತ್ತವೆ. ಕೆಲವು ನೆಲೆಗಳಲ್ಲಿ ನೂತನ ಶಿಲಾಯುಗದ ಜನರು ಇದ್ದಂತೆಯೇ ತಮ್ಮ ವಿಶಿಷ್ಟ ಪರಂಪರೆಯೊಡನೆ ಈ ಜನರು ಬಂದು ಅವರೊಡನೆ ನೆಲೆಸಿದ್ದರೆಂಬುದಕ್ಕೆ ಸಾಕ್ಷಿಗಳು ದೊರೆತಿವೆ. ಮತ್ತು ಈ ಜನರ ವಿಶಿಷ್ಟ ಪರಂಪರೆಯ ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಆದಿ ಹಂತದಲ್ಲಿ ಕೊನೆಗೊಂಡಂತೆ ತಿಳಿದು ಬಂದಿದೆ. ಆದ್ದರಿಂದ ಈ ಸಂಸ್ಕೃತಿಯ ಕಾಲಮಾನವನ್ನು ಸುಮಾರು ಕ್ರಿ.ಪೂ.೮ನೇ ಶತಮಾನದಿಂದ ೨ನೇ ಶತಮಾನದವರೆಗೆ ಎಂದು ತರ್ಕ ಮಾಡಲಾಗಿದೆ.

ಕಬ್ಬಿಣ ಯುಗ ಬೃಹತ್ ಶಿಲಾ ಸಂಸ್ಕೃತಿಯ ಜನ ನೂತನ ಶಿಲಾಯುಗದ ಜನರಿಗಿಂತ ಹೆಚ್ಚಿನ ಪ್ರಗತಿ ಸಾಧಿಸಿದ್ದರು. ಇವರ ಜೀವನ ವೈಶಿಷ್ಟ್ಯವೆಂದರೆ ಶವಸಂಸ್ಕಾರ ಕ್ರಮ. ದೊಡ್ಡ ಕಲ್ಲು ಬಂಡೆಗಳಿಂದ ಗೋರಿಗಳನ್ನು ನಿರ್ಮಿಸುತ್ತಿದ್ದರು. ನೀರಿನ ಸೌಕರ್ಯವುಳ್ಳ ಪ್ರದೇಶಗಳಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಇವರ ಎಲ್ಲಾ ಆಯುಧ ಮತ್ತು ಸಲಕರಣೆಗಳು ಕಬ್ಬಿಣದಾಗಿದ್ದವು. ಕತ್ತಿಗಳು, ಕೊಡಲಿ, ಬಾಚಿ, ಈಟಿ, ಬಾಣ, ತಾಮ್ರದ ಗಂಟೆ ಸಾಮಾನ್ಯವಾಗಿದ್ದವು. ಇವರು ಹೆಚ್ಚಾಗಿ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಅವು ಒಳಭಾಗ ಮತ್ತು ಹೊರ ಮೈಮೇಲ್ಭಾಗದಲ್ಲಿ

ಅಚ್ಚ ಕಪ್ಪಾಗಿ ಒಳ್ಳೆಯ ಹೊಳಪಿನಿಂದ ಕೂಡಿದ ಕೆಳಭಾಗ ಕೆಂಪು ಬಣ್ಣದಲ್ಲಿರುತ್ತಿದವು. ಇವುಗಳಲ್ಲಿ ದೊಡ್ಡ ಗುಡಾಣ, ಹರವಿ, ಬಾನಿ, ಕೊಡ, ತಟ್ಟೆ, ಲೋಟ ಮುಖ್ಯವಾಗಿದ್ದವು. ಇವರ ವ್ಯವಸಾಯ ಸುಧಾರಿಸಿದ್ದಿತು. ಗದ್ದೆಗಳಲ್ಲಿ ಭತ್ತ, ರಾಗಿ, ಬೆಳೆಯುತ್ತಿದ್ದರು. ಅಷ್ಟೇನೂ ಅಲಂಕಾರ ಪ್ರಿಯರಲ್ಲದ ಇವರು ಸುಟ್ಟ ಮಣ್ಣಿನ ಉತ್ತಮ ಜಾತಿಯ ಕಲ್ಲಿನ ಮತ್ತು ತಾಮ್ರದ, ಚಿನ್ನದ ಮಣಿಗಳ ಸರ ಬಳೆ, ಕಿವಿಯೋಲೆಗಳನ್ನು ಧರಿಸುತ್ತಿದ್ದರು. ಇವರು ನೂತನ ಶಿಲಾಯುಗದ ಜನರಂತೆ ಬಂಡೆ, ಗವಿಗಳಲ್ಲಿ ಚಿತ್ರಗಳನ್ನು ಬರೆಯುತ್ತಿದ್ದರು. ಹಿರೆಬೆಣಕಲ್ ನಲ್ಲಿ ಇಂತಹ ಚಿತ್ರಗಳ ಗವಿಗಳಿವೆ. ಈ ಚಿತ್ರಗಳಲ್ಲಿ ಮುಖ್ಯವಾಗಿ ಕುದರೆ, ಸವಾರರ ಚಿತ್ರ, ಗುಂಪು ಕುಣಿತದ ದೃಶ್ಯ ಅಲ್ಲದೇ ಜಿಂಕೆ, ಆಕಳು, ನವಿಲು ಕಂಡುಬರುತ್ತವೆ.

ಈ ಜನರ ಸಂಸ್ಕೃತಿಯು ಇವರ ಹಿಂದಿನ ನೂತನ ಶಿಲಾಯುಗದ ಜನರಂತೆ ಗ್ರಾಮ ಜೀವನ ಪದ್ಧತಿ ಇದ್ದರೂ ಕೂಡ ನಾಗರೀಕ ಸಂಸ್ಕೃತಿಗೆ ಪೀಠಿಕೆ ಹಾಕಿದವರು ಈ ಜನರೆಂದು ಹೇಳಬಹುದು. ಇದಕ್ಕೆ ಮುಖ್ಯ ಕಾರಣ ತಮ್ಮ ದೈನಂದಿನ ಕೆಲಸಕ್ಕೆ ಹಾಗೂ ತಮ್ಮ ರಕ್ಷಣೆಗೆ ಇವರು ಉಪಯೋಗಿಸುತ್ತಿದ್ದ ಕಬ್ಬಿಣ ಉಪಕರಣಗಳು ಮತ್ತು ಆಯುಧಗಳು ಅಷ್ಟೇ ಅಲ್ಲ. ಕಬ್ಬಿಣ ಉಪಕರಣಗಳ ಬಳಕೆಯಿಂದ ಕ್ರಮೇಣವಾಗಿ ಕಲ್ಲಿನ ಉಪಕರಣಗಳನ್ನು ಮಾಡುವ ಅವಶ್ಯಕತೆ ಇಲ್ಲದಂತಾಗಿ ಶಿಲಾಯುಗ ಕೊನೆಗೊಂಡಿತು. ಮತ್ತು ಕಬ್ಬಿಣದ ಉಪಕರಣಗಳು ಕಲ್ಲಿನ ಉಪಕರಣಗಳಿಗಿಂತ ಕೆಲಸಕ್ಕೆ ತುಂಬಾ ಪರಿಣಾಮಕಾರಿಯಾದುದರಿಂದ ಕಡಿಮೆ ಸಮಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದೊಡ್ಡ ದೊಡ್ಡ ಕಾಡುಗಳನ್ನು ಬಯಲು ಮಾಡಿ ಹೆಚ್ಚು ಭೂಮಿಯನ್ನು ಕೃಷಿಗೆ ಅಳವಡಿಸಲು ಸಾಧ್ಯವಾಯಿತು. ಮತ್ತು ತಮಗೆ ಬೇಕಾದ ರೀತಿಯಲ್ಲಿ ಕೃಷಿ ಉಪಕರಣಗಳಲ್ಲಿ ಮಾಡಿಕೊಳ್ಳಲು ಅನುಕೂಲವಾಯಿತು. ಇದರಿಂದ ಉತ್ಪತ್ತಿ ಹೆಚ್ಚಾಗಿ ಆರ್ಥಿಕ ಪರಿಸ್ಥಿತಿಯು ಉತ್ತಮವಾಯಿತು. ಇವೆರಡು ರಾಜಕೀಯ ಪರಂಪರೆಗೆ ಬುನಾದಿಯನ್ನು ಹಾಕಿದವು. ಆದ್ದರಿಂದ ಮಾನವನ ಸಾಂಸ್ಕೃತಿಕ ಬೆಳವಣಿಗೆಯ ಇತಿಹಾಸದಲ್ಲಿ ಇದೊಂದು ಮುಖ್ಯ ಘಟ್ಟ.

**ಇತಿಹಾಸ ಪ್ರಾರಂಭ ಕಾಲದ ಸಂಸ್ಕೃತಿ**

ಕ್ರಿ.ಪೂ. ೪, ೩ನೇ ಶತಮಾನದ ಹೊತ್ತಿಗೆ ಈ ಭಾಗವು ಮೌರ್ಯ ಸಾಮ್ರಾಜ್ಯದಲ್ಲಿ ಸೇರಿಹೋಯಿತು. ಇದಕ್ಕೆ ಸಾಕ್ಷಿಯಾಗಿ ಕೊಪ್ಪಳ, ಮಸ್ಕಿ, ನಿಟ್ಟೂರು, ಉದಯಗೊಳಂಗಳಲ್ಲಿ ಅಶೋಕನ ಶಾಸನಗಳಿರುವುದು. ಈ ರಾಜಕೀಯ ಸ್ಥಿರತೆ ಮತ್ತು ಸಾಂಸ್ಕೃತಿಕ ಪ್ರಗತಿಯಿಂದ ಇಲ್ಲಿಯ ಜನರ ಜೀವನಕ್ರಮದಲ್ಲಿ ಹೆಚ್ಚಿನ ಸುಧಾರಣೆ ಕಂಡುಬಂದವು. ಗುಡಸಲಿನಂಥ ಮಣ್ಣಿನ ಮನೆಗಳ ಜೊತೆಗೆ ದೇವಾಲಯಗಳನ್ನು, ಮನೆಗಳನ್ನು, ಬಾವಿಗಳನ್ನು ಕಟ್ಟಲು ಸುಟ್ಟ ಇಟ್ಟಿಗೆಗಳನ್ನು ಬಳಸಲಾರಂಭಿಸಿದರು. ಗೋಡೆ ಕಟ್ಟಲು ಕೆಲವು ಕ್ರಮಗಳನ್ನು ಅನುಸರಿಸುತ್ತಿದ್ದರು. ಮೊದಲಿಗೆ

ಕಲ್ಲುಗುಂಡುಗಳನ್ನು ಸಮಾನವಾಗಿ ಹೊಂದಿಸಿ ಅದರ ಮೇಲೆ ಗರಸು ಮಣ್ಣನ್ನು ಹಾಕಿ ನಂತರ ಗೋಡೆಯನ್ನು ಕಟ್ಟುತ್ತಿದ್ದರು. ಕೆಲವು ಸಲ ಕೆಳಗಿನರ್ಧ ಗೋಡೆಯನ್ನು ಇಟ್ಟಿಗೆಯಿಂದ ಮೇಲೆ ಮಣ್ಣಿನಿಂದ ಕಟ್ಟುತ್ತಿದ್ದರು. ಕಟ್ಟಡಗಳ ಮಾಡುಗಳಿಗೆ ಅಗಲವಾದ ಹಂಚನ್ನು ಹೊದಿಸುತ್ತಿದ್ದರು. ತಾಮ್ರ ಕಬ್ಬಿಣಗಳ ಬಳಕೆ ಹೆಚ್ಚಾಗಿದ್ದರೂ ಕಪ್ಪು ಬಣ್ಣದ ಗಡಿಗೆಗಳು ಬಳಕೆಯಲ್ಲಿದ್ದವು. ಬಟ್ಟಲುಗಳ ಹೊರಮೈಯಲ್ಲಿ ಬಿಳಿಬಣ್ಣದ ರೇಖಾಚಿತ್ರಗಳಿರುತ್ತಿದ್ದವು. ಈ ರೀತಿಯ ಅಲಂಕರಣ ಈ ಕಾಲದ ಮಣ್ಣಿನ ಪಾತ್ರೆಗಳ ವೈಶಿಷ್ಟ್ಯ ರೋಂ ಮುಂತಾದ ಹೊರದೇಶಗಳ ವ್ಯಾಪಾರ ಸಂಪರ್ಕದಿಂದ ಬಂದ ರೌಲೆಟೆಡ್ ತಂತ್ರವನ್ನು ಉಪಯೋಗಿಸಿ ಅಗಲವಾದ ತಟ್ಟೆಗಳ ಒಳಭಾಗದ ತಳದಲ್ಲಿ ರೇಖೆಗಳುಳ್ಳ ಉಂಗುರದಂಥ ಚಿತ್ರಗಳನ್ನು ಮೂಡಿಸುವ ಕುಶಲತೆ ಗೊತ್ತಿತ್ತು.

ಈ ಕಾಲದಲ್ಲಿ ವ್ಯಾಪಾರ ಕುಶಲತೆ ಚೆನ್ನಾಗಿ ಬೆಳೆದಿತ್ತು. ನಾಣ್ಯಗಳ ಬಳಕೆ ಚಲಾವಣೆಯಲ್ಲಿದ್ದವು. ಅಚ್ಚೊತ್ತಿ ತಯಾರಿಸುತ್ತಿದ್ದ ನಾಣ್ಯಗಳ ಮೇಲೆ ಸೂರ್ಯ, ಬೆಟ್ಟ, ನಂದಿ, ಚೈತ್ರವೃಕ್ಷ ಮುಂತಾದ ಚಿಹ್ನೆಗಳಿರುತ್ತಿದ್ದವು. ಅಶೋಕನ ಶಾಸನಗಳಿಂದ ಕ್ರಿ.ಪೂ. ೩ನೇ ಶತಮಾನಕ್ಕಾಗಲೇ ಬ್ರಾಹ್ಮಿಲಿಪಿಯ ಬಳಕೆ ಚೆನ್ನಾಗಿದ್ದು ಪ್ರಾಕೃತ ಭಾಷೆ, ಜನರ ಆಡುವ ಭಾಷೆಯಾಗಿತ್ತೆಂದು ತಿಳಿದುಬರುತ್ತದೆ. ಕೇಶಾಲಂಕಾರ, ಆಭರಣ, ಉಡಿಗೆ ತೊಡಿಗೆಗಳ ವಿನ್ಯಾಸದಲ್ಲಿ ಕುಶಲತೆಯನ್ನು ಹೊಂದಿದ್ದರು. ಮಸ್ಕಿ ಮತ್ತು ವಡಗಾಂ ಮಾಧವಪುರದ ಉತ್ಖನನದಲ್ಲಿ ಪದ್ಮಾಸನದಲ್ಲಿ ಕುಳಿತು ಮತ್ತು ನಿಂತ ಬುದ್ಧನ ಪ್ರತಿಮೆಗಳು ದೊರೆತಿದ್ದು ಉತ್ತಮ ನಿದರ್ಶನ.

ಉತ್ತಮ ಜಾತಿಯ ಕಲ್ಲುಗಳು, ದಂತದ, ಚಿನ್ನದ, ಸುಟ್ಟ ಮಣ್ಣಿನ ಸರಮಾಡಿ ಹಾಕಿಕೊಳ್ಳುವ ಮಣಿಗಳು ಪದಕಗಳ ವೈವಿಧ್ಯತೆ ಹೆಚ್ಚಿತು. ತಲೆತಲಾಂತರದಿಂದ ಬಂದ ಧಾರ್ಮಿಕ ಕಟ್ಟುಪಾಡುಗಳ ಜೊತೆಗೆ ಹಿಂದು, ಬೌದ್ಧ ಧರ್ಮಗಳು ಪ್ರಚಾರದಲ್ಲಿದ್ದವು. ಹೀಗೆ ಈ ಸಂಸ್ಕೃತಿಯ ಜನರು ಧರ್ಮ, ಕಲೆ, ವಾಣಿಜ್ಯ ರಾಜಕೀಯ ಆಡಳಿತ ಕ್ರಮದಲ್ಲಿ ವಿಶೇಷ ಪ್ರಗತಿ ಉಳ್ಳವರಾಗಿದ್ದು ನಾಗರಿಕತೆಯ ಹಂತದಲ್ಲಿದ್ದರು.

**ಅಡಿಟಿಪ್ಪಣಿಗಳು**

೧. ಚಂದ್ರಶೇಖರ್ ಎಚ್., ೧೯೯೩, *ರಾಯಚೂರು ನೈಸರ್ಗಿಕ ಸಂಪನ್ಮೂಲಗಳು ಮತ್ತು ಅವುಗಳ ಬಳಕೆಯ ಸ್ಥಿತಿಗತಿ ಮತ್ತು ಮುನ್ನೋಟ*, ತಿರುಳ್ಗನ್ನಡ, ಪು.೩೭.

೨. ಅಭಿಶಂಕರ್ ಕೆ.(ಸಂ.), ೧೯೭೦, ರಾಯಚೂರು ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ಪು.೧೧.

೩. ಅದೇ, ೧೯೭೨, ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ಪು.೧೩.

೪. ಬಂಗಾರಿ ವಿ.ಎಸ್., ೧೯೭೬, ಕೊಪ್ಪಳ ನಾಡಿನ ಭೌಗೋಳಿಕ ದರ್ಶನ, ಗವಿದೀಪ್ತಿ, ಪು.೨೩೫-೨೪೧.

೫. ಪ್ರಕಾಶ ಹುಣಸಗಿ., ೧೯೮೭, ಗಂಗಾವತಿ ತಾಲೂಕು ದರ್ಶನ.

೬. ರಾಧಾಕೃಷ್ಣ, ಬಿ.ಪಿ., ೧೯೮೫, ಕರ್ನಾಟಕದ ಖನಿಜ ಸಂಪುತ್ತು, ಅವಲೋಕನ, ಪು.೨೮-೩೦.

೭. ಗವಿಶೆಟ್ಟಿ ಕೆ., ೧೯೯೫, ಕರ್ನಾಟಕದ ಖನಿಜ ಸಂಪತ್ತು

೮. ಚಂದ್ರಶೇಖರ್ ಎಚ್., ಅದೇ,

೯. ಅರಣ್ಯ ಇಲಾಖೆಯ ಮಾಹಿತಿ

೧೦. ಬಂಗಾರಿ ವಿ.ಎಸ್., ಅದೇ

೧೧. ಅಭಿಶಂಕರ್ ಕೆ.(ಸಂ.), ೧೯೭೨, ಅದೇ

೧೨. ಅದೇ, ೧೯೭೦, ಅದೇ, ಪು.೩೦

೧೩. ಅಲ್ಚಿನ್ ಎಫ್.ಆರ್., ೧೯೬೦, ಪಿಕ್ಲಿಹಾಳ ಎಕ್ಸ್‌ಕವೇಷನ್ಸ್, ಎಪಿಜಿಎ. ಸಿರಿ ನಂ.೧.

೧೪. ಫೂಟ್ ಆರ್.ಬಿ., ಪೂರ್ವೋಕ್ತ

೧೫. ಪದ್ದಯ್ಯ ಕೆ., ೧೯೮೨, ದಿ ಅಶ್ಯೂಲಿಯನ್ ಕಲ್ಚರ್ ಆಫ್ ದಿ ಹುಣಸಗಿ ವ್ಯಾಲಿ, ಪು.೩೩.

೧೬. ಅನ್ಸಾರಿ ಝುಡ್ ಡಿ., ೧೯೭೦, ಪೆಬಲ್ ಟೂಲ್ಸ್ ಫ್ರಾಮ್ ನಿಟ್ಟೂರು ಮೈಸೂರು ಸ್ಟೇಟ್ ಐ.ಎ. ಸಂ.೪.

೧೭. ಅಭಿಶಂಕರ್ ಕೆ.(ಸಂ), ಅದೇ.

೧೮. ಮನ್, ಎಲ್.(ಸಂ), ೧೯೩೪, ಜರ್ನಲ್ ಆಫ್ ದಿ ಹೈದರಾಬಾದ್ ಜಿಯಾಲಾಜಿಕಲ್ ಸರ್ವೇ ಸಂ.೨, ಭಾಗ ೧.

------"-----, ೧೯೩೫, ಪ್ರಿ ಹಿಸ್ಟಾರಿಕ್ ಆ್ಯಂಡ್ ಪ್ರೋಟೊ ಹಿಸ್ಟಾರಿಕ್ ಫೈಂಡ್ಸ್ ಆಫ್ ದಿ ರಾಯಚೂರ್ ದೋ ಆಬ್ ಆ್ಯಂಡ್ ಶೋರಾಪುರ ಡಿಸ್ಟ್ರಿಕ್ಟ್ ಆಫ್ ಎಚ್‌ಇಎಚ್ ದಿ ನಿಜಾಮ್ಸ್ ಡೊಮಿನಿಯನ್ಸ್, ಮ್ಯಾನ್ ಇನ್ ಇಂಡಿಯಾ ಸಂ.೧೫, ಪು.೨೨೫-೩೦.

------"-----೧೯೫೫, *ರಾಕ್ ಪೆಯಿಂಟಿಂಗ್ಸ್ ಇನ್ ರಾಯಚೂರ್, ಹೈದರಾಬಾದ್,* ಮ್ಯಾನ, ನಂ.೧೧೪, ಪು.೯೮.

೧೯. ಗೋರ್ಡ್‌ನ್ ಡಿ.ಎಚ್., ೧೯೫೧, *ಆರ್ಕಿಯಾಲಜಿಕಲ್ ಸೈಟ್ಸ್ ಇನ್ ದಿ ಬೆಣ್‌ಕಲ್ ಫಾರೆಸ್ಟ್ ಹೈದರಾಬಾದ್,* ಮ್ಯಾನ, ನಂ. ೧೧೪, ಪು.೯೭೯.

------"----- ಮತ್ತು ಅಲ್ಚಿನ್ ಎಫ್.ಆರ್., ೧೯೫೫, ರಾಕ್ ಪೆಯಿಂಟಿಂಗ್ಸ್ ಆ್ಯಂಡ್ ಎನ್‌ಗ್ರೇವಿಂಗ್ಸ್ ಇನ್ ರಾಯಚೂರ್ ಹೈದರಾಬಾದ್, ಮ್ಯಾನ್, ನಂ.೧೧೪, ಪು.೯೭.

೨೦. ಅಲ್ಚಿನ್ ಎಫ್.ಆರ್., ೧೯೫೫, ಆರ್ಕಿಯಾಲಜಿಕಲ್ ಸ್ಟೇಟ್ಸ್ ಇನ್ ಬೆಣ್‌ಕಲ್ ಫಾರೆಸ್ಟ್ ಹೈದರಾಬಾದ್, ಮ್ಯಾನ್, ಸಂ.೫೫, ಪು.೯೭-೯.

೨೧. ಸುಂದರ ಎ., ಐ.ಎ.ಆರ್., ೧೯೬೧-೬೨ ಮತ್ತು ೧೯೭೯-೮೦.

------"-----., ೧೯೭೩, ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳು ಕ.ಭಾ ೬೧, ಪು.೬೪-೭೫.

------``-----., ೧೯೭೪, ಫರ್ದರ್ ನೋಟಿಸಸ್ ಆಫ್ ರಾಕ್ ಫೆಯಿಂಟಿಂಗ್ಸ್ ಇನ್ ಬೆಣ್ಕಲ್ ರಾಯಚೂರ್ ಡಿಸ್ಟ್ರಿಕ್ಟ್, ಜೆ.ಐ.ಎಚ್.ಸಂ.೫.

೨೨. ಥಾಪರ್, ಬಿ.ಕೆ., ೧೯೫೭, ಮಸ್ಕಿ, ಏ ಕ್ಯಾಲ್ಕೋಲಿಥಿತ್ ಸೈಟ್ ಆಫ್ ಸದರ್ನ್ ಡೆಕ್ಕನ್ ಎ.ಐ.ನಂ.೧೩.

೨೩. ಅಲ್ಚಿನ್ ಎಫ್.ಆರ್., ೧೯೬೦, ಅದೇ,

೨೪. ನಾಗರಾಜರಾವ್ ಎಂ.ಎಸ್. ಮತ್ತು ಮಲ್ಹೋತ್ರ ಕೆ.ಸಿ., ೧೯೬೫, ದಿ ಸ್ಟೋನ್ ಏಜ್ ಹಿಲ್‌ಡ್ವೆಲ್ಲರ್ಸ್ ಆಫ್ ತೆಕ್ಕಲಕೋಟ

೨೫. ಅನ್ಸಾರಿ ಝುಡಿ.ಡಿ., ಮತ್ತು ನಾಗರಾಜರಾವ್ ಎಂ.ಎಸ್., ೧೯೬೯, ಎಕ್ಸಕಾವೇಷನ್ಸ್ ಎಟ್ ಸಂಗನಕಲ್ಲು (೧೯೬೪-೬೫).

೨೬. ತುಂಗ ಮತ್ತು ಭದ್ರಾ ನದಿಯ ಬಯಲು ಪ್ರದೇಶದಲ್ಲಿ ೧೯೮೦ರದಶಕದ ಸುರುವಿನಲ್ಲಿ ಕೆ.ಪಿ.ಪೂಣಚ್ಚ ಇವರು ಮೇಲೆ ಹೇಳಿದ ಉಂಡೆ ಕಲ್ಲಿನ ಮಚ್ಚುಗತ್ತಿ ಮೊದಲಾದ ಉಪಕರಣಗಳುಳ್ಳ ನೆಲೆಗಳನ್ನು ಗಮನಾರ್ಹ ಸಂಖ್ಯೆಯಲ್ಲಿ ಶೋಧಿಸಿ ಅಧ್ಯಯನ ಮಾಡಿದ್ದಾರೆ. ಇದಕ್ಕೂ ಹಿಂದೆ ಕೃಷ್ಣಾನದಿ ದಂಡೆಯ ಮೇಲಿರುವ ಆಂಧ್ರಪ್ರದೇಶದ ನಾಗಾರ್ಜುನಕೊಂಡ ಮತ್ತು ಗಿಡ್ಡನೂರುಗಳಲ್ಲಿಯೂ ಇಂಥ ನೆಲೆಗಳಿವೆ. ಪೂಣಚ್ಚರವರು ಇಂಥ ನೆಲೆಗಳನ್ನು ಅಧ್ಯಯನ ಮಾಡಿ ಈ ಉಪಕರಣಗಳು ಬಹುಮಟ್ಟಿಗೆ ಕೈಕೊಡಲಿ ಸೀಳುಗತ್ತಿ ಸಂಪ್ರದಾಯದ ಪೂರ್ವಭಾವಿ ಹಂತದ್ದಾಗಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.

೨೭. ಜೋಶಿ ಆರ್.ವಿ., ೧೯೫೫, ಪಿಲೆಸ್ಟೋಸೀನ್ ಸ್ಟಡೀಸ್ ಇನ್ ದಿ ಮಲಪ್ರಭಾ ಬೇಸಿನ್, ಪು.೫೧.

೨೮. ಪಪ್ಪು ಆರ್.ಎಸ್., ೧೯೭೪, ಪಿಲೆಸ್ಟೋಸೀನ್ ಸ್ಟಡೀಸ್ ಇನ್ ದಿ ಅಪ್ಪರ್ ಕೃಷ್ಣಾ ಬೇಸಿನ್

೨೯. ಅನ್ಸಾರಿ ಝುಡ್ ಡಿ., ಮತ್ತು ನಾಗರಾಜ್‌ರಾವ್ ಎಂ.ಎಸ್., ಅದೇ

೩೦. ಪದ್ದಯ್ಯ ಕೆ., ೧೯೮೨, ಅದೇ

೩೧. ಫೂಟ್ ಆರ್.ಬಿ., ಅದೇ

೩೨. ಸುಬ್ಬರಾವ್ ಬಿ., ೧೯೪೮, ಸ್ಟೋನ್ ಏಜ್ ಕಲ್ಚರ್ ಆಫ್ ಬಳ್ಳಾರಿ

೩೩. ಫೂಟ್, ಆರ್.ಬಿ., ಅದೇ,

೩೪. ಥಾಪರ್, ಬಿ.ಕೆ., ಅದೇ

೩೫. ಸುಂದರ ಎ., ೧೯೭೩, ಅದೇ

೩೬. ಅದೇ, ೧೯೭೬, *ಕೊಪ್ಪಳ: ಇತಿಹಾಸ ಪೂರ್ವಕಾಲ,* ಗವಿದೀಪ್ತಿ, ಪು.೯೭-೧೧೬.

೩೭. ಸುಂದರ ಅ., ೧೯೭೩,

ಅಧ್ಯಾಯ ೪

# ಕೊಪ್ಪಳ - ಹಂಪಿ ಪ್ರದೇಶದ ಕಲಾ ನೆಲೆಗಳು

೪.೧. ಗವಿ/ಕಲ್ಲಾಸರೆ ವರ್ಣಚಿತ್ರಗಳು

೪.೨. ಬಯಲು ಬಂಡೆ ಕೊರೆದ/ಕುಟ್ಟಿದ ಚಿತ್ರಗಳು

ಕೊಪ್ಪಳ-ಹಂಪಿ ಪ್ರದೇಶವು(ವಿಶೇಷವಾಗಿ ಕೊಪ್ಪಳ, ಗಂಗಾವತಿ ಮತ್ತು ಹೊಸಪೇಟೆ ತಾ.) ಬೆಟ್ಟ ಸಾಲುಗಳಿಂದ ತುಂಬಿದೆ. ತುಂಗಭದ್ರಾ ನದಿ ತೀರದ ಈ ಪ್ರದೇಶದಲ್ಲಿ ಆಸಾಮಾನ್ಯ ಕಂದು ಇಲ್ಲವೇ ಬೂದುವರ್ಣದ ಗ್ರಾನೈಟ್ ಶಿಲೆಯ ಬೆಟ್ಟಗಳಿವೆ. ವಿಪರೀತ ಉಷ್ಣ-ಶೀತಗಳ ವೈಪರೀತ್ಯದಿಂದ ಸಾಮಾನ್ಯವಾಗಿ ಈ ಶಿಲೆಯ ದೊಡ್ಡ ಬಂಡೆಗಳು ತಾನಾಗಿಯೇ ಸೀಳಿ ಹೋಗುವುದರಿಂದ ಮತ್ತು ಸವಕಳಿಯಿಂದ ಗವಿ ಕಲ್ಲಾಸರೆಗಳು ಉಂಟಾಗಿವೆ. ಇಂತಹ ಕಲ್ಲಾಸರೆ, ಗವಿಗಳಲ್ಲಿ ವಿರಳವಾಗಿ ವರ್ಣಚಿತ್ರಗಳಿವೆ. ಈ ಪ್ರದೇಶದಲ್ಲಿ ಶಿಲಾ-ತಾಮ್ರಯುಗ (ಕ್ರಿ.ಪೂ.ಸು.೨೦೦೦-೨೦೦) ಕಬ್ಬಿಣಯುಗದ ಬೃಹತ್ ಶಿಲಾಯುಗ(ಕ್ರಿ.ಪೂ.ಸು.೧,೨೦೦ ೨೦೦) ಮತ್ತು ಇತಿಹಾಸ ಆರಂಭ ಕಾಲ (ಕ್ರಿ.ಪೂ.ಸು.೨೦೦ ಕ್ರಿ.ಶ.೨ನೇ ಶತಮಾನ)ದ ಸಾಂಸ್ಕೃತಿಕ ಅವಶೇಷಗಳುಳ್ಳ ನೆಲೆಗಳು, ಕೊಪ್ಪಳ, ಹಿರೇಬೆಣಕಲ್ ಮೊದಲಾದೆಡೆ ಬೆಳಕಿಗೆ ಬಂದಿದ್ದವು.[೧] ಆದರೆ ಇಲ್ಲಿಯ ಬೆಟ್ಟ ಗುಡ್ಡಗಳಲ್ಲಿಯ ಪ್ರಾಗೆತಿಹಾಸ ಕಾಲದ ಕಲಾಸಂಪತ್ತು ಅಜ್ಞಾತವಾಗಿ ಉಳಿದಿತ್ತು. ೧೯೩೫ರಲ್ಲಿ ಆಂಗ್ಲ ಭೂಗರ್ಭ ತಜ್ಞರಾದ ಲಿಯೊನಾರ್ಡ್ ಮನ್‌ರವರು ಪ್ರಥಮವಾಗಿ ಹಿರೇಬೆಣಕಲ್‌ನಲ್ಲಿ ಮೂರು ಚಿತ್ರಿತ ಗವಿಗಳನ್ನು ಬೆಳಕಿಗೆ ತಂದರು.[೨] ನಂತರ ಪುರಾತತ್ವಜ್ಞ ಡಾ.ಅ.ಸುಂದರರವರು ಮತ್ತಷ್ಟು ಚಿತ್ರಿತ ಗವಿಗಳನ್ನು ಶೋಧಿಸಿದರು.[೩] ಹಾಗೂ ಪ್ರೊ.ಲಕ್ಷ್ಮಣ್ ತೆಲಗಾವಿಯವರು, ಆರ್.ಎಂ. ಷಡಕ್ಷರಯ್ಯ,[೪] ಬಿ.ಸಿ.ಪಾಟೀಲ್,[೫] ಶಂಭುಲಿಂಗಪ್ಪನವರು[೬] ಕೆಲವು ನೆಲೆಗಳನ್ನು ಶೋಧಿಸಿದ್ದಾರೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕೈಗೊಂಡ ಅನ್ವೇಷಣೆಯಲ್ಲಿ ಮತ್ತೇ ೭೨ ಗವಿ ಕಲ್ಲಾಸರೆ/ಬಂಡೆ ಚಿತ್ರ ನೆಲೆಗಳು ಶೋಧವಾದವು. ಅವುಗಳಲ್ಲಿ ಗವಿವರ್ಣ ಚಿತ್ರಗಳು ಅಧಿಕವಾಗಿದ್ದರೆ, ಬಯಲು ಬಂಡೆ ಚಿತ್ರಗಳು ವಿರಳವಾಗಿವೆ. ಮತ್ತು ವರ್ಣಚಿತ್ರಗಳಲ್ಲಿ ಕೆಲವು ಇತಿಹಾಸ ಕಾಲದ ನೆಲೆಗಳು ಕಂಡುಬಂದಿದ್ದು, ಚಿತ್ರಗಳ ಪರಂಪರೆಯ ಅಧ್ಯಯನ ಹಿನ್ನೆಲೆಯಲ್ಲಿ ಅವನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪೂರ್ವಶೋಧಿತ ಮತ್ತು ಪ್ರಸ್ತುತ ಶೋಧಿತ ಗವಿ ಕಲ್ಲಾಸರೆಗಳ ವಿವರ ಈ ಕೆಳಗಿನಂತಿವೆ.

# ಗವಿ.ಕಲ್ಲಾಸರೆ ವರ್ಣ ಚಿತ್ರ ನೆಲೆಗಳು

| ಕ್ರ.ಸಂ. | ಸ್ಥಳ | ಪೂರ್ವ ಶೋಧಿತ | ಪ್ರಸ್ತುತ ಶೋಧಿತ | ಒಟ್ಟು |
|---|---|---|---|---|
| | **ಕೊಪ್ಪಳ ತಾಲೂಕು** | | | |
| ೦೧. | ಕೊಪ್ಪಳ | ೦೯ | - | ೦೯ |
| ೦೨ | ಬಿಳೇಭಾವಿ | ೦೨ | - | ೦೨ |
| ೦೩ | ಇಂದರಗಿ | - | ೦೧ | ೦೧ |
| ೦೪ | ನಾರಾಯಣಪೇಟೆ | ೦೧ | ೦೩ | ೦೪ |
| ೦೫ | ಬಂಡಿಹರ್ಲಾಪುರ | ೦೧ | - | ೦೧ |
| ೦೬ | ಹೊಸಬಂಡಿ ಹರ್ಲಾಪುರ | - | ೦೫ | ೦೫ |
| | **ಗಂಗಾವತಿ ತಾಲೂಕು** | | | |
| ೦೭ | ಹಿರೇಬೆಣಕಲ್ | ೧೨ | ೦೫ | ೧೭ |
| ೦೮ | ಚಿಕ್ಕಬೆಣಕಲ್ | - | ೦೩ | ೦೩ |
| ೦೯ | ಎಮ್ಮಿಗುಡ್ಡ | - | ೦೨ | ೦೨ |
| ೧೦ | ಗಡ್ಡಿ | - | ೦೩ | ೦೩ |
| ೧೧ | ಆಗೋಲಿ | - | ೦೭ | ೦೭ |
| ೧೨ | ಹಂಪಸದುರ್ಗ | - | ೦೨ | ೦೨ |
| ೧೩ | ಬೊಮ್ಮಸಾಗರ ತಾಂಡ | - | ೦೧ | ೦೧ |
| ೧೪ | ರಾಮದುರ್ಗ | - | ೦೧ | ೦೧ |
| ೧೫ | ಆನೆಗುಂದಿ | ೦೫ | ೦೪ | ೦೯ |
| ೧೬ | ಆಂಜನಹಳ್ಳಿ | ೦೨ | - | ೦೨ |
| ೧೭ | ಮಲ್ಲಾಪುರ | ೦೩ | ೧೧ | ೧೪ |
| ೧೮ | ತೆಂಬಾ | - | ೦೫ | ೦೫ |
| ೧೯ | ತಿರುಮಲಾಪುರ | ೦೧ | - | ೦೧ |
| ೨೦ | ಚಿಕ್ಕರಾಮಂಪುರ | ೦೬ | - | ೦೬ |
| ೨೧ | ರಾಂಪುರ | - | ೦೩ | ೦೩ |
| ೨೨ | ಸಂಗಾಪುರ | - | ೧೦ | ೧೦ |
| ೨೩ | ಗೂಗಿಬಂಡೆ | - | ೦೧ | ೦೧ |
| | **ಹೊಸಪೇಟೆ ತಾಲೂಕು** | | | |
| ೨೪ | ಹಂಪಿ | ೦೭ | - | ೦೭ |
| ೨೫ | ಕಮಲಾಪುರ | ೦೧ | - | ೦೧ |
| ೨೬ | ವೆಂಕಟಾಪುರ | ೦೨ | - | ೦೨ |
| ೨೭ | ನಾಗೇನಹಳ್ಳಿ | - | ೦೧ | ೦೧ |
| | ಒಟ್ಟು | ೫೨ | ೬೮ | ೧೨೦ |

## ಬಯಲು ಬಂಡೆ ಚಿತ್ರ ನೆಲೆಗಳು

| ಕ್ರ.ಸಂ. | ಸ್ಥಳ | ಪೂರ್ವ ಶೋಧಿತ | ಪ್ರಸ್ತುತ ಶೋಧಿತ | ಒಟ್ಟು |
|---|---|---|---|---|
| ೦೧ | ಮಲ್ಲಾಪುರ(ಗಂಗಾವತಿ ತಾ.) | - | ೦೨ | ೦೨ |
| ೦೨ | ಬಸಾಪಟ್ಟಣ(ಗಂಗಾವತಿ ತಾ.) | - | ೦೧ | ೦೧ |
| ೦೩ | ಸಿದ್ದಿಕೇರಿ(ಗಂಗಾವತಿ ತಾ.) | - | ೦೧ | ೦೧ |
| ೦೪ | ಕಮಲಾಪುರ ಹೊಸಪೇಟೆ ತಾ. (*ಕಮಲಾಪುರದ ವಿದ್ಯಾರಣ್ಯ ಹಾಗೂ ೧ನೇ ವರ್ಣಚಿತ್ರ ನೆಲೆಯಲ್ಲಿ ಕೊರೆದ ಎತ್ತಿನ ಚಿತ್ರಗಳಿವೆ.*) | ೦೨ | - | ೦೨ |
| | ಒಟ್ಟು | ೦೨ | ೦೪ | ೦೬ |

**ಇತರ ಚಿತ್ರಗಳು :** ಆಗೋಲಿಯಲ್ಲಿ ಕೊರೆದ ಪಾದದ ಚಿತ್ರಗಳು, ಕುಟ್ಟಿದ ಎತ್ತಿನ ಜೋಡಿ, ತಿರುಗುಳಿಗಳು, ಹಿರೇಬೆನಕಲ್‌ನಲ್ಲಿಕೊರೆದ ವೃತ್ತ, ಚಿಕ್ಕಕುಳಿಗಳ ಆಕೃತಿ ಮತ್ತು ನಾಗೇನಹಳ್ಳಿಯಲ್ಲಿ ಚಿಕ್ಕ ಕುಳಿಗಳ ಆಕೃತಿಗಳಿವೆ. ಇವೆಲ್ಲ ವರ್ಣಚಿತ್ರ ನೆಲೆಗಳಿಗೆ ತೀರ ಸನಿಹದಲ್ಲಿವೆ.

## ಕೊಪ್ಪಳ ತಾಲೂಕು

### ಕೊಪ್ಪಳ

ಕೊಪ್ಪಳ ನಗರದ ಪೂರ್ವಬದಿಯ ಗವಿಮಠದ ಗುಡ್ಡ ಮತ್ತು ಪಶ್ಚಿಮ ಬದಿಯ ಮಳೆಮಲ್ಲೇಶ್ವರ ಬೆಟ್ಟದಲ್ಲಿ ಒಟ್ಟು ಒಂಭತ್ತು ಕಲ್ಲಾಸರೆಗಳಿವೆ.

### ಕಲ್ಲಾಸರೆ : ಒಂದು

ಗವಿಮಠದಿಂದ ಆಗ್ನೇಯ ದಿಕ್ಕಿಗೆ ಈ ವಿಶಾಲವಾದ ಗವಿ ಇದೆ. ಇಲ್ಲಿ ಕೆಂಪುವರ್ಣದ ೧೩ ಪ್ರಾಣಿಗಳ ರೇಖಾಚಿತ್ರಗಳಿವೆ. ಅವು ಐದು ಜಿಂಕೆಗಳು, ಉಳಿದಂತೆ ಒಂದೊಂದು ಕೆಚ್ಚಲುಳ್ಳ ಆಕಳು, ಟಗರು, ಕಾಡುಕೋಣ, ಕುದುರೆ(?), ಎತ್ತು, ಮೊಲ, ತೋಳ(ಮುಖ ಸ್ಪಷ್ಟವಿಲ್ಲ) ಹಾಗೂ ಇನ್ನೊಂದು ಓಡುತ್ತಿರುವ ಗುರುತಿಸಲಾಗದ ಪ್ರಾಣಿಯ ಚಿತ್ರಗಳಾಗಿವೆ. ಈ ಎಲ್ಲ ಪ್ರಾಣಿಗಳಲ್ಲಿ ಕಾಡುಕೋಣ ಮತ್ತುಮೊಲಗಳು ಛಾಯಾರೂಪದವು. ಉಳಿದವು. ಬಾಹ್ಯ ರೇಖಾ ರೂಪದವು. ಕೆಲವು ಜಿಂಕೆ, ಆಕಳು, ಎತ್ತಿನ ಮೂತಿಯನ್ನು ಕೆಂಪು ವರ್ಣದಿಂದ ತುಂಬಲಾಗಿದೆ.

ಪ್ರಾಣಿಗಳ ರೇಖಾ ವಿನ್ಯಾಸ ಗಮನಾರ್ಹವಾಗಿದೆ. ಸರಳವಾದ ರೇಖೆಗಳಲ್ಲೇ ಚಿತ್ರಗಳು ಸ್ಪಷ್ಟವಾಗಿ ಮೂಡಿಸಲಾಗಿದೆ. ಕೋಡು, ಬಾಲಗಳು ಅತ್ಯಂತ ಸಹಜವಾಗಿವೆ. ಜಿಂಕೆಗಳ ಕೋಡುಗಳಲ್ಲಿ

ಕವಲುಗಳಿವೆ. ಟಗರಿನ ಕೋಡು ಬಾಹ್ಯವಾಗಿ ವೃತ್ತಾಕಾರದಲ್ಲಿ ಸುತ್ತಿದೆ. ಅದೇ ರೀತಿ ಆಕಳು, ಎತ್ತು, ಕೋಣದ ಕೋಡುಗಳು ಸಹಜವಾಗಿವೆ. ಬಾಲಗಳು ಆಯಾ ಪ್ರಾಣಿಗಳಿಗೆ ತಕ್ಕಂತಿವೆ. ತೋಳ ಮುಖವನ್ನು ನೆಲದೆಡೆಗೆ ಬಾಗಿಸಿ ಪ್ರಾಯಶಃ ಏನನ್ನೊ ತಿನ್ನುತ್ತಿರುವಂತಿದೆ. ಆ ಸಂದರ್ಭಕ್ಕನುಗುಣವಾಗಿ ಬಾಲ ಪುಷ್ಪದಿಂದ ಸ್ವಲ್ಪ ಅಂತರದಲ್ಲಿ ಕೆಳಬಾಗಿ ಅತ್ಯಂತ ಸಹಜವಾಗಿದೆ. ಆಕಳಿಗೆ ಕೆಚ್ಚಲು ಇದೆ ದೊಡ್ಡ ಇಣಿಯನ್ನು ತೋರಿಸಿರುವುದು ಕುತೂಹಲದಾಯಕವಾಗಿದೆ. ಕುದುರೆಯ ಮುಖ ಪಕ್ಷಿಯಂತೆ ಮೂತಿ ಚೂಪಾಗಿ ಅಸಹಜವೆನಿಸುತ್ತಿದೆ.

## ಕಲ್ಲಾಸರೆ : ಎರಡು

ಗವಿಮಠದ ಅಶೋಕನ ಶಾಸನವಿರುವಬಂಡೆಯಿಂದ ಈಶಾನ್ಯಕ್ಕೆ ಅನತಿ ದೂರದಲ್ಲಿ ಈ ಕಲ್ಲಾಸರೆ ಇದೆ. ಅರೆವೃತ್ತಾಕಾರದಲ್ಲಿ ಬಾಗಿರುವ ಬಂಡೆಯ ಒಡಲಲ್ಲಿ ಕಲ್ಲಾಸರೆ ಉಂಟಾಗಿದೆ. ಇದರ ಛಾವಣಿಯಲ್ಲಿ ಕೆಂಪುವರ್ಣದ ಬಾಹ್ಯರೇಖಾ ರೂಪದ ಚಿತ್ರಗಳಿವೆ. ಇಲ್ಲಿ ಒಟ್ಟು ಒಬ್ಬ ಮನುಷ್ಯ ಮತ್ತು ೪ ಪ್ರಾಣಿಗಳು ಸಹಿತ ಐದು ಚಿತ್ರಗಳಿವೆ. ಇಡಿ ದೃಶ್ಯ ಬೇಟೆಗಾರನೊಬ್ಬ ಜಿಂಕೆಗಳ ಬೇಟೆಯಲ್ಲಿ ತೊಡಗಿರುವ ಸನ್ನಿವೇಶದ್ದಾಗಿದೆ. ಒಂದು ಜಿಂಕೆ ಮತ್ತೊಂದು ಪ್ರಾಯಶಃ ದನವನ್ನು ಬೇಟೆಯಾಡಿ ಕೊಂದು ಹಾಕಿ ಮತ್ತೊಂದಕ್ಕೆ(ಚಿತ್ರದಲ್ಲಿ) ಬಿಲ್ಲಿನಿಂದ ಬಾಣವನ್ನು ಪ್ರಯೋಗಿಸಿದಂತಿದೆ. ಸತ್ತ ಎರಡೂ ಪ್ರಾಣಿಗಳು ಅವನ ಮುಂಬದಿಯಲ್ಲಿ ಬಿದ್ದಿವೆ. ಕೆಳಗೆ ಜಿಂಕೆ ಹಾಗೂ ಮತ್ತೊಂದು ಪ್ರಾಣಿಯ ಚಿಕ್ಕ ಆಕೃತಿ ಇದೆ. ಅದು ಛಾಯಾರೂಪದಿದ್ದು ಮೂತಿ ಚೂಪಾಗಿದೆ. ಬಹುಶಃ ನಂತರದ ರಚನೆಯಾಗಿರಬೇಕೆಂದು ತೋರುತ್ತದೆ. ಇಲ್ಲಿ ಬಾಣದ ಚಿತ್ರ ಗಮನ ಸೆಳೆಯುತ್ತದೆ.

## ಕಲ್ಲಾಸರೆ : ಮೂರು

ಗವಿಮಠದ ಬೆಟ್ಟದ ಮೇಲೆ ಈ ಕಲ್ಲಾಸರೆ ಇದೆ ಇಲ್ಲಿ ಕೂಡ ಮೊದಲೆರಡರ ಕಲ್ಲಾಸರೆಗಳಂತೆ ಚಿತ್ರಗಳು ರೇಖಾ ರೂಪದಲ್ಲಿವೆ.ಇಲ್ಲಿ ೪ ಎತ್ತುಗಳ ಮತ್ತುಒಂದು ಗುರುತಿಸಲಾಗದ ಪ್ರಾಣಿಯ ಚಿತ್ರಗಳಿವೆ. ಮೂರು ಎತ್ತುಗಳು ನಿಂತು ಉಳಿದ ಒಂದು ಎತ್ತು ಹಾಗೂ ಇನ್ನೊಂದು ಪ್ರಾಣಿ ಮಲಗಿದ ಭಂಗಿಯಲ್ಲಿವೆ. ನಿಂತಿರುವ ಎರಡೂ ಎತ್ತುಗಳು ಒಂದರ ಹಿಂದೆ ಒಂದು ವಿರುದ್ಧ ಮುಖದಲ್ಲಿವೆ. ರಚನಾ(ರೇಖಾ) ವಿನ್ಯಾಸವನ್ನು ಗಮನಿಸಿದಾಗ ಇವು ಮುದಿ ಎತ್ತುಗಳಂತೆ ತೋರುತ್ತವೆ. ದೇಹ ಬಡಕಲಾಗಿ ಎಲಬುಗಳು ಎದ್ದು ಕಾಣುತ್ತವೆ.

## ಕಲ್ಲಾಸರೆ : ನಾಲ್ಕು

ಗವಿಮಠದ ಗುಡ್ಡದಲ್ಲಿ ಅಶೋಕನ ಶಾಸನ ಸ್ಥಳದಿಂದ ಈಶಾನ್ಯಕ್ಕೆ ಸನಿಹದಲ್ಲಿ ಈ ಕಲ್ಲಾಸರೆ ಇದೆ. ಇದೊಂದು ಬೃಹತ್ ಗುಂಡು. ಒಡೆದು ಸೀಳಿದೆ. ಈ ಸೀಳಿದ ಒಡಲಲ್ಲಿ ಕೆಂಪು ವರ್ಣದ ಹುಲಿಯ ಚಿತ್ರವನ್ನು ಬಿಡಿಸಲಾಗಿದೆ. ಹುಲಿಯ ಮೇಲಕ್ಕೆ ನೆಗೆದ ಭಂಗಿಯಲ್ಲಿದೆ(ಮುಖ ನಾಶವಾಗಿದೆ). ಮೈ ಮೇಲಿನ ಪಟ್ಟೆಗಳನ್ನು ವಕ್ರ ರೇಖೆಗಳ ಮೂಲಕ ತೋರಿಸಲಾಗಿದೆ. ಕಾಲುಗಳು ಬೆರಳುಗಳಲ್ಲಿ ಉದ್ದವಾದ ಉಗುರು(ಪಂಜು)ಗಳಿವೆ. ಬಾಲ ಕೂಡ ನೀಳವಾಗಿ ಉದ್ದವಿದೆ.

## ಕಲ್ಲಾಸರೆ : ಐದು

ಅಶೋಕ ಶಾಸನ ಸ್ಥಳಕ್ಕೆ ಸಮೀಪದ ಕಿರುಬೆಟ್ಟದಲ್ಲಿ ಈ ಕಲ್ಲಾಸರೆ ಇದೆ. ಛಾವಣಿಯಲ್ಲಿ ಹಳದಿ ಮಿಶ್ರಿತ ತಿಳಿ ಬಿಳಿವರ್ಣದಲ್ಲಿ ಸ್ತ್ರೀಪುರುಷ ಜೋಡಿಯ ಚಿತ್ರವಿದೆ.

## ಕಲ್ಲಾಸರೆ : ಆರು

ಕಲ್ಲಾಸರೆ ಐದಕ್ಕೆ ಸಮೀಪದಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಕೆಂಪು ವರ್ಣದ ಸೂರ್ಯನ ರೀತಿಯ ಚಿತ್ರ ಮನುಷ್ಯ, ಪ್ರಾಣಿ ಮತ್ತು ಸಮೂಹ ಕುಣಿತದ ಮನುಷ್ಯರ ಚಿತ್ರಗಳಿವೆ.

## ಕಲ್ಲಾಸರೆ : ಏಳು

ಮಳೆಮಲ್ಲೇಶ್ವರ ಬೆಟ್ಟದ ಪಾಂಡವರ ವಠಾರ(ವಟ್ಲು) ಎಂಬಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಕೆಂಪು ವರ್ಣದಲ್ಲಿ ಮನುಷ್ಯರ ಸಮೂಹ ಕುಣಿತದ ಚಿತ್ರವಿದೆ. ಮನುಷ್ಯ ಚಿತ್ರಗಳು ಛಾಯಾರೂಪದವು. ನಾಲ್ಕೈದು ಸ್ಪಷ್ಟ ಇವೆ. ಪರಸ್ಪರ ಕೈ-ಕೈ ಹಿಡಿದು ಸಾಲಾಗಿ ನೃತ್ಯ ಭಂಗಿಯಲ್ಲಿವೆ. ಸೊಂಟಕ್ಕೆ ಉಡುಪನ್ನು ಧರಿಸಿದ ರೀತಿಯ ರಚನೆ ಗಮನಾರ್ಹ.

## ಕಲ್ಲಾಸರೆ : ಎಂಟು

ಮಳೆಮಲ್ಲೇಶ್ವರ ದೇವಾಲಯದ ಮೇಲ್ಭಾಗದ ಬಯಲಿನ ಈಶಾನ್ಯ ಅಂಚಿನಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಬಿಳಿವರ್ಣದ ಕಾದಾಡುತ್ತಿರುವ ಗೂಳಿಗಳ ಚಿತ್ರಗಳಿವೆ. ಗೂಳಿಗಳು ಕೋಡು, ಇಣಿ, ಬಾಲ, ಕಾಲು, ಶಿಶ್ನ ಹೊಂದಿವೆ. ದೇಹ ದಷ್ಟಪುಷ್ಟವಾಗಿ ಬಲಿಷ್ಟವಾಗಿದೆ. ಹೋರಾಟದ ಆವೇಶ ಮತ್ತು ಭಂಗಿ ಚಿತ್ರದಲ್ಲಿ ಸಶಕ್ತವಾಗಿ ವ್ಯಕ್ತವಾಗಿದೆ. ಗೂಳಿಗಳ ಕಾದಾಟಕ್ಕೆ ಹೆದರಿ ಒಬ್ಬ ಮನುಷ್ಯ ಓಡುತ್ತಿರುವಂತೆ ಚಿತ್ರವಿದೆ.

### ಕಲ್ಲಾಸರೆ : ಒಂಭತ್ತು

ಮಳೆಮಲ್ಲೇಶ್ವರ ದೇವಾಲಯದ ಮೇಲ್ಭಾಗದಲ್ಲಿ ಹರಿವಿನ ಬಯಲು ಪಶ್ಚಿಮ ಅಂಚಿನಲ್ಲಿ ಈ ಕಲ್ಲಾಸರೆ ಇದೆ. ಇದು ಬೃಹದಾಕಾರದ ಸೀಳಿದ ಬಂಡೆ. ಸೀಳು ಭಾಗದಲ್ಲಿ ಕೆಂಪು ಬಿಳಿವರ್ಣದ ಒಂದು ಚಿತ್ರವಿದೆ. ಉದ್ದ ರೇಖೆಗೆ ಮೇಲೆ ಕೆಳಗೆ ತ್ರಿಕೋನಾಕಾರದ ಭಾಗಗಳಿವೆ. ಇದನ್ನು ಪಾಟೀಲರು ಸ್ತ್ರೀ ಪ್ರತಿನಿಧಿಸುವ ಚಿತ್ರವೆಂದು ಅಭಿಪ್ರಾಯಪಟ್ಟಿದ್ದಾರೆ.

### ನಾರಾಯಣಪೇಟೆ

ಗಂಗಾವತಿ ಶಿವಪುರ ರಸ್ತೆಯಲ್ಲಿ ಬಸಾಪುರದಿಂದ ದಕ್ಷಿಣಕ್ಕೆ ಸು.೩ ಕಿ.ಮೀ.ದೂರದಲ್ಲಿ ತುಂಗಭದ್ರಾ ನದಿ ಎಡದಂಡೆಯ ಮೇಲಿದೆ. ಇದು ಒಟ್ಟು ನಾಲ್ಕು ಕಲ್ಲಾಸರೆಗಳನ್ನು ಹೊಂದಿದೆ.

### ಕಲ್ಲಾಸರೆ : ಒಂದು

ಇದು ಮುಂದೆ ಬಾಗಿದ ಒಂದು ಎತ್ತರವಾದ ಬಹುದೊಡ್ಡ ಬಂಡೆಯ ಕಲ್ಲಾಸರೆ. ಅದರ ಸಮತಳವಾದ ಒಳಮೈಮೇಲೆ ಸುಮಾರು ೪ ಮೀ. ಎತ್ತರದ ಮನುಷ್ಯಾಕೃತಿಯನ್ನು ಬಿಡಿಸಲಾಗಿದೆ. ತಲೆಯ ಭಾಗವು ನೆಲದಿಂದ ಸುಮಾರು ೩ ೧/೨ ಮೀ. ಎತ್ತರದಲ್ಲಿದೆ.

**ಮನುಷ್ಯ ಚಿತ್ರ :** ದೊಡ್ಡ ತೊಡೆಗಳನ್ನು ಆಗಲಿಸಿಸೊಟ್ಟ ಮಾಡಿ ನಿಂತ ಭಂಗಿಯಲ್ಲಿವೆ. ಸಣ್ಣ ತಲೆ, ತಲೆಯ ಮೇಲಿನ ಸಮನಾಂತರ ಸಣ್ಣ ಸಣ್ಣ ಗೆರೆಗಳು ಪ್ರಾಯಶಃ ಕೂದಲನ್ನು ಸೂಚಿಸುತ್ತವೆ. ತಲೆಯ ಬಲಕ್ಕೆ ಸ್ವಲ್ಪ ವಾಲಿದೆ. ಎಡಗೈ ಇಲ್ಲ. ಬಹುಶಃ ಅಳಿಸಿ ಹೋಗಿರಬೇಕು. ಮುಂಡದ ಉದ್ದಗಲಗಳು ಪ್ರಮಾಣಬದ್ಧವಾಗಿವೆ. ದಷ್ಟಪುಷ್ಟವಾದ ತೊಡೆಗಳಿವೆ. ಮೈ- ತೊಡೆಗಳ ಮೇಲೆ ರೇಖಾಚಿತ್ರಗಳಿವೆ.

**ಸ್ತ್ರೀ ಚಿತ್ರ :** ಪುರುಷ ಚಿತ್ರದ ಎದುರಿನಲ್ಲಿ ಅಡ್ಡವಾಗಿರುವ ಬೃಹತ್ ಬಂಡೆಯ ಮೇಲೆ ಎರಡು ಕೈಗಳನ್ನು ಬಾಚಿ, ಕಾಲುಗಳನ್ನು ಆಗಲಿಸಿ ಕುಳಿತ ಒಂದು ವ್ಯಕ್ತಿಯ ಸಣ್ಣ ಚಿತ್ರವಿದೆ. ಉದ್ದಕೂದಲು ಆ ಕಡೆ ಈಕಡೆ ಸೆಟೆದು ನಿಂತಿವೆ. ಹೊಟ್ಟೆ ಸ್ವಲ್ಪ ಉಬ್ಬಿದೆ. ಸೊಂಟದ ಕೆಳಭಾಗ ತ್ರಿಕೋನಾಕೃತಿಯಂತೆ ಕೆಳಚಾಚಿದೆ. ಇದು ಛಾಯಾರೂಪದ ಚಿತ್ರ. ತಲೆಯ ಕೂದಲು ಹಳ್ಳಿಗರ ಜಡೆಯಂತೆ ಸೆಟೆದಿರುವುದು, ಗರ್ಭಿಣಿಯಂತೆ ಉಬ್ಬು ಹೊಟ್ಟೆ, ಪ್ರಾಯಶಃ ಯೋನಿಯನ್ನು ಸೂಚಿಸುವ ಸೊಂಟದ ಕೆಳಗಿನ ತ್ರಿಕೋನಾಕಾರ ಈ ಚಿತ್ರವು ಸ್ತ್ರೀ ಎಂದು ಸೂಚಿಸುತ್ತದೆ.

### ಕಲ್ಲಾಸರೆ : ಎರಡು

ಗ್ರಾಮದಿಂದ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿರುವ ಬೆಟ್ಟದಲ್ಲಿ ಕಲ್ಲು ಗಣಿಗಾರಿಕೆಯ ಸ್ಥಳಕ್ಕೆ ಎದುರಿಗೆ ಪೂರ್ವಾಭಿಮುಖವಾಗಿ ಒಂದು ದೊಡ್ಡ ಕಲ್ಲಾಸರೆ ಇದೆ. ಅದರಲ್ಲಿ ಒಂದು ಸಣ್ಣ ಮನುಷ್ಯಾಕೃತಿ ೨೮ ಸೆಂ.ಮೀ. ಎತ್ತರ, ೨೭ ಸೆಂ.ಮೀ.ಅಗಲ ಇದೆ. ಕೆಂಪು ವರ್ಣದ ರೇಖಾಕೃತಿ ಇದು. ದ್ವಿ ರೇಖೆಯಲ್ಲಿ ವಿಶಿಷ್ಟವಾಗಿ ರಚಿಸಲಾಗಿದೆ. ಬಲಗೈಯನ್ನು ಮೇಲಕ್ಕೆ ಎಡಗೈಯನ್ನು ಭುಜದ ಸಮಾನಾಂತರದಲ್ಲಿ ಚಾಚಿದಂತೆ ಕಾಣುತ್ತದೆ. ಕೈಗಳು ಪೂರ್ತಿ ಇಲ್ಲ. ಕಾಲುಗಳೂ ಕೂಡ ಕೈಗಳಿಗೆ ತಕ್ಕಂತೆ ಕ್ರಿಯಾ ಭಂಗಿಯಲ್ಲಿವೆ. ನಾಲ್ಕು ಜೋಡಿ ಬಾಹ್ಯ ರೇಖೆಗಳಲ್ಲಿಯೇ ಮನುಷ್ಯ ಚಿತ್ರವನ್ನು ಬಿಡಿಸಲಾಗಿದೆ.

### ಕಲ್ಲಾಸರೆ : ಮೂರು

ಮೊದಲ ಕಲ್ಲಾಸರೆ ಮೇಲ್ಭಾಗದ ಬೆಟ್ಟದಲ್ಲಿ ಇದು ಇದೆ. ಕೆಳಗಿನ ಆಸರೆ ಬಂಡೆಯ ಮುಖಭಾಗದಲ್ಲಿ ನಾಲ್ಕು ಚಿತ್ರಗಳಿವೆ. ಅವು ಕ್ರಮವಾಗಿ ಸೂರ್ಯ ಮತ್ತು ಮೂರು ಮನುಷ್ಯಾಕೃತಿಗಳು.

**ಸೂರ್ಯ(೧೭ ಸೆಂ.ಮೀ.ವ್ಯಾಸ):** ವೃತ್ತಾಕಾರದ ವ್ಯಾಸ ರೇಖೆಯಲ್ಲಿದೆ. ಅದಕ್ಕೆ ಸುತ್ತಲೂ ಕಿರಣಗಳ ರೀತಿ ರೇಖೆಯನ್ನು ಎಳೆಯಲಾಗಿದೆ.

**ಮನುಷ್ಯಾಕೃತಿ ಒಂದು :** ಎಡಗೈಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದು ಅಸ್ಪಷ್ಟ ಮನುಷ್ಯಾಕೃತಿಯಲ್ಲಿದೆ. ತಲೆ (೧೮ x ೩೩) ಅರೆ ವೃತ್ತಾಕಾರದಲ್ಲಿದೆ. ಸೊಂಟದಿಂದ ಕೆಳಭಾಗ ಕಿರಿದಾಗುತ್ತ ಕೆಳಗಿಳಿದಿದೆ. ಬಲಗೈ ಸರಳ ರೇಖೆಯಂತಿದೆ. ಎಡಗೈ ದ್ವಿ ರೇಖೆಯಲ್ಲಿದ್ದು ಮೇಲಕ್ಕೆತ್ತಿದೆ. ಹಸ್ತದಲ್ಲಿ ಮೂರು ಬೆರಳುಗಳಿದ್ದು, ಕಪ್ಪೆಯ ಪಾದದಂತಿದೆ.

**ಮನುಷ್ಯಾಕೃತಿ ಎರಡು (೩೦ ಸೆಂ.ಮೀ. x ೪೪ ಸೆಂ.ಮೀ):** ಎರಡೂ ಕಾಲುಗಳನ್ನು ಅಗಲಿಸಿ ಎರಡು ಕೈಗಳನ್ನು ಮೇಲಕ್ಕೆತ್ತಿ ನಿಂತಿರುವ ಮನುಷ್ಯ ಚಿತ್ರವಿದು. ಮೊದಲ ನೋಟಕ್ಕೆ ಕಪ್ಪೆಯಂತೆ ತೋರುತ್ತದೆ. ಕೈಕಾಲುಗಳು ಕೂಡ ಅದೇ ರೀತಿ ಇರುವುದು ವಿಶೇಷ. ಹಸ್ತದಲ್ಲಿ ಕಪ್ಪೆಯ ಕಾಲಿನಂತೆ ೩ ರೇಖೆಗಳಿವೆ. ತಲೆಯ ಮೇಲೆ ಮುಖವಾಡ ಧರಿಸಿದಂತಿದೆ. ಎರಡೂ ಬದಿಗೆ ಬಾಗಿರುವ ರೇಖೆಗಳಿವೆ. ಮುಖದಲ್ಲಿ ಎರಡು ಅಡ್ಡ ರೇಖೆಗಳು ಮೈಮೇಲೆ ಒಂದು ಅಡ್ಡರೇಖೆ ಇದೆ. ಇದು ಮನುಷ್ಯಾಕೃತಿ ಎನ್ನುವ ಬಗ್ಗೆ ಗೊಂದಲ ಉಂಟು ಮಾಡುತ್ತದೆ. ಇದು ಕೋಡಿನ ಮುಖವಾಡ ಧರಿಸಿದ ಮನುಷ್ಯನ ಚಿತ್ರವಾಗಿರಬಹುದು.

**ಮನುಷ್ಯಾಕೃತಿ ಮೂರು**(೦.೩೦ ಮೀ ಅಗಲ x ೦.೩೭ ಮೀ.): ಎತ್ತರ ನಿಂತಿರುವ ಮನುಷ್ಯನ ಚಿತ್ರವಿದು. ರಚನೆ ವಿಶಿಷ್ಟವಾಗಿದೆ. ದೇಹ ರಾಕೇಟ್ ಮಾದರಿಯಲ್ಲಿದೆ. ಗುಂಡಾದ ತಲೆ ಎರಡೂ ಕೈಗಳನ್ನು ಬದಿಗೆ ಚಾಚಿದ್ದು ಹಸ್ತದಲ್ಲಿ ಮೂರು ಬೆರಳುಗಳಿವೆ. ಅವು ಕಪ್ಪೆ ಅಥವಾ ಪಕ್ಷಿಯ ಕಾಲುಗಳಂತಿವೆ. ಇದು ರೇಖಾ ಚಿತ್ರ.

### ಕಲ್ಲಾಸರೆ : ನಾಲ್ಕು

ಎರಡನೆಯ ಕಲ್ಲಾಸರೆಯ ಎಡ ಬದಿಗೆ ಈ ಕಲ್ಲಾಸರೆ ಇದೆ. ಇದರಲ್ಲಿ ಮಲಗಿಕೊಂಡೇ ಚಿತ್ರಗಳನ್ನು ಬಿಡಿಸಲು ಸಾಧ್ಯ. ಛಾವಣಿಯಲ್ಲಿ ೧೭ ಕಡವೆಗಳ ಕೆಂಪು ವರ್ಣದ ಚಿತ್ರಗಳಿವೆ. ಇವುಗಳಲ್ಲಿ ತೀರ ಕೆಳಗಿರುವ ಒಂದು ಮಾತ್ರ ಛಾಯಾರೂಪದಲ್ಲಿದ್ದರೆ, ಉಳಿದವು ರೇಖಾಚಿತ್ರ ಮಾದರಿಯವು. ಛಾಯಾರೂಪದಲ್ಲಿದ್ದು ಉಳಿದವೆಲ್ಲವುಗಳಿಗಿಂತ ಸ್ವಲ್ಪ ದೊಡ್ಡ ಆಳತೆಯಲ್ಲಿದೆ. ಮತ್ತು ಉಳಿದೆಲ್ಲವೂ ಬಹುಮಟ್ಟಿಗೆ ಸಮಾನ ಅಳತೆಯಲ್ಲಿವೆ. ಇವೆಲ್ಲವುಗಳಲ್ಲಿ ಮಧ್ಯದ ಒಂದು ಕಡವೆ ಮಾತ್ರ ದಕ್ಷಿಣಾಭಿಮುಖವಾಗಿದ್ದರೆ,ಉಳಿದವೆಲ್ಲಾ ಉತ್ತರಾಭಿಮುಖವಾಗಿವೆ.

ಕಡವೆಗಳು ಪಾರ್ಶ್ವಬದಿಯ ಚಿತ್ರಗಳು ಕೋಡು ದೊಡ್ಡದಾಗಿ ರೋಮನ್ ಲಿಪಿಯ U ಅಥವಾ V ಆಕಾರದಲ್ಲಿದೆ. ಬಾಲ ದೊಡ್ಡದಿದ್ದುಕೊನೆಯಲ್ಲಿ ಮೂರು ರೇಖೆಗಳಲ್ಲಿ ಕುಚ್ಚು ತೋರಿಸಲಾಗಿದೆ. ದೇಹದಲ್ಲಿ ಕುತ್ತಿಗೆಯಿಂದ ಪುಷ್ಠದವರೆಗೆ ಅಡ್ಡವಾಗಿ ಗೆರೆಯನ್ನು ಹಾಕಲಾಗಿದೆ. ಎರಡಕ್ಕೆ ಶಿಶ್ನವನ್ನು ತೋರಿಸಲಾಗಿದೆ. ಹಾಗಾಗಿ ಅವು ಗಂಡು ಉಳಿದವು ಹೆಣ್ಣು ಕಡವೆಗಳೆಂದು ಹೇಳಬಹುದು.

## ಹೊಸಬಂಡಿ ಹರ್ಲಾಪುರ

ಇದು ಗಂಗಾವತಿ ಶಿವಪುರ ರಸ್ತೆಯಲ್ಲಿ ಜಲವಿದ್ಯುತ್‌ಘಟಕದ ಹತ್ತಿರ ಈ ಗ್ರಾಮವಿದೆ. ಇಲ್ಲಿ ಒಟ್ಟು ಐದು ಚಿತ್ರಿತ ಕಲ್ಲಾಸರೆಗಳು ಕಂಡುಬಂದಿವೆ.

### ಕಲ್ಲಾಸರೆ : ಒಂದು

ಜಲವಿದ್ಯುತ್ ಘಟಕದ ಎಡಬದಿಗೆ ಹೊಂದಿಕೊಂಡಿರುವ ಬೆಟ್ಟವಿದ್ದು ಅದರ ಮುಭಾಗದಲ್ಲಿ ಬೃಹತ್ ಗಾತ್ರದ ಬಂಡೆಯೊಂದಿದೆ. ಅದರ ಪಶ್ಚಿಮ ಭಾಗದಲ್ಲಿ ಕಲ್ಲಾಸರೆ ಇದ್ದು ಅದರ ಛಾವಣಿಯಲ್ಲಿ ಒಂದು ಎತ್ತು ಎರಡು ಮನುಷ್ಯ ಚಿತ್ರಗಳು ಕೆಮ್ಮಣ್ಣು ಬಣ್ಣದಲ್ಲಿ ಚಿತ್ರಿಸಲ್ಪಟ್ಟಿವೆ. ಛಾವಣಿಯ ಮುಂಭಾಗದಲ್ಲಿ ಎತ್ತು ಮತ್ತು ಕಡ್ಡಿ ರೂಪದ ಮನುಷ್ಯಚಿತ್ರಗಳಿವೆ. ಎತ್ತು (೪೯ x ೫೧ ಮೀ.) ಪಾರ್ಶ್ವ ಬದಿಯ ಛಾಯಾರೂಪದಲ್ಲಿದೆ ಮುಖ ನೀಳವಾಗಿದೆ. ಇಣಿ ಬಾಲಗಳಿವೆ. ಕೋಡುಗಳು ಮೂರು ಡೊಂಕಿನಲ್ಲಿ ಒಳಬಾಗಿವೆ(ವಜ್ರಾಕೃತಿಯಲ್ಲಿ).

ಎತ್ತಿನ ಚಿತ್ರದ ಮುಂದೆ ರೇಖೆಯ ಚಿಕ್ಕ ಮನುಷ್ಯನ ಚಿತ್ರ(೧೬ ಸೆಂ.ಮೀ. ಎತ್ತರ)ವಿದೆ. ಕಡ್ಡಿರೂಪದಲ್ಲಿ ಕೈಕಾಲು ದೇಹಗಳಿವೆ. ತಲೆ ಪೂರ್ಣವರ್ಣದಲ್ಲಿ ದುಂಡಾಗಿದೆ. ತಲೆಯ ಸುತ್ತಲೂ ವಕ್ರವಾಗಿರುವ ಸಣ್ಣ ಸಣ್ಣ ರೇಖೆಗಳಿವೆ. ಅವು ಕೂದಲನ್ನು ನಿರ್ದೇಶಿಸುತ್ತಿರಬೇಕು. ಬಲಗೈಯಲ್ಲಿ ಚಿಕ್ಕ ಕೋಲು ಇದೆ. ಇದರಿಂದ ಇದು ದನಗಾಯಿಯ ಚಿತ್ರವಾಗಿರಬೇಕೆಂದು ಗ್ರಹಿಸಬಹುದು.

ಛಾವಣಿಯ ಇಳಿಜಾರಿನಲ್ಲಿ ದೊಡ್ಡ ಅಳತೆಯ ಮನುಷ್ಯಾಕೃತಿ(೬೦ ಸೆಂ.ಮೀ ಅಗಲ, ೧.೫೦ ಮೀ. ಎತ್ತರ)ಯ ಚಿತ್ರವಿದೆ. ಪಾರ್ಶ್ವ ಭಂಗಿಯದು. ಹಾಗಾಗಿ ಒಂದು ಕೈ ಕಾಲು ಮಾತ್ರ ಗೋಚರಿಸುವ ಪಾರ್ಶ್ವಬದಿಯ ರಚನೆಯಾಗಿದೆ. ಕುರ್ಚಿಯ ಮೇಲೆ ಕುಳಿತ ಭಂಗಿಯಂತೆ ಸೊಂಟದಿಂದ ಕಾಲು ಮುಂದಕ್ಕಿದ್ದು ಮಂಡಿಯಿಂದ ಕೆಳಬಾಗಿವೆ. ಕೈ ಭುಜದಿಂದ ಸಮಾನಾಂತರದಲ್ಲಿ ಮುಂದಕ್ಕೆ ಬಾಚಿ ಮೊಣಕೈಯಿಂದ ಮೇಲಕ್ಕೆತ್ತರಿಸಿದೆ. ಹಸ್ತಗಳು ನಮಸ್ಕಾರ ಮುದ್ರೆಯಲ್ಲಿವೆ. ದೇಹದ ದೊಡ್ಡ ಪ್ರಮಾಣಕ್ಕೆ ತಕ್ಕಂತೆ ತಲೆಯ ಗಾತ್ರವಿರದೆ ಚಿಕ್ಕದೆನಿಸುತ್ತದೆ. ಇಡೀ ಚಿತ್ರ ಪೂರ್ಣ ಛಾಯಾರೂಪದಲ್ಲಿದ್ದು ತೆಳು ಕೆಂಪು ವರ್ಣದಲ್ಲಿದೆ. ಈ ಮನುಷ್ಯ ಚಿತ್ರ ಹಂಪಿಯ ಭರಮದೇವರ ಗುಂಡಿನ ಮತ್ತು ಮಲ್ಲಾಪುರದ ಖಾನ್‌ಸಾಬ್ ಗವಿಯ ಮನುಷ್ಯ ಚಿತ್ರಗಳಂತಿದೆ. ಆದರೆ ಅವುಗಳಲ್ಲಿ ದೇಹದ ಮೇಲೆ ಅನೇಕ ರೇಖೆಗಳಿವೆ. ಇದರಲ್ಲಿ ಇಲ್ಲ.

**ಕಲ್ಲಾಸರೆ : ಎರಡು**

ಮೊದಲನೆ ಕಲ್ಲಾಸರೆಬಂಡೆಯಲ್ಲಿಯೇ ದಕ್ಷಿಣಮುಖದಲ್ಲಿ ಕೆಮ್ಮಣ್ಣು ವರ್ಣದ ಜಿಂಕೆಗಳು, ಗೂಳಿಗಳು ಮತ್ತು ನಾಯಿಗಳ ಚಿತ್ರಗಳಿವೆ. ಗುಂಡಿನ ಮೇಲೆ ಅದರಿಂದ ಮುಂಚಾಚಿದ ಬಂಡೆಯಿದ್ದು ಅದರ ಆಸರೆಯಲ್ಲಿ ಬಂಡೆಯ ಗೋಡೆಗೆ ಚಿತ್ರಗಳನ್ನು ಬರೆಯಲಾಗಿದೆ(ಈಗ ಮೇಲಿನ ಬಂಡೆಯನ್ನು ಸ್ಫೋಟಿಸಿವುದರಿಂದ ಚಿತ್ರಗಳು ನೇರಮಳೆ, ಗಾಳಿ, ಬಿಸಿಲಿಗೆ ಸಿಲುಕಿ ಬಹುಮಟ್ಟಿಗೆ ಮಾಸಿ ಹೋಗಿವೆ). ಇಲ್ಲಿ ಅಪೂರ್ಣ ರಚನೆಯ ಕೋಣ ಅನೇಕ ಜಿಂಕೆಗಳ ಮತ್ತು ಒಂದು ನಾಯಿಯ ಚಿತ್ರವಿದೆ.

ಕೋಣದ ಮೇಲ್ಭಾಗದಲ್ಲಿ ಕೇವಲ ಮುಖಭಾಗದ ಚಿತ್ರವಿದೆ. ಪಾರ್ಶ್ವದ ರೇಖಾಚಿತ್ರವಿದ್ದು. ಸುಮಾರು ೨ ಮೀ.ಉದ್ದ, ೧ ಮೀ ಎತ್ತರವಿದೆ. ದಪ್ಪವಾದ ಎರಡು ಕೋಡುಗಳು ಅರೆ ವೃತ್ತಾಕಾರದಲ್ಲಿ ಒಳಬಾಗಿವೆ. ಕಿವಿ ಮುಖ ಕತ್ತಿನ ಭಾಗಗಳಷ್ಟೇ ಇದ್ದು ಕೋಣನ ಬಲಿಷ್ಠತೆಯನ್ನು ಸೂಚಿಸುತ್ತದೆ. ಮುಖದಲ್ಲಿ ಕಣ್ಣಿನ ರಚನೆ ಇಲ್ಲ. ಗೂಳಿಯ ಕತ್ತಿನ ಮುಂದೆ ನಾಯಿಯ ಚಿಕ್ಕ ಚಿತ್ರವಿದೆ. ಗೂಳಿಯೆಡೆಗೆ ಮುಖಮಾಡಿ ನಿಂತಿದ್ದು ಛಾಯಾರೂಪದಲ್ಲಿದೆ. ಮುಖ ದೇಹ ಕಾಲು ಬಾಲ(ಮೇಲಕ್ಕೆತ್ತಿದೆ) ಸಹಜವಾಗಿ ಮೂಡಿ ಬಂದಿದೆ.

ಸಾರಂಗಗಳು ನಾಯಿಯ ಹಿಂದೆ ಒಂದು ಮತ್ತು ಕೆಳಭಾಗದಲ್ಲಿ ಸಾಲಾಗಿರುವ ಐದು ಮತ್ತು ಅವುಗಳ ಕೆಳಗೆ ಮೂರು ಒಟ್ಟು ಒಂಭತ್ತು ಸಾರಂಗಗಳ ಸುಂದರ ಚಿತ್ರಗಳು ಕಂಡುಬರುತ್ತವೆ. ನೀಳ ಮತ್ತು ಉದ್ದವಾದ ದೇಹ ರೋಮನ್‌ನ U ಅಕ್ಷರದಂತಿರುವ ಕವಲುಗಳುಳ್ಳ ದೊಡ್ಡ ಕೋಡುಗಳು ಮೇಲಕ್ಕೆತ್ತರಿಸಿದ ಬಾಲ, ಸಾರಂಗ ಚಿತ್ರಗಳ ಮುಖ್ಯ ಲಕ್ಷಣಗಳು. ಇವು ಪೂರ್ಣ ಕೆಂಪು ವರ್ಣದಲ್ಲಿ ಛಾಯಾರೂಪದಲ್ಲಿವೆ. ಮುಂಗಾಲು ಸ್ವಲ್ಪ ಮುಂದಕ್ಕೆ ಚಾಚಿ ನಿಂತಂತಿದೆ. ಎಲ್ಲವೂ ಹೆಚ್ಚು ಕಡಿಮೆ ಒಂದೇ ಶೈಲಿ ಮತ್ತು ಪ್ರಮಾಣದಲ್ಲಿವೆ.

### ಕಲ್ಲಾಸರೆ : ಮೂರು

ಗ್ರಾಮದಿಂದ ಉತ್ತರಕ್ಕಿರುವ ಬೆಟ್ಟ ಪ್ರದೇಶದಲ್ಲಿ ಸು ೧ ೧/೨ ಕಿ.ಮೀ ಅಂತರದಲ್ಲಿ ಡುಬಾಯಿ ಕ್ವಾರಿ ಗುಡ್ಡವಿದೆ. ಅದರಲ್ಲಿ ಉತ್ತರ ದಕ್ಷಿಣಕ್ಕೆ ಹಬ್ಬಿರುವ ಬೆಟ್ಟ ಶ್ರೇಣಿಯೊಂದಿದ್ದು ಅದರ ಮಧ್ಯ ಭಾಗದಲ್ಲಿ ಪಶ್ಚಿಮಾಭಿಮುಖವಾಗಿರುವ ಬಹು ವಿಶಾಲವಾದ ಕಲ್ಲಾಸರೆಯೊಂದಿಗೆ ಅದರ ಛಾವಣಿಯಲ್ಲಿ ಒಂದು ದೊಡ್ಡ ಅಳತೆಯ ಹಾಗೂ ಮತ್ತೊಂದು ಚಿಕ್ಕ ಅಳತೆಯ ಕೋಣಗಳ ಚಿತ್ರಗಳಿವೆ.

**ದೊಡ್ಡ ಕೋಣದ ಚಿತ್ರ (೨.೮೦ ಮೀ. ಉದ್ದ ೧.೮೯ ಮೀ ಎತ್ತರ) :** ಇದು ದೊಡ್ಡ ಕಲ್ಲಾಸರೆಗೆ ತಕ್ಕಂತೆ ಬೃಹತ್ ಪ್ರಮಾಣದಲ್ಲಿ ರಚನೆಯಾಗಿರುವ ಕೆಂಪು ವರ್ಣದ ರೇಖಾಚಿತ್ರ. ಅಂದರೆ ಇದು ನೈಜ ಪ್ರಾಣಿಯ ಅಳತೆಯಲ್ಲಿದೆ. ಅರೆ ವೃತ್ತಾಕಾರದಲ್ಲಿ ಒಳಬಾಗಿರುವ ಕೋಡು, ಎರಡು ಕಿವಿ, ಮುಖ, ಬಲಿಷ್ಟ ದೇಹ, ಕಾಲು, ಬಾಲ ಸಹಜವಾಗಿವೆ. ದೇಹ ಬಲಿಷ್ಟವಾಗಿದೆ. ಮುಂದಿನ ಹಾಗೂ ಹಿಂದಿನ ಕಾಲುಗಳ ಒಳ ರೇಖೆಯ ಸಮಕ್ಕೆ ದೇಹದಲ್ಲಿ ಎರಡು ರೇಖೆಗಳಿವೆ. ಬಾಲ ದ್ವಿ ರೇಖೆಯಲ್ಲಿ ದಪ್ಪಳತೆಯಲ್ಲಿದೆ. ಕಾಲುಗಳ ಗೊರಸಿನ ಭಾಗ ಸ್ಪಷ್ಟವಿಲ್ಲ. ಮುಖದಲ್ಲಿ ಕಣ್ಣು ಮೂಗುಗಳನ್ನು ಗುರುತಿಸಿಲ್ಲ. ನಿಂತ ಭಂಗಿಯ ಕೋಣ ತನ್ನ ಅಳತೆ ಮತ್ತು ಶೈಲಿಯಿಂದ ನೈಜತೆಯ ರಚನೆಯಾಗಿದೆ. ಅದರ ಗಾಂಭೀರ್ಯ ಸ್ಪಷ್ಟವಾಗಿ ವ್ಯಕ್ತವಾಗಿದೆ.

**ಚಿಕ್ಕ ಕೋಣದ ಚಿತ್ರ (೦.೪೨ ಮೀ ಉದ್ದ, ೦.೪೧ ಮೀ ಎತ್ತರ) :** ದೊಡ್ಡ ಕೋಣ ಚಿತ್ರಕ್ಕೆ ಸ್ವಲ್ಪ ಹಿಂದೆ ಮೇಲ್ಮುಖವಾಗಿ ಸಣ್ಣ ಅಳತೆಯ ಕೋಣದ ಚಿತ್ರವಿದೆ. ದೇಹದ ರೇಖೆಗಳ ಸರಳ ರೇಖೆಯಂತಿವೆ. ದೊಡ್ಡ ಕೋಣದ ಚಿತ್ರದ ಅನುಕರಣೆ ಮಾಡಿ ಇದನ್ನು ಬರೆಯಲಾಗಿದೆ. ಅದೇ ರೂಪದಲ್ಲಿದ್ದರೂ ಸಹಜತೆ ಇಲ್ಲ. ಇದು ಕೂಡ ಕೆಂಪು ವರ್ಣದ ರೇಖಾ ಚಿತ್ರ.

### ಕಲ್ಲಾಸರೆ : ನಾಲ್ಕು

ಮೂರನೆಯ ಕಲ್ಲಾಸರೆಯ ಬೆಟ್ಟದಲ್ಲಿಯೇ ಅದರಿಂದ ದಕ್ಷಿಣಕ್ಕೆ ಸು. ಅರ್ಧ ಕಿ.ಮೀ ದೂರದಲ್ಲಿ ಬೆಟ್ಟದ ಮೇಲೆ ಈ ಕಲ್ಲಾಸರೆ ಇದೆ. ಅದರ ಆಸರೆ ಕಲ್ಲಿನ ಗೋಡೆಯ ಮೇಲೆ ಕೆಂಪು ವರ್ಣದ ರೇಖಾಕೃತಿಗಳು ಕಂಡುಬರುತ್ತವೆ. ಅವುಗಳಲ್ಲಿ ಒಂದು ಮನುಷ್ಯಾಕೃತಿ ಅರೆ ಸ್ಪಷ್ಟವಿದೆ. ವಿಶೇಷ ರಚನೆಯ ಮನುಷ್ಯ ಚಿತ್ರವಿದು. ಕೈಗಳನ್ನು ಮೇಲಕ್ಕೆತ್ತಿದೆ. ತಲೆ ಚೌಕಾಕಾರದಲ್ಲಿದೆ. ಅದಕ್ಕೊಂದಿಕೊಂಡಂತೆ ಭುಜ ಮತ್ತು ಕೈಗಳನ್ನು ದ್ವಿ ರೇಖೆಯಲ್ಲಿ ಪಟ್ಟಿಯಂತಿವೆ. ದೇಹ ಸೊಂಟದವರೆಗೆ ಮಾತ್ರ ಗೋಚರಿಸುತ್ತಿದ್ದು ಆಯತಾಕಾರದಲ್ಲಿದೆ. ದೇಹದಲ್ಲಿ ಎರಡೂ ಭುಜಗಳಿಂದ ಪರಸ್ಪರ ಹೊಟ್ಟೆಯ ಭಾಗದಲ್ಲಿ ಭೇದಿಸುವಂತೆ ಅಡ್ಡ ಗೆರೆಗಳನ್ನು ಎಳೆಯಲಾಗಿದೆ. ಮನುಷ್ಯ ಚಿತ್ರದ ಮುಂದೆ ಸಮಕಾಲಿನ ಹಸುವಿನ ಚಿತ್ರವಿದೆ.

### ಕಲ್ಲಾಸರೆ : ಐದು

ನಾಲ್ಕನೆಯ ಕಲ್ಲಾಸರೆಯಿಂದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿ ಈ ನೆಲೆ ಇದೆ. ವಾಸ್ತವಿಕವಾಗಿ ಇದೊಂದು ಸ್ವತಂತ್ರವಾಗಿ ನಿಂತಿರುವ ದೊಡ್ಡ ಬಂಡೆ. ವಿಶೇಷವೆಂದರೆ ಅದು ಹಾವಿನ ಹೆಡೆಯಂತಿದ್ದು ಪಶ್ಚಿಮಕ್ಕೆ ಬಾಗಿದೆ. ಅದರ ಒಳ ಭಾಗದ ಆಸರೆ ನುಣುಪಾಗಿದೆ. ಈ ಭಾಗದಲ್ಲಿ ಕೆಂಪು ವರ್ಣದಲ್ಲಿ ರಚಿಸಲಾಗಿರುವ ಅನೇಕ ರೇಖಾಕೃತಿಗಳಿವೆ. ಆದರೆ ಮಳೆಯ ನೀರು ಈ ಮೂಲಕ ಇಳಿಯುವುದರಿಂದ ಚಿತ್ರಗಳು ಮುಸುಕಾಗಿವೆ. ಒಂದು ಪ್ರಾಣಿ ಮತ್ತು ಮನುಷ್ಯ ಚಿತ್ರಗಳು ಅಸ್ಪಷ್ಟವಾಗಿ ಗೋಚರಿಸುತ್ತವೆ. ಪ್ರಾಣಿಯು ಕುದುರೆಯಂತೆ ತೋರುತ್ತಿದ್ದು, ಮೈಮೇಲೆ ರೇಖೆಗಳಿವೆ. ಮುಖಕ್ಕೆ ಲಗಾಮು ಹಾಕಿದಂತೆ ಕೈಯನ್ನು ಮುಂದಕ್ಕೆ ಬಾಚಿದಂತಿರುವ ಮನುಷ್ಯನ ಚಿತ್ರ ಅರೆ ರಚನೆಯಲ್ಲಿವೆ. ಇವುಗಳು ಕೆಂಪು ವರ್ಣದ ರೇಖಾಕೃತಿಗಳು.

## ಇಂದರಗಿ

ಇದು ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಕೊಪ್ಪಳದಿಂದ ಸು.೨೦ ಕಿ.ಮೀ ದೂರದಲ್ಲಿದೆ. ಇದು ಒಂದು ಕಲ್ಲಾಸರೆಯನ್ನು ಹೊಂದಿದೆ.

### ಕಲ್ಲಾಸರೆ : ಒಂದು

ಕಲ್ಲಾಸರೆಯು ಗ್ರಾಮದಿಂದ ಪೂರ್ವಕ್ಕೆ ಸು.೧ ಕಿ.ಮೀ. ದೂರದ ಬಾಗಾರ ಮರಡಿಯಲ್ಲಿದೆ. ಇಲ್ಲಿ ಕೆಂಪು ವರ್ಣದ ಮನುಷ್ಯಚಿತ್ರ ೬೧ ಸೆಂ.ಮೀ.ಎತ್ತರ, ೪೪ ಸೆಂ.ಮೀ.ಅಗಲವಿದೆ ಇದೊಂದು

ವಿಶಿಷ್ಟವಾದ ಮನುಷ್ಯ ಚಿತ್ರವಾಗಿದೆ. ಎರಡೂ ಕೈಗಳನ್ನು ಮೇಲಕ್ಕೆ ಎತ್ತಿ ನಗ್ನವಾಗಿ ನಿಂತಿದೆ. ಚಿತ್ರದ ರಚನೆ ವಿಶೇಷವಾಗಿದೆ. ತಲೆ, ಕೈ, ದೇಹ, ಕಾಲು, ಶಿಶ್ನಗಳು ಈ ಚಿತ್ರದ ಒಟ್ಟು ಭಾಗಗಳು.

ದೇಹ ಮೇಲಿನಿಂದ ಕೆಳಕ್ಕೆ ತ್ರಿಕೋನಾಕಾರದಲ್ಲಿದೆ. ತಲೆಯೂ ಕೂಡ ಅರೆ ತ್ರಿಕೋನಾಕಾರದಲ್ಲಿದೆ. ತಲೆಯ ಭಾಗದಮೇಲಿನ ರೇಖೆ ವಕ್ರವಾಗಿದೆ. ಕೈಗಳನ್ನು ಭುಜದ ಸಮಾನಾಂತರದಲ್ಲಿ ಎರಡು ಬದಿಗೆ ಬಾಚಿ ಮೊಣಕೈಯಿಂದ ಉಳಿದ ಭಾಗ ಮೇಲಕ್ಕೆತ್ತಿವೆ. ಮುಂಗೈ ಭಾಗದಲ್ಲಿ ಮೂರು ಬೆರಳುಗಳಿವೆ. ದೇಹ ತ್ರಿಕೋನಾಕಾರದಲ್ಲಿ ಸೊಂಟದವರೆಗೆ ಸಪೂರವಾಗಿದೆ. ಪುಷ್ಠ ಭಾಗವಿಲ್ಲ, ಬದಲಿಗೆ ಅಲ್ಲೇ ಎರಡೂ ಬದಿಗೆ ಅಗಲಿಸಿದ ಕಾಲುಗಳಿವೆ. ಅವು ಮೊಣಕಾಲದವರೆಗೆ ಮಾತ್ರ ಇರುವಂತೆ ಕಿರುರೂಪದಲ್ಲಿವೆ. ಎರಡೂ ಕಾಲುಗಳ ನಡುವೆ ಸ್ಪಷ್ಟವಾಗಿ ಶಿಶ್ನವಿದೆ. ಗ್ರಾಮದಿಂದ ಉತ್ತರಕ್ಕೆ ಇರುವ ಬೆಟ್ಟದ ಸಾಲಿನಲ್ಲಿ ಕನಕರಾಯನವಾರೆ ಮತ್ತು ಬೋಳುಗುಡ್ಡ ಎಂಬಲ್ಲಿಯ ಕಲ್ಲಾಸರೆಗಳಲ್ಲಿ ಕೆಂಪುವರ್ಣದ ರೇಖಾಚಿತ್ರಗಳಿವೆ. ಮೊದಲನೆಯದರಲ್ಲಿ ಬಾಣದ ಮೊನೆಯನ್ನು ಹೂಲುವ ಚಿತ್ರವಿದೆ(೨೨ ಸೆಂ.ಮೀ x ೨೨ ಸೆಂ.ಮೀ.). ಬೊಳುಗುಡ್ಡದಲ್ಲಿ ಹಲವು ಆಯತಾಕಾರಗಳನ್ನು ಮೂಡಿಸಿ ಎಳೆದ ರೇಖಾ ವಿನ್ಯಾಸವಿದೆ.

## ಬಿಳೇಭಾವಿ

ಇದು ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಬೂದಗುಂಪದಿಂದ ಈಶಾನ್ಯಕ್ಕೆ ಸುಮಾರ ೨ ಕಿ.ಮೀ. ದೂರದಲ್ಲಿದೆ.

### ಕಲ್ಲಾಸರೆ : ಒಂದು

ಗುಡ್ಡದ ಕೆಳಭಾಗದಲ್ಲಿ ಒಂದು ಸ್ವತಂತ್ರ ಗುಂಡೊಂದಿದ್ದು ಅದರ ಕೆಳಭಾಗದಲ್ಲಿ ಪೊಳ್ಳಾಗಿ ಆಸರೆಯುಂಟಾಗಿದೆ. ಆದರೆ ಮೇಲ್ಛಾವಣಿಯಲ್ಲಿ ಪ್ರಮುಖವಾಗಿ ಕೆಂಪುವರ್ಣದ ಮತ್ತು ವಿರಳವಾದ ಬಿಳಿಬಣ್ಣದ ಚಿತ್ರಗಳಿವೆ. ಇಲ್ಲಿಯ ಚಿತ್ರಗಳಲ್ಲಿ ಸೂರ್ಯ, ಕುದುರೆ ಸವಾರ, ಮಂಡಲ, ವೃತ್ತ ಮತ್ತು ಎತ್ತುಗಳು ಪ್ರಮುಖವಾಗಿವೆ. ಒಂದರೊಳಗೊಂದರಂತೆ ಮೂರು ಅಸಮ ವೃತ್ತಗಳನ್ನು ಒಳಗೊಂಡ ಸೂರ್ಯನ ಚಿತ್ರದ ಕೊನೆಯ ಬಾಹ್ಯ ರೇಖೆಗೆ ಸುತ್ತಲೂ ಕಿರಣಗಳಂತೆ ರೇಖೆಗಳನ್ನು ಎಳೆಯಲಾಗಿದೆ. ಕುದುರೆ ಸವಾರನ ಚಿತ್ರದಲ್ಲಿ ಕುದುರೆಯ ಕುತ್ತಿಗೆಯ ಮೇಲೆ ರೋಮಗಳನ್ನು ಬಿಡಿಸಲಾಗಿದೆ. ಮಂಡಲವು ದ್ವಿರೇಖೆಯಾದಾಗಿದೆ. ವೃತ್ತದ ಒಳಗೆ ಚೌಕವು ಇದ್ದು ಅದರ ನಾಲ್ಕು ಮೂಲೆಗಳಿಂದ ರೇಖೆಯನ್ನು ಎಳೆಯಲಾಗಿದೆ. ಹಾಗಾಗಿ ಉಂಟಾದ ನಾಲ್ಕು ಭಾಗಗಳ ಮಧ್ಯದಲ್ಲಿ ಎರಡೆರಡು ಸಮರೇಖೆಗಳನ್ನು ಬಿಡಿಸಲಾಗಿದೆ. ಎತ್ತಿನ ಚಿತ್ರಗಳು ನಾಲ್ಕು ಕಾಲು, ಬಾಲ, ಇಣಿ ಮತ್ತು

ಕೊಡುಗಳನ್ನು ಹೊಂದಿವೆ. ಇವುಗಳಲ್ಲದೇ ಅಲ್ಲಲ್ಲಿ ಇತರ ಕೆಂಪು, ಬಿಳಿವರ್ಣ ಚಿತ್ರಗಳಿದ್ದು ಸ್ಪಷ್ಟವಾಗಿ ಗೋಚರಿಸುವುದಿಲ್ಲ.

### ಕಲ್ಲಾಸರೆ : ಎರಡು

ಈ ಕಲ್ಲಾಸರೆ ಬೆಟ್ಟದ ಮೇಲ್ಭಾಗದಲ್ಲಿದೆ. ಅಲ್ಲಿ ಬೃಹತ್ ಶಿಲಾಯುಗದ ಕೆಲವು ಶಿಲಾಸಮಾಧಿಗಳಿವೆ. ಸಮೀಪದಲ್ಲಿ ಗವಿ ಇದೆ. ಇಲ್ಲಿಯ ಚಿತ್ರಗಳಲ್ಲಿ ಕಾಮಧೇನುವಿನಂತಹ ಒಂದು ಪ್ರಾಣಿ, ಎತ್ತುಗಳ ಮೂರು ಚೌಕಮಂಡಲಗಳ, ಮೂರು ಹೂಗಿಡದ ಚಿತ್ರಗಳು ಪ್ರಮುಖವಾಗಿವೆ. ಬಿಳಿಬಣ್ಣದ ಮನುಷ್ಯನಾಕೃತಿ ಮತ್ತು ಒಂದು ಎತ್ತಿನ ಚಿತ್ರವು ಇದೆ.

ಕಾಮಧೇನುವಿನಂತೆ ತೋರುವ ವಿಚಿತ್ರ ಪ್ರಾಣಿಯದೇಹ ಮತ್ತು ಕತ್ತು ಉದ್ದವಾಗಿದೆ. ನಾಲ್ಕು ಕಾಲುಗಳನ್ನು ಹೊಂದಿದ್ದು ಬಾಲ ಹಿಂದಿನಿಂದ ಮೇಲಕ್ಕೇರಿ ಹೊಟ್ಟೆಯ ಭಾಗದಲ್ಲಿ ಇಳಿದಿದೆ. ಮನುಷ್ಯ ಮುಖ ಕಿವಿಗಳಿವೆ. ಕಣ್ಣು, ಬಾಯಿಗಳು ಸ್ಪಷ್ಟವಿಲ್ಲ. ತಲೆಯ ಮೇಲೆ ಕೋಡುಗಳಿವೆ. ಮೂರು ಎತ್ತಿನ ಚಿತ್ರಗಳ ರಚನೆಯು ವಿಚಿತ್ರವಾಗಿದೆ. ಕೋಡಿನ ಎರಡೂ ರೇಖೆಗಳನ್ನು ಕೂಡಿಸಿರುವುದರಿಂದ ವಿಶೇಷವಾಗಿ ತೋರುತ್ತದೆ. ಇವುಗಳಿಗೆ ಇಣಿಯು ಇವೆ. ಚೌಕಮಂಡಲಗಳಲ್ಲಿ ಸಮಾನಾಂತರದಲ್ಲಿ ಲಂಬ ಅಡ್ಡ ಮೂಲೆ ರೇಖೆಗಳನ್ನು ಎಳೆದು ಹಲವು ಭಾಗಗಳನ್ನಾಗಿಸಲಾಗಿದೆ. ಮೊದಲನೇ ಮಂಡಲದ ಮಧ್ಯದಲ್ಲಿ ವೃತ್ತವು ಮತ್ತು ಎಲ್ಲಾ ರೇಖೆಗಳ ತುದಿ ಭಾಗದಲ್ಲಿ ಅರೆ ವೃತ್ತಗಳಿವೆ. ಎರಡನೇ ಮಂಡಲದ ಮಧ್ಯದಲ್ಲಿ ಹೆಚ್ಚುವರಿ ನಾಲ್ಕು ರೇಖೆಗಳಿದ್ದು ಇನ್ನಷ್ಟು ಭಾಗಗಳುಂಟಾಗಿವೆ. ಇಲ್ಲಿ ಎಲ್ಲಾ ರೇಖೆಗಳು ಮಂಡಲದ ಹೊರ ರೇಖೆಯಿಂದ ಸ್ವಲ್ಪ ಮುಂದಕ್ಕೆ ಇವೆ. ಹೂ ಗಿಡಗಳರಚನೆ ಸರಳವಾಗಿದೆ. ಹೂ ಗುಚ್ಛಗಳಿರುವುದರಿಂದ ಇವು ಹಲವು ಕಾಂಡ ಅವುಗಳ ತುದಿಯಲ್ಲಿ ಹೂಗಳನ್ನು ಹೊಂದಿವೆ. ಬಿಳಿ ಬಣ್ಣದ ಚಿತ್ರಗಳಲ್ಲಿ ಮನುಷ್ಯರ ಎರಡು ರೇಖಾಕೃತಿಗಳಿವೆ. ಒಂದು ಎತ್ತಿನ ಚಿತ್ರವು ಇದೆ.

## ಬಂಡಿ ಹರ್ಲಾಪುರ

### ಕಲ್ಲಾಸರೆ : ಒಂದು

ಗ್ರಾಮದ ಸಮೀಪದಲ್ಲಿಯ ಬೆಟ್ಟದಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಬಿಳಿ ಬಣ್ಣದ ಚಿತ್ರಗಳಿವೆ. ಅವುಗಳಲ್ಲಿ ದೇಹದ ಮೇಲೆ ಅಡ್ಡ ಗೆರೆಗಳಿದ್ದು ಪಟ್ಟೆಗಳನ್ನು ಸೂಚಿಸುತ್ತವೆ. ಜೊತೆಗೆ ಗೂಳಿಗಳು ಕಡ್ಡಿ ರೀತಿಯ ಮನುಷ್ಯ ಚಿತ್ರಗಳು ಮತ್ತು ಆಂಜನೇಯನ ಒಂದು ಚಿತ್ರವಿದೆ. ಇವೆಲ್ಲಾ ಇತಿಹಾಸ ಮತ್ತು ಸಮಕಾಲೀನ ಚಿತ್ರಗಳಾಗಿವೆ.

## ಗಂಗಾವತಿ ತಾಲೂಕು

### ಹಿರೇಬೆಣಕಲ್

ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಗಂಗಾವತಿಯಿಂದ ಪಶ್ಚಿಮಕ್ಕೆ ಸುಮಾರು ೧೦ ಕಿ.ಮೀ. ದೂರದಲ್ಲಿ ಹಿರೇಬೆಣಕಲ್ ಗ್ರಾಮವಿದೆ. ಇಲ್ಲಿ ಒಟ್ಟು ಹದಿನೇಳು ಕಲ್ಲಾಸರೆಗಳು ಇವೆ.

**ಕಲ್ಲಾಸರೆ : ಒಂದು**

ಬೆಟ್ಟದ ಭಾಗವಾದ ದುರ್ಗದ ದಡಿಯ ಆಗ್ನೇಯಕ್ಕೆ ಶಿಲಾ ಸಮಾಧಿ ನೆಲೆಗೆ ಹೋಗುವ ದಾರಿಯಲ್ಲಿ ಬೆಟ್ಟದ ಮೇಲೆ ಈ ಕಲ್ಲಾಸರೆ ಇದೆ. ಇದೊಂದು ಬೃಹತ್ ಗುಂಡುಕಲ್ಲು. ಇದರ ಪೂರ್ವಮುಖ ದಕ್ಷಿಣ ಮುಖದಲ್ಲಿ ಕೆಂಪು ವರ್ಣದ ಅನೇಕ ಚಿತ್ರಗಳಿವೆ. ಪೂರ್ವಬದಿಯ ಚಿತ್ರದಲ್ಲಿ ಒಂದರೊಳಗೊಂದು ಸೇರಿದಂತಿರುವ ಪ್ರಾಣಿಗಳ ಒಂದು ದೊಡ್ಡ ಚಿತ್ರವಿದೆ. ರೇಖಾಕೃತಿಯದು. ನಾಲ್ಕು ಕಾಲು, ಚಿಕ್ಕ ಕೊಡು, ಮತ್ತು ಚಿಕ್ಕ ಬಾಲವಿದೆ. ಈ ಪ್ರಾಣಿಯ ಹೊಟ್ಟೆಯ ಭಾಗದಲ್ಲಿ ಮತ್ತೊಂದು ಪ್ರಾಣಿಯ ಚಿತ್ರವನ್ನು ಬರೆಯಲಾಗಿದೆ. ಕೇವಲ ಅದರ ಬೆನ್ನು ಪುಷ್ಠ ಮುಖ ಮಾತ್ರವಿದ್ದು ದೊಡ್ಡ ಪ್ರಾಣಿಗಳಿಗೆ ಹಿಮ್ಮುಖವಾಗಿದೆ. ಅದಕ್ಕೂ ಕಿವಿ ಎರಡು ಕೋಡುಗಳಿವೆ. ಅವು ದೊಡ್ಡ ಪ್ರಾಣಿಯ ಬೆನ್ನಿನ ಹಿಂಭಾಗದಲ್ಲಿ ದೇಹದಿಂದ ಹೊರಕ್ಕೆ ಬಂದಿವೆ. ಇದೊಂದು ವಿಶೇಷ ರಚನೆಯಾಗಿದೆ.

ದಕ್ಷಿಣ ಬದಿಯ ಚಿತ್ರದಲ್ಲಿ ವೈವಿಧ್ಯಮಯವಾದ ಬಹುಸಂಖ್ಯೆಯ ಚಿತ್ರಗಳಿವೆ. ಮುಖ್ಯ ಚಿತ್ರಗಳು ಇಂತಿವೆ. ಮೇಲ್ಭಾಗದಲ್ಲಿ ಕೈ ಕೈ ಹಿಡಿದು ಸಾಲಾಗಿ ನಿಂತ ನಾಲ್ಕು ಜನರ ಅದರ ಮುಂದೆ ಎತ್ತು, ಅಶ್ವಸವಾರರ ಕೈ ಹಿಡಿದು ನಿಂತ ಜೋಡಿ ವ್ಯಕ್ತಿಗಳು ವ್ಯಕ್ತಿಯ ತೊಡೆಯವರೆಗಿನ ದೊಡ್ಡ ಚಿತ್ರಗಳಿವೆ. ಇವುಗಳ ಕೆಳಗೆ ಕ್ರಮವಾಗಿ ನವಿಲು ಅಶ್ವಸವಾರರ ಕೈ ಕೈ ಹಿಡಿದು ನಿಂತ ೧೩ ಜನರ ತಂಡ. ಮತ್ತೇ ಕೆಳಗೆ ವಿವಿಧ ಭಂಗಿಯ ಮನುಷ್ಯರ ಚಿಕ್ಕ ಚಿತ್ರಗಳು, ಅಶ್ವಸವಾರರ ನವಿಲುಗಳ, ಕೈ ಕೈಹಿಡಿದು ಸಾಲಾಗಿ ನಿಂತ ೧೦ ಜನರ ತಂಡ, ಕೈಯಲ್ಲಿ ಭರ್ಚಿ ಹಿಡಿದು ಎಸೆಯುವ ಭಂಗಿಯಲ್ಲಿರುವ ಮೂವರು ಸವಾರರ, ಕೆಳಗೆ ಕೊದಲಿನ ಮೂರು ಜನರ ತಂಡ, ನಾಯಿ, ಮೊಲ, ೧೦ ಜನರ ತಂಡ, ಜಿಂಕೆಗಳು, ಭರ್ಜಿ ಎಸೆಯುವ ಮನುಷ್ಯ ಎತ್ತಿನ ಚಿತ್ರಗಳಿವೆ. ತೀರ ಕೆಳಭಾಗದಲ್ಲಿ ಅಶ್ವಸವಾರರು ಎತ್ತು ಮನುಷ್ಯ ಮತ್ತು ಪ್ರಾಣಿಗಳ ಚಿತ್ರಗಳಿವೆ.

ಕೈ ಕೈ ಹಿಡಿದು ನಿಂತಿರುವ ಮನುಷ್ಯ ರೀತಿಯ ಎರಡು, ಮೂರು, ನಾಲ್ಕು, ಹತ್ತರ ಎರಡು ಮತ್ತು ಹದಿಮೂರು ಜನರಿರುವ ಒಟ್ಟು ಆರು ತಂಡಗಳಿವೆ. ಮೇಲಿನ ಜೋಡಿ ಮತ್ತು ಕೆಳಗಿನ ಮೂರು ಜನರ ತಂಡದ ವ್ಯಕ್ತಿಗಳ ತಲೆಯ ಸುತ್ತಲೂ ಕೂದಲುಗಳನ್ನು ತೋರಿಸಲಾಗಿದೆ(ಸಣ್ಣ ರೇಖೆಗಳ ಮೂಲಕ). ಪ್ರಾಯಶಃ ಇವು ಸ್ತ್ರೀಯರಾಗಿರಬೇಕು. ಇಲ್ಲಿ ಕೆಳಗಿನ ಹತ್ತು ಜನರ ತಂಡದ ಮೊದಲ ವ್ಯಕ್ತಿಯ ಕೈಯಲ್ಲಿ ಪರಶು(ಕೊಡಲಿ)ಗಳಿವೆ. ಎಲ್ಲಾ ತಂಡಗಳ ವ್ಯಕ್ತಿಗಳ ರಚನೆ ಭಿನ್ನವಾಗಿದೆ.

ಇಲ್ಲಿ ಒಟ್ಟು ಎಂಟು ಅಶ್ವಸವಾರರ ಚಿತ್ರಗಳಿವೆ. ಅಶ್ವಗಳ ಕತ್ತು ಮತ್ತು ಬಾಲದ ಮೇಲೆ ಅಧಿಕ ರೋಮಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಇಬ್ಬರು ಅಶ್ವಸವಾರರ ಕೈಯಲ್ಲಿ ಕೊಡಲಿ ಇಬ್ಬರ ಕೈಯಲ್ಲಿ ಭಲ್ಲೆಗಳಿವೆ. ಮನುಷ್ಯ ಚಿತ್ರಗಳು ತಂಡವನ್ನು ಹೊರತುಪಡಿಸಿ ಇಲ್ಲಿ ೧೨ ಮನುಷ್ಯರ ಬಿಡಿ ಚಿತ್ರಗಳಿವೆ. ತೀರ ಮೇಲೆ ದೊಡ್ಡ ಚಿತ್ರವಿದ್ದು ತೊಡೆಯವರೆಗೆ ಮಾತ್ರವಿದೆ. ಅಲ್ಲಲ್ಲಿ ವಿವಿಧ ಭಂಗಿಯಲ್ಲಿವೆ. ಅದರಲ್ಲಿ ಕೈಯಲ್ಲಿ ಕೊಡಲಿ ಹಿಡಿದು ಜಿಂಕೆಗೆ ಭರ್ಚಿ ಎಸೆಯುತ್ತಿರುವ ಮನುಷ್ಯನ ಚಿತ್ರ ಪ್ರಾಣಿಯೊಂದರ ಮೇಲೆ ಹಿಮ್ಮುಖವಾಗಿ ಕುಳಿತು ನಲಿದಾಡುತ್ತಿರುವ ಮೂವರ ಮನುಷ್ಯ ಚಿತ್ರಗಳು ಗಮನಾರ್ಹ. ಐದು ನವಿಲುಗಳು ನಾಲ್ಕು ಇಣಿಯುಳ್ಳ ಎತ್ತುಗಳ ಜಿಂಕೆ, ನಾಯಿ, ಚಿರತೆ ಮೊಲ ಮತ್ತಿತರ ಪ್ರಾಣಿಗಳಿವೆ.

### ಕಲ್ಲಾಸರೆ : ಎರಡು

ಇದು ಸಮಾಧಿ ನೆಲೆಯಿಂದ ಆಗ್ನೇಯಕ್ಕೆ ಸು ೧ ೧/೨ ಕಿ.ಮೀ ದೂರದಲ್ಲಿದೆ. ಈ ಪ್ರದೇಶಕ್ಕೆ ರಕ್ಕಸ ಬೀಳು ಎಂದು ಕರೆಯುತ್ತಾರೆ. ಬೆಟ್ಟದ ಒಂದು ದೊಡ್ಡ ಬಂಡೆಯು ಉತ್ತರಾಭಿಮುಖವಾಗಿದ್ದು ಬೆಟ್ಟಕ್ಕೆ ರಕ್ಕಸ ಕುಟ್ರಿ ಎಂದು ಬಂಡೆಗೆ ರಕ್ಕಸ ಬಂಡೆ ಎಂದು ಹೆಸರು. ಬಂಡೆಯ ಮುಖ ಸು.೨೦ ಮೀ. ಅಗಲ ೧೮ ಮೀ. ಎತ್ತರವಾಗಿದ್ದು ನುಣುಪಾಗಿ ಫಲಕದಂತೆ ಚಿತ್ರ ರಚನೆಗೆ ಪ್ರಶಸ್ತವಾಗಿದೆ. ಇಡೀ ಬಂಡೆಯ ಮೇಲೆ ಒಂದು ಮುಂಚಾಚಿದ ಬಂಡೆ ಇದ್ದು ಆಸರೆ ನೀಡಿದೆ.

ಇಡೀ ಬಂಡೆಯ ಉದ್ದಗಲಕ್ಕೂ ಕೆಂಪು ವರ್ಣದ ರೇಖಾಚಿತ್ರಗಳಿವೆ. ಚಿತ್ರಗಳಿಗೆ ಹೆಚ್ಚಿನ ಆಸರೆ ಇಲ್ಲದಿರುವುದರಿಂದ ಮತ್ತು ಅಲ್ಲಲ್ಲಿ ಮಳೆ ನೀರ ಇಳಿಕೆಯಿಂದ ಚಿತ್ರಗಳು ಮಾಸಿವೆ. ಆದರೂ ಇಡೀ ಚಿತ್ರಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಲಿಯೋನಾರ್ಡ್‌ಮನ್‌ರವರ ವಿವರಣೆಯನ್ನು ಗಮನಿಸಿದರೆ ಇದು ಅವರು ಗುರುತಿಸಿದ ಎರಡನೇ ಗವಿಯೆಂದು ತೋರುತ್ತದೆ. ಅವರು ಇದರ ಬಗೆಗೆ ಹಿರೇಬೆನಕಲ್ಲಿನ ವರ್ಣಚಿತ್ರಗಳಲ್ಲೆಲ್ಲಾ ಇದೇ ಅತ್ಯಂತ ದೊಡ್ಡದಾದ ಭವ್ಯ ಗವಿಯೆಂದು ಸರಿಯಾಗಿ ಗುರುತಿಸಿದ್ದಾರೆ. ಆದರೆ ಚಿತ್ರಗಳು ಮಾಸಿದ ಬಗ್ಗೆ ಹೇಳಿ ಇಲ್ಲಿ ಗುಡ್ಡ ಗಾಡಿನಲ್ಲಿ

ಕರಡಿಯಿಂದ ಹಿಂಬಾಲಿಸಲ್ಪಟ್ಟ ಒಬ್ಬ ಮನುಷ್ಯನ ಚಿತ್ರವಿದೆ. ಶಿಖರದ ತುದಿಯಲ್ಲಿ ಮತ್ತೊಬ್ಬ ನಿಂತು ಕೂಗುತ್ತಿರುವ ಆಗಿದೆ. ಇನ್ನೊಬ್ಬ ತನ್ನ ಎರಡೂ ಕೈಗಳನ್ನು ಅರ್ಧ ಮೇಲಕ್ಕೆತ್ತಿದ್ದಾನೆ ಎಂದು ಚಿತ್ರಗಳ ವಿವರ ನೀಡಿದ್ದಾರೆ. ಆದರೆ ಸೂಕ್ಷ್ಮವಾಗಿ ಗಮನಿಸಿದಲ್ಲಿ ಇಲ್ಲಿ ಬೇರೆ ರೀತಿಯ ಚಿತ್ರಗಳು ಗುರುತಿಸಬಹುದು. ಈ ಬೃಹತ್ ಚಿತ್ರ ಫಲಕದ ಬಲ ಕೆಳಗಿನ ಮೂಲೆಯ ಹಂದಿಗಳ, ಮೈಮೇಲೆ ಗೆರೆಗಳುಳ್ಳ ಸ್ತ್ರೀ ಹಾಗೂ ಎತ್ತಿನ ಚಿತ್ರಗಳು ಇರ್ವಿನ್ ನ್ಯೂಮೆಯರ್‌ರವರ ಲೈನ್ಸ್ ಆನ್ ಸ್ಟೋನ್ ಗ್ರಂಥದಲ್ಲಿ ಪ್ರಕಟವಾಗಿವೆ.

ಇಡೀ ಫಲಕದಲ್ಲಿ ೧೨.೫೦ ಮೀ ಅಗಲ ಹಾಗೂ ಸುಮಾರು ೧೦ ಮೀ. ಎತ್ತರದ ವಿಸ್ತೀರ್ಣದಲ್ಲಿ ಚಿತ್ರಿತ ಭಾಗವಿದೆ. ಇದರಲ್ಲಿ ಮೇಲಿನ ಕಾಲು ಭಾಗದಲ್ಲಿ ಒಂದು ಚಿತ್ರ. ಕೆಳಗಿನ ಮುಕ್ಕಾಲು ಬಾಗದಲ್ಲಿ ಮತ್ತೊಂದು ಸಂಕೀರ್ಣ ಚಿತ್ರವಿದೆ. ಸೂಕ್ಷ್ಮವಾಗಿ ಗಮನಿಸಿ ತರ್ಕಿಸಿದಲ್ಲಿ ಮೇಲಿನದು ಹೆಬ್ಬಾವಿನಂತೆ ತೋರುತ್ತದೆ. ಅರೆ ವೃತ್ತಾಕಾರದ ತಲೆ ಅದರಲ್ಲಿ ಎರಡು ಕಣ್ಣು ತಲೆಯಿಂದ ಮೂರು ಸೀಳಿನ ನಾಲಿಗೆ ಹೊರ ಚಾಚಿದೆ. ತಲೆಯಿಂದ ದೇಹವನ್ನು ಫಲಕದ ಕೊನೆಯವರೆಗೂ ಚಾಚಿದ್ದು ಅಲ್ಲಿಂದ ಬಾಲವನ್ನು ಪುನಃ ತಲೆಯ ಕಡೆ ಹೊರಳಿಸಿದೆ. ಇಲ್ಲಿ ಬಾಲ ತಿರುವಿನ ಭಾಗ ನೀರ ಇಳಿಕೆಯಿಂದ ಮಾಸಿದೆ. ಅರ್ಧ ವೃತ್ತಾಕಾರದ ತಲೆಯನ್ನು ದ್ವಿ ರೇಖೆಯಲ್ಲಿ ಚಿತ್ರಿಸಲಾಗಿ. ಅದರಿಂದ ಒಳಗೆ ಸ್ವಲ್ಪ ಅಂತರದಲ್ಲಿ ಮತ್ತೊಂದು ಅರೆ ವೃತ್ತಾಕಾರದ ರೇಖೆ ಇದೆ. ಇವೆರಡರ ನಡುವೆ ಗರಗಸದ ಹಲ್ಲಿನಂತೆ ಏರಿಳಿತದ ಗೆರೆಯನ್ನು ಹಾಕಲಾಗಿದೆ. ಎರಡನೆ ಅರೆ ವೃತ್ತ ರೇಖೆಯ ಒಳಗೆ ಕಣ್ಣಿನಂತಹ ಎರಡು ದೊಡ್ಡ ಚುಕ್ಕೆಗಳು ಬಾಯಿಯಂತಹ ಅಡ್ಡಗೆರೆ ಇದೆ. ದೇಹ ಹೊರ ಭಾಗವನ್ನು ಮೂರು ರೇಖೆಗಳಲ್ಲಿ, ಬಾಲವನ್ನು ಎರಡು ರೇಖೆಯಲ್ಲಿ ಚಿತ್ರಿಸಲಾಗಿದೆ. ತಲೆಯ ಮೇಲೆ ಎರಡೂ ಕೈಗಳನ್ನು ಎತ್ತಿ ನಿಂತಿರುವ ಚಿಕ್ಕ ಮನುಷ್ಯ ಚಿತ್ರವಿದೆ. ತಲೆ ತ್ರಿಕೋನಾಕಾರದಲ್ಲಿ ದೇಹ ಚೌಕಾಕಾರದಲ್ಲಿದ್ದು ಅದರಲ್ಲಿ ಗುಣಾಕಾರ ಚಿಹ್ನೆಯಂತಹ ರೇಖೆಗಳಿವೆ. ಕಾಲು ಎರಡೂ ವಕ್ರ ರೇಖೆಯವು. ಹೆಬ್ಬಾವನ್ನು ಹತ್ಯೆಗೆಯ್ಯುತ್ತಿರುವ ಚಿತ್ರವಿದಾಗಿರಬಹುದೆಂದು ತರ್ಕಿಸಬಹುದು.

ಕೆಳಗಿನ ಚಿತ್ರ ಮೇಲು ನೋಟಕ್ಕೆ ಅರೆ ವೃತ್ತಾಕಾರದ ತುದಿಯ ಹಿಡಿಕೆ, ಅಗಲವಾದ ಅಲಗು ಮತ್ತು ಮೇಲ್ಮುಖವಾಗಿರುವ ಚೂಪಾದ ತುದಿಯನ್ನು ಒಳಗೊಂಡ ಕಬ್ಬಿಣದ ಮಚ್ಚಿನಂತೆ ಕಾಣುತ್ತದೆ. ಆದರೆ ಮೇಲಿನ ಚಿತ್ರದ ಹಿನ್ನೆಲೆಯಲ್ಲಿ ಗಮನಿಸಿದಾಗ ಇದು ಕೂಡ ಹೆಬ್ಬಾವಿನ ಚಿತ್ರವೆಂದು ಗುರುತಿಸಬಹುದು. ಇದು ಮೇಲಿನ ಹಾವಿಗೆ ವಿರುದ್ಧ ಮುಖದಲ್ಲಿದೆ. ಅರೆ ವೃತ್ತಾಕಾರ ಭಾಗವನ್ನು ತಲೆಯೆಂದು ಅದರಿಂದ ಹೊರಟಿರುವ ಐದು ರೇಖೆಗಳನ್ನು ರೋಮಗಳೆನ್ನಬಹುದು. ಹಿಡಿಯಂತಹ

ಭಾಗವೇ ತೆಳುವಾದ ಕತ್ತು ಮತ್ತು ದೇಹ ಉಬ್ಬಿದಂತಿದೆ. ಪ್ರಾಯಶಃ ಹೆಬ್ಬಾವು ಆಹಾರವನ್ನು ನುಂಗಿರುವ ಸ್ಥಿತಿಯಲ್ಲಿರಬಹುದು. ಹಾಗೆ ಬಾಲ ಸಹಜವಾಗಿ ತುದಿಯಲ್ಲಿ ಚೂಪಾಗಿದೆ. ದೇಹದ ತುಂಬೆಲ್ಲಾ ವಿಶಿಷ್ಟವಾದ ರೇಖಾಕೃತಿಗಳನ್ನು ಬರೆಯಲಾಗಿದೆ.

ಕೆಳಗಿನ ಹೆಬ್ಬಾವಿನ ಮೇಲ್ಭಾಗದಲ್ಲಿ ಅರೆ ಬಿಡಿಸಿರುವ ಮನುಷ್ಯನ ಮತ್ತು ಹಂದಿಯ ಮುಖ ಚಿತ್ರಗಳು ದೇಹದ ಕೆಳಗೆ ಉದ್ದಕ್ಕೂ ಎತ್ತು ಎರಡೂ ಹಂದಿಗಳು ಅವುಗಳ ನಡುವೆ ಸ್ತ್ರೀಯ ಮತ್ತೊಂದು ಸ್ತ್ರೀ ಇಬ್ಬರು ವ್ಯಕ್ತಿಗಳ ಹಾಗೂ ರೇಖಾ ಸಂಕೇತಗಳ ಚಿತ್ರಗಳಿವೆ. ಸ್ತ್ರೀ ಚಿತ್ರಗಳು ಪಾರ್ಶ್ವ ಬದಿಯವು. ಕಾಲನ್ನು ಮುಂದಕ್ಕೆ ಬಗ್ಗಿಸಿ ಕೈಗಳನ್ನು ಮುಂದಕ್ಕೆ ಚಾಚಿ ನಗ್ನರಾಗಿ ನಿಂತಿದ್ದಾರೆ. ಮೈಮೇಲೆ ಅನೇಕ ರೇಖೆಗಳಿವೆ. ಎರಡೂ ಪರಸ್ಪರ ವಿರುದ್ಧ ಮುಖಿಯಾಗಿವೆ. ಮತ್ತೊಂದು ವ್ಯಕ್ತಿ ಚಿತ್ರ ಹೆಬ್ಬಾವಿನ ದೇಹದಲ್ಲಿ ಅರ್ಧ ಕೆಳಗೆಯಿದೆ. ಎರಡೂ ಕಾಲುಗಳನ್ನು ಆಗಲಿಸಿ ನಿಂತಿದ್ದು, ಬಲಗೈ ಮೇಲಕ್ಕೆತ್ತಿದೆ. ಇನ್ನೊಂದು ಕೈ ಇಲ್ಲ. ತಲೆ ಮೈಮೇಲೆ ಅರೆ ವೃತ್ತದ ರೇಖೆಗಳಿವೆ. ಕಾಲಿನಲ್ಲಿ ಒಂದು ಉದ್ದ ಅನೇಕ ಅಡ್ಡ ರೇಖೆಗಳಿವೆ. ಎರಡೂ ಕಾಲುಗಳನ್ನು ಅಗಲಿಸಿ ನಿಂತ ಮತ್ತೊಂದು ವ್ಯಕ್ತಿಯ ರೇಖಾಕೃತಿ ಇದೆ. ಬಲ ಮೂಲೆಯಲ್ಲಿ ಎತ್ತಿನ ಚಿತ್ರವಿದ್ದು, ಅದರ ಮೈಮೇಲೆಲ್ಲಾ ದ್ವಿ ಮಡಿಕೆಯ ವಕ್ರ ರೇಖೆಗಳಿವೆ. ಮೀನಿನಂತೆ ತೋರುವ ರೇಖಾಚಿತ್ರ ಹಾಗೂ ಪ್ರಾಯಶಃ ಎರಡೂ ಸೀಳಿನ ನಾಲಿಗೆ ಹಾಗೂ ಮೀಸೆಗಳು ಇರುವ ಹೆಬ್ಬಾವಿನ ತಲೆಯದೆಂದು ತೋರುವ ಚಿತ್ರವಿದೆ.

### ಕಲ್ಲಾಸರೆ : ಮೂರು

ಈ ಕಲ್ಲಾಸರೆಯಲ್ಲಿ ಎರಡು ಕೋಣೆಗಳಿವೆ. ಒಂದರ ಮೇಲಿನ ಬಂಡೆಯ ಮೇಲೆ ನಗ್ನ ಪುರುಷನ ರೇಖಾಚಿತ್ರವಿದೆ(೨.೬೦ ಮೀ ಎತ್ತರ ಮತ್ತು ೧.೫೦ ಮೀ ಅಗಲ). ಎರಡೂ ಕಾಲುಗಳನ್ನು ಸೊಟ್ಟಗೆ ಮಾಡಿ ನಿಂತಿದೆ, ಎರಡೂ ಕೈಗಳನ್ನು ಅರ್ಧ ಮೇಲಕ್ಕೆತ್ತಿದೆ. ಹಸ್ತಗಳನ್ನು, ಕಣ್ಣುಗಳನ್ನು ಕಿವಿಗಳನ್ನು ತೋರಿಸಿಲ್ಲ. ಶಿಶ್ನ ಬಿಡಿಸಲಾಗಿದೆ. ಎತ್ತರಕ್ಕೆ ತಕ್ಕ ಹಾಗೆ ತಲೆ ದೊಡ್ಡದಿಲ್ಲ. ಮೈತುಂಬಾ ಅಡ್ಡ, ಡೊಂಕು ಡೊಂಕಾದ, ಕತ್ತರಿ ರೇಖೆಗಳ, ತ್ರಿಕೋನ, ವಜ್ರಾಕೃತಿಗಳ ಚಿತ್ರಗಳಿವೆ. ಇವನು ನಿಂತಿರುವ ಭಂಗಿ ಮೈತುಂಬಾ ಚಿತ್ರಗಳಿರುವುದನ್ನು ನೋಡಿದರೆ ಯಾವುದೋ ಮಾಂತ್ರಿಕ ಕಟ್ಟಳೆಯಲ್ಲಿ ನಿರತನಾದ ಮನುಷ್ಯನ ಚಿತ್ರವೆಂದು ತೋರುತ್ತದೆ. ಪಶ್ಚಿಮ ಕೋಣೆಯು ೫.೬ x ೩.೫೦ ಮೀ ವಿಸ್ತಾರದಲ್ಲಿದೆ. ಇದರಲ್ಲಿ ಮಧ್ಯ ರೇಖೆಗಳುಳ್ಳ ಎರಡು ಚೌಕುಗಳು ಎರಡು ಕುದುರೆಗಳು, ಆನೆ, ಕತ್ತೆ ಅಥವಾ ನಾಯಿಯ ಚಿತ್ರಗಳಿವೆ.

## ಕಲ್ಲಾಸರೆ : ನಾಲ್ಕು

ಶಿಲಾ ಸಮಾಧಿಗಳ ಮಧ್ಯದ ಗುಂಪಿನಿಂದ ಇದು ಪೂರ್ವಬದಿಯಲ್ಲಿ ಒಂದರ ಪಕ್ಕ ಒಂದರಂತೆ ಎರಡು ಕಲ್ಲಾಸರೆಗಳಿದ್ದು ಉತ್ತರಾಭಿಮುಖಿಯಾಗಿವೆ. ಎರಡರ ಚಿತ್ರಗಳು ಸಾಕಷ್ಟು ಮಾಸಿ ಹೋಗಿದ್ದು ಗುರುತಿಸಲು ಕಷ್ಟ ಸಾಧ್ಯ. ಪೂರ್ವ ಬದಿಯ ಕಲ್ಲಾಸರೆಯಲ್ಲಿ ಅಶ್ವಸವಾರರ ನವಿಲು ಚಿಗರೆ ಕೈ ಕೈ ಹಿಡಿದು ಸಾಲಾಗಿ ನಿಂತ ಮೂವರು ಮನುಷ್ಯರ ಚಿತ್ರಗಳಿವೆ. ಪಶ್ಚಿಮ ಬದಿಯ ಕಲ್ಲಾಸರೆಯಲ್ಲಿ ಕೂಡ ಅನೇಕ ಚಿತ್ರಗಳಿದ್ದು ಅದರಲ್ಲಿ ನೃತ್ಯ ನಿರತ ಮನುಷ್ಯ ಚಿತ್ರ ಗೋಚರಿಸುತ್ತದೆ. ಉಳಿದವು ಸ್ಪಷ್ಟವಿಲ್ಲ.

## ಕಲ್ಲಾಸರೆ : ಐದು

ಎರಡನೇ ಸಂಖ್ಯೆಯ ಕಲ್ಲಾಸರೆಯಿಂದ ಸುಮಾರು ೩೦ ಮೀ. ಎತ್ತರದಲ್ಲಿ ಈ ಕಲ್ಲಾಸರೆ ಇದೆ. ಸುತ್ತಲಿನ ಗುಂಡುಗಳಲ್ಲಿಯೇ ಎತ್ತರವಾದ ಇದು ಪೂರ್ವ ಈಶಾನ್ಯ ಮುಖಿಯಾಗಿದೆ. ಗವಿಯ ಎಡಗೋಡೆ ಮತ್ತು ಒಳಭಾಗದಲ್ಲಿ ಚಿತ್ರಗಳಿವೆ. ಒಳಭಾಗದ ಚಿತ್ರದಲ್ಲಿ ೨.೫೦ ಮೀ ಮತ್ತು ೦.೯೦ ಮೀ ಎತ್ತರ ವಿಸ್ತಾರದಲ್ಲಿ ಚಿತ್ರಗಳಿವೆ. ತಲೆಯ ಮೇಲೆ ಕೋಡು ಮತ್ತು ಬಾಲವುಳ್ಳ ಮನುಷ್ಯ, ಡೊಂಕು ಡೊಂಕಾದ ಉದ್ದನೆಯ ಕೋಡುಗಳುಳ್ಳ ಜಿಗರೆಗಳು ನವಿಲು, ಗೂಳಿಗಳ ಮತ್ತು ಒಂದಕ್ಕೊಂದು ಛೇದಿಸಿದ ವ್ಯಾಸಗಳುಳ್ಳ ವೃತ್ತಗಳು ಬಾಹ್ಯರೇಖೆಯಲ್ಲಿ ಚಿತ್ರಿಸಿದ ಹಾಗೂ ತಲೆಯ ಮೇಲೆ ಕೊಡುಗಳುಳ್ಳ ಮತ್ತೆರಡು ಮನುಷ್ಯರ ಚಿತ್ರಗಳು ಇಲ್ಲಿವೆ. ಎಡಗೋಡೆಯ ಚಿತ್ರವು ೧.೭೦ ಮೀ ಮತ್ತು ೦.೮೦ ಮೀ ಎತ್ತರದ ವಿಸ್ತಾರದಲ್ಲಿ ಉದ್ದವಾದ ಕೋಡುಳ್ಳ ಚಿಗರಿಗಳು ಬಾಲಧಾರಿ ಮನುಷ್ಯ ಮತ್ತು ಇಣಿ ಇರದ ಎತ್ತಿನ ಚಿತ್ರಗಳಿವೆ.

## ಕಲ್ಲಾಸರೆ : ಆರು

ದುರ್ಗದ ದಡಿಯಿಂದ ಸ್ವಲ್ಪ ಕೆಳಗೆ ಗುಡ್ಡದ ಉತ್ತರ ಇಳಿಜಾರಿನ ಮಧ್ಯಭಾಗದಲ್ಲಿ ಈ ಕಲ್ಲಾಸರೆ ಇದೆ. ಇದರಲ್ಲಿ ಛಾವಣಿ ಹಾಗೂ ಹಿಂದಿನ ಗೋಡೆಯಲ್ಲಿ ಚಿತ್ರಗಳಿವೆ.

ಒಳಗಿನ ಛಾವಣಿಯ ಚಿತ್ರವು ೬.೩೦ ಮೀ ಆಳತೆಯ ವಿಸ್ತಾರದಲ್ಲಿ ಇದೆ. ಬಿಲ್ಲು ಬಾಣಗಳನ್ನು ಹಿಡಿದ ಮನುಷ್ಯರ ಮತ್ತು ಭರ್ಚಿಗಳನ್ನಿಡಿದ ಅಶ್ವಧಾರಿಗಳ, ಗಂಡು ಹೆಣ್ಣು ನವಿಲಿನ, ಕೆಚ್ಚಲುಳ್ಳ ಆಕಳುಗಳು, ಎತ್ತುಗಳ ಚಿತ್ರಗಳು ಅಧಿಕ ಸಂಖ್ಯೆಯಲ್ಲಿವೆ. ಕೈಯಲ್ಲಿ ಕೈ ಹಿಡಿದು ಸಾಲಾಗಿ ನಿಂತಿರುವ ಮನುಷ್ಯರ, ಹುಲಿ, ಕವಲು ಕೋಡಿನ ಜಿಂಕೆಗಳ ಗುಂಪು ಸವಾರರಿರುವ ಕುದುರೆಯನ್ನು ಹಗ್ಗದಿಂದ

ಎಳೆಯುತ್ತಿರುವ ವ್ಯಕ್ತಿ(೨ ಕಡೆ) ಚಿತ್ರಗಳು ಇವೆ. ಇಲ್ಲಿ ಒಬ್ಬ ಕುದುರೆ ಸವಾರನು ಬಿಲ್ಲಿಗೆ ಹೂಡಿದ ಬಾಣದಿಂದ ಚಿಗರಿಯನ್ನು ಹಿಡಿಯಲು ಪ್ರಯತ್ನಿಸುತ್ತಿರುವ ಒಂದು ಹುಲಿಯ ಕಡೆಗೆ ಹೊಡೆಯುತ್ತಿರುವ ಆಗಿದೆ. ಇದಲ್ಲದೇ ಮೂರು ಸಮಾನಂತರ ಗೆರೆಗಳು ಮತ್ತೊಂದು ಮೂರು ಸಮನಾಂತರ ಗೆರೆಗಳನ್ನು ೯೦ರಲ್ಲಿ ಕತ್ತರಿಸಿವೆ. ಇವುಗಳ ತುದಿಗಳನ್ನು ಏರಿಳಿತದ ಗೆರೆಯಿಂದ ಸೇರಿಸಿವೆ. ಹಿಂದಿನ ಗೋಡೆಯ ೨.೫೫ ಮೀ x ೧.೧೦ಮೀ ವಿಸ್ತೀರ್ಣದಲ್ಲಿ ಚಿತ್ರಗಳಿವೆ. ಜಿಂಕೆ, ಗೂಳಿಗಳು, ಅಶ್ವಸವಾರರು ಮತ್ತು ಕೈ ಹಿಡಿದು ನೃತ್ಯ ಮಾಡುತ್ತಿರುವ ಸಾಲು ವ್ಯಕ್ತಿಗಳ ಚಿತ್ರಗಳಿವೆ.

### ಕಲ್ಲಾಸರೆ : ಏಳು

ಮ್ಯಾದರ ಬಂಡೆ ಎಂದು ಕರೆಯುವ ಈ ಕಲ್ಲಾಸರೆಯು ಉತ್ತರಾಭಿಮುಖವಾಗಿದ್ದು, ಬಸರಿ ಕೊಳ್ಳದ ದಾರಿಯ ಪ್ರಾರಂಭದಲ್ಲಿದೆ. ಇಲ್ಲಿ ಕೇವಲ ಕೆಲವು ಗೂಳಿಗಳ ಮತ್ತು ನವಿಲಿನ ಚಿತ್ರಗಳಿವೆ.

### ಕಲ್ಲಾಸರೆ : ಎಂಟು

ಬಸರಿ ಕೊಳ್ಳದಿಂದ ಮೇಲೇರಿ ೫ನೇ ಗವಿಯಿಂದ ನೈರುತ್ಯಕ್ಕೆ ತಿರುಗಿದಾಗ ಪೂರ್ವ ಗುಂಪಿನ ಶಿಲಾ ಸಮಾಧಿಗಳೆಡೆಗೆ ಸಾಗುವ ದಾರಿಯಲ್ಲಿ ಈ ಕಲ್ಲಾಸರೆ ಇದೆ. ಇದು ಕಮಾನಿನಾಕಾರದ ಕಲ್ಲಾಸರೆ. ಇಲ್ಲಿ ಮೈಮೇಲೆ ಗೆರೆಗಳುಳ್ಳ ಪ್ರಾಯಶಃ ಹುಲಿಗಳ ಎರಡು ಚಿತ್ರಗಳಿವೆ.

### ಕಲ್ಲಾಸರೆ : ಒಂಭತ್ತು

ಪೂರ್ವ ಗುಂಪಿನ ಸಮಾಧಿಗಳಿಂದ ಆಗ್ನೇಯಕ್ಕೆ ಇದು ಇದೆ. ಈ ಗವಿಗೆ ಎರಡೂ ಕಡೆಗೆ ಪ್ರವೇಶವಿದ್ದು, ಒಳಭಾಗದಲ್ಲಿ ಹುಲಿ ಮತ್ತು ರೇಖಾಚಿತ್ರಗಳಿವೆ.

### ಕಲ್ಲಾಸರೆ : ಹತ್ತು

ದುರ್ಗದ ದಡಿಯ ತುದಿಯ ಮಧ್ಯಭಾಗದಲ್ಲಿ ೬ನೆ ಗವಿಯ ಬಲ ಬದಿಗೆ ಈ ಕಲ್ಲಾಸರೆ ಇದ್ದು ಉತ್ತರಾಭಿಮುಖವಾಗಿದೆ. ಗವಿಯ ಎಡೆಗೋಡೆಯ ಮೇಲೆ ಹಿಡಿಕೆಯುಳ್ಳ ಉದ್ದ ಕತ್ತಿಗಳನ್ನು, ಬಿಲ್ಲು ಬಾಣಗಳನ್ನು ಹಿಡಿದುಕೊಂಡು ನಿಂತ ಮನುಷ್ಯರ ಚಿತ್ರಗಳಿವೆ.

### ಕಲ್ಲಾಸರೆ : ಹನ್ನೊಂದು

ದುರ್ಗದ ದಡಿಯಲ್ಲಿ ಬೆಟ್ಟದ ಮೇಲೆ ಈ ಕಲ್ಲಾಸರೆ ಇದೆ. ಇಲ್ಲಿ ಕೈ ಕೈ ಹಿಡಿದು ನೃತ್ಯ ಮಾಡುತ್ತಿರುವ ಮನುಷ್ಯರ ನೇರ ಹಾಗೂ ವೃತ್ತಸಾಲುಗಳಿವೆ. ಆಯಾ ಮನುಷ್ಯ ಚಿತ್ರಗಳ ಕೆಳಗೆ

ನೇರವಾಗಿ ಮತ್ತು ದ್ವಿ ಅರೆ ವೃತ್ತಾಕಾರದ ಗೆರೆಗಳಿವೆ. ಮನುಷ್ಯ ಜೋಡಿಯ ಸಂಭೋಗ, ಗೂಳಿಗಳ ಮತ್ತು ಜಿಂಕೆಗಳ ಸಾಲು ಚಿತ್ರಗಳೂ ಕೂಡ ಇಲ್ಲಿವೆ.

### ಕಲ್ಲಾಸರೆ : ಹನ್ನೆರಡು

ದುರ್ಗದ ದಡಿಯ ಬೆಟ್ಟದ ತುಟ್ಟ ತುದಿಯ ದುರ್ಗಮವಾದ ಭಾಗದಲ್ಲಿ ಈ ಗವಿ ಇದೆ. ಇದರಸಮೀಪದಲ್ಲಿಯೇ ಸ್ವಲ್ಪ ಕೆಳಗೆ ೬ನೇ ಮತ್ತು ೧೧ನೇ ವರ್ಣಚಿತ್ರಗಳಿವೆ. ಅನತಿ ದೂರದಲ್ಲೇ ೧ನೇ ವರ್ಣಚಿತ್ರ ಗವಿ. ಗವಿಯ ಐದು ಕಡೆಗಳಲ್ಲಿ ಕುದುರೆ ಸವಾರರ, ಕುಣಿತದವರ ಗುಂಪು, ಚಿಗರಿಗಳ ಸಾಲು ಮತ್ತು ದನಗಳ, ನವಿಲು ಮೊದಲಾದ ಚಿತ್ರಗಳಿವೆ.

ಎರಡು ಬಂಡೆಗಳ ಸಂಧಿಯಲ್ಲಿ ಪಶ್ಚಿಮ ದಿಕ್ಕಿಗೆ ಎದುರಾಗಿರುವ ಬಂಡೆಯ ಮೇಲಿನ ಚಿತ್ರದಲ್ಲಿ ೨೭ ಜನರು ಕೈ ಕೈ ಹಿಡಿದು ಕೊಂಡು ಸಾಲಾಗಿ ನಿಂತಿದ್ದಾರೆ. ಬಲಕ್ಕಿರುವ ವ್ಯಕ್ತಿ ಹುಡುಗನೆಂದು ಹೇಳಬಹುದು. ಒಂದು ಬದಿಯಲ್ಲಿರುವವನು ಕೈಯಲ್ಲಿ ಏನನ್ನೋ ಹಿಡಿದಿದ್ದಾನೆ. ಮತ್ತೊಂದು ಬದಿಯಲ್ಲಿ ಅಸ್ಪಷ್ಟ ಚಿತ್ರವಿದ್ದು ಪಾದಗಳ ಕೆಳಗೆ ಉದ್ದಕ್ಕೂ ಎರಡೂ ಗೆರೆಗಳಿವೆ. ಈ ಸಾಲಿನ ಮೇಲೆ ಒಂದೆರಡು ಅಸ್ಪಷ್ಟ ಚಿತ್ರಗಳಿವೆ. ಕೊನೆಯವನ ತಲೆಯ ಮೇಲೆ ಒಂದರ ಮೇಲೊಂದು ಎರಡು ಬದಿಗಳಿಗೆ ಮೇಲ್ಮುಖವಾಗಿ ಓರೆ ಗೆರೆಗಳಿವೆ. ಇದನ್ನು ಬಹುಶಃ ಅನಂತರ ಸೇರಿಸಿದ ಹಾಗೆ ತೋರುತ್ತದೆ.

ಮುಂಚಾಚಿತ ಬಂಡೆಯ ಕೆಳ ಮೈಯ ಮೇಲೆ ಒಬ್ಬ ನಿಂತ ಮನುಷ್ಯನ ಚಿತ್ರವೂ ಅರ್ಧ ಚಂದ್ರಾಕೃತಿಯ ಗೆರೆಯ ಮೇಲೆ ನಿಂತ ಹನ್ನೆರಡು ಮನುಷ್ಯರ, ಮತ್ತೊಂದೆಡೆಯಲ್ಲಿ ಜೋಡಿ ಮನುಷ್ಯರ ಒಬ್ಬ ಮನುಷ್ಯನು ಒಂದು ಗೂಳಿಯನ್ನು ಚಪ್ಪರಿಸುತ್ತಿರುವ ಚಿತ್ರಗಳಿವೆ. ಇದೇ ಭಾಗದ ಒಂದೆಡೆಯಲ್ಲಿ ಕುದುರೆ ಸವಾರರ ಚಿತ್ರಗಳಿವೆ. ಗವಿಯ ಮೇಲಿನ ದೊಡ್ಡ ಬಂಡೆಯ ಕೆಳಮೈಯಲ್ಲಿ ಒಬ್ಬ ನಗ್ನ ಮನುಷ್ಯನ, ಗಂಡು ಗೊಡಲಿ ಹಿಡಿದ ಒಬ್ಬ ಕುದುರೆ ಸವಾರ, ಮೂರು ವ್ಯಕ್ತಿಗಳ ಸಾಲಿನಲ್ಲಿ ಬಲಗಡೆ ಕೊನೆಯವನ ಉದ್ದನೆ ತಲೆಗೂದಲನ್ನು ಹಿಡಿದುಕೊಂಡ ಒಬ್ಬ ಎತ್ತರದ ಮನುಷ್ಯ. ಈ ಸಾಲಿನ ಎಡಗಡೆಯ ಮನುಷ್ಯನ ತಲೆಗೂದಲು ನೆಟ್ಟಗೆ ನಿಂತಿವೆ. ಉದ್ದನೆ ಕೋಡುಳ್ಳ ಎತ್ತು, ಕೈ ಕೈ ಹಿಡಿದು ಕೊಂಡ ಇಬ್ಬರು ವ್ಯಕ್ತಿಗಳ ಸಂಭೋಗ ಮೊದಲಾದ ಚಿತ್ರಗಳಿವೆ. ಮತ್ತು ಬಲಗಡೆ ಮುಖ ಮಾಡಿದ ಹತ್ತು ಜಿಂಕೆಗಳ ಸಾಲು, ಉದ್ದನೆ ಕೋಡುಳ್ಳ ಎತ್ತು, ಕುದುರೆ ಸವಾರರು ಒಂದರಲ್ಲಿ ಏಳು ಮತ್ತೊಂದರಲ್ಲಿ ಆರು ನಿಂತ ವ್ಯಕ್ತಿಗಳ ಎರಡು ಸಾಲುಗಳು, ನಿಂತ ಮನುಷ್ಯ,

ಕುದುರೆ ಸವಾರ, ಎಂಟು ಜಿಂಕೆಗಳ ಸಾಲು, ಕುಚ್ಚಿನಂತಹ ಬಾಲವಿರುವ ಪ್ರಾಣಿ ಮತ್ತು ಎರಡು ಎತ್ತುಗಳಿವೆ. ಎರಡನೇ ಸಾಲಿನಲ್ಲಿ ಎಡಗಡೆಯಿಂದ ಮೂರನೇ ವ್ಯಕ್ತಿ ಪ್ರಾಯಶಃ ಹೆಂಗಸಿರಬೇಕು.

ಈ ಬಂಡೆಯ ಕೆಳಗಿರುವ ಬಂಡೆಯ ಮೇಲೆ ಮೇಲಿಂದ ಕೆಳಗಿನವರೆಗೆ ಹಲವಾರು ಚಿತ್ರಗಳಿವೆ. ಅಸ್ಪಷ್ಟ ಪ್ರಾಣಿ ನವಿಲು, ಎತ್ತುಗಳು, ಒಂದು ಕುದುರೆಯ ಮೇಲೆ ನಿಂತ, ಇನ್ನೊಂದು ಕುದುರೆ ಮೇಲೆ ಕುಳಿತ ಇಬ್ಬರು ಸವಾರರು, ಇಪ್ಪತ್ಮೂರು ಕುದುರೆ ಸವಾರರ ಸಾಲು, ಹದಿನಾಲ್ಕು ಜಿಂಕೆಗಳ ಸಾಲು, ಆಯುಧ ಪಾಣಿಯಾದ ಮನುಷ್ಯ, ಬಿಲ್ಲು, ಮನುಷ್ಯನ ಮುಂದೆ ಕುದುರೆ ಸವಾರ, ಎತ್ತುಗಳ ಮತ್ತು ಒಬ್ಬ ಮನುಷ್ಯ ಹೀಗೆ ಹಲವಾರು ಚಿತ್ರಗಳಿವೆ. ಜಿಂಕೆಗಳ ಬಾಲ ತುಂಬಾ ಕೂದಲಿನಿಂದ ಕೂಡಿದೆ.

### ಕಲ್ಲಾಸರೆ : ಹದಿಮೂರು

ಸಮಾಧಿ ನೆಲೆಗೆ ಪಶ್ಚಿಮ ಕಡೆಯಿಂದ ಪ್ರವೇಶಿಸುವಲ್ಲಿ ಕಲ್ಲು ತುಂಡುಗಳ ನೆಲ ಹಾಸಿದೆ. ಈ ಭಾಗಕ್ಕೆ ಗ್ರಾಮಸ್ಥರು ಅಗಸಿ ಎನ್ನುವರು. ಈ ಅಗಸಿಯ ಸಮೀಪ ದಾರಿಯ ಎಡಕ್ಕೆ ಈ ಕಲ್ಲಾಸರೆ ಇದೆ. ಅದರ ಪೂರ್ವ ಬದಿಯಲ್ಲಿ ಮೂರು ಎತ್ತಿನ ಚಿತ್ರಗಳು ಮತ್ತು ಒಂದು ಚಿಗರೆಯ ಚಿತ್ರವಿದೆ.

ದೊಡ್ಡ ಎತ್ತು ಛಾಯಾರೂಪದ್ದು. ಉಳಿದವು ಬಾಹ್ಯರೇಖೆಯವು. ಎತ್ತಿನ ದೇಹ ಸಪೂರವಾಗಿ ಉದ್ದವಾಗಿದೆ. ಕೋಡು ಇಣಿ ಬಾಲಗಳಿದ್ದು, ಬಾಲದ ತುದಿಯಲ್ಲಿ ಬಾಗಿದ ಅಡ್ಡ ರೇಖೆ ಹಾಕಿ ಕುಚ್ಚನ್ನು ಸೂಚಿಸಲಾಗಿದೆ.ಇದರ ಕೆಳಗೆ ಮತ್ತೊಂದು ಎತ್ತಿನ ಚಿತ್ರವಿದ್ದು, ಕೋಡುಗಳು ಮೂರು ಮಡಿಕೆಯಲ್ಲಿ ಒಳಬಾಗಿ ವಜ್ರಾಕೃತಿಯಲ್ಲಿವೆ. ಈ ಎರಡೂ ಎತ್ತುಗಳ ಮೇಲೆ ಮುಖ ಮಾಡಿ, ಮೇಲಕ್ಕೆ ಪುಷ್ಠ ಕೆಳಗೆ ಮಾಡಿ ಪಶು ಹಾಗೂ ಜಿಂಕೆಯ ಚಿತ್ರ ಬಿಡಿಸಲಾಗಿದೆ. ಜಿಂಕೆ ಕೋಡು ವಜ್ರಾಕೃತಿಯಲ್ಲಿದೆ. ದೇಹದ ನಡುವೆ ಉದ್ದ ಗೆರೆ ಹಾಕಿ ಪಟ್ಟೆಯನ್ನು ತೋರಿಸಲಾಗಿದೆ. ಈ ಕಲ್ಲಾಸರೆಯ ಪಶ್ಚಿಮ ಪ್ರವೇಶದಲ್ಲಿ ಬಂಡೆಯ ಮೇಲೆ ಚಿಕ್ಕ ಚಿಕ್ಕ ಕುಳಿಯ ಆಕೃತಿ ಇದೆ.

### ಶಿಲಾ ಸಮಾಧಿ ಚಿತ್ರ : ಹದಿನಾಲ್ಕು

ಶಿಲಾಸಮಾಧಿಗಳ ಗುಂಪಿನಲ್ಲಿ ಕೆರೆಯ ಎಡಬದಿಗೆ ಒಂದು ಸಮಾಧಿ ಇದೆ. ಅದರ ನಾಲ್ಕು ದಿಕ್ಕಿನ ಬಂಡೆಗಳಲ್ಲಿ ಪಶ್ಚಿಮ ದಿಕ್ಕಿನದು ನಾಶವಾಗಿದ್ದು ತೆರೆದಿದೆ. ಅದರಲ್ಲಿ ಹಿಂದಿನ ಬಂಡೆಯ ಮೇಲೆ ತಿಳಿ ಕೆಂಪು ವರ್ಣದ ಮೂರು ಜಿಂಕೆಗಳ ಚಿತ್ರಗಳಿವೆ. ಅದರಲ್ಲಿ ಮೊದಲನೆಯದು ಮುಖ, ಸಣ್ಣ ಕೋಡು ಎತ್ತರವಾದ ಕತ್ತು ಉದ್ದವಾದ ತೆಳು ದೇಹ ಮತ್ತು ನಾಲ್ಕು ಕಾಲುಗಳನ್ನು ಹೊಂದಿ ಪೂರ್ಣರೂಪದಲ್ಲಿದೆ. ಉಳಿದೆರಡು ಅದರ ಹಿಂದೆ ಇದ್ದು, ಭಾಗಶಃ ಕಾಣುತ್ತಿರುವಂತೆ ರಚಿಸಲಾಗಿದೆ.

## ಕಲ್ಲಾಸರೆ : ಹದಿನೈದು

ಇದು ಕೆರೆಯ ಎಡಬದಿಯ ಬೆಟ್ಟದಲ್ಲಿದೆ. ನೆಲಕ್ಕೆ ವಾರೆಯಾಗಿ ಬಿದ್ದಿರುವ ಮಾನವಾಕಾರದ ನಿಲುಸುಗಲ್ಲಿನ ಮುಂದಿನಿಂದ ಉತ್ತರಕ್ಕೆ ಸಾಗಿದರೆ ದಾರಿಯಲ್ಲಿ ಈ ಕಲ್ಲಾಸರೆ ಸಿಗುತ್ತದೆ. ಬಲಬದಿಯ ಗೋಡೆಯಲ್ಲಿ ಗುರುತಿಸಲು ಸಾಧ್ಯವಾಗದ ವಿಶಿಷ್ಟ ರೇಖಾ ಚಿತ್ರವಿದೆ. ಗರಗಸದ ಹಲ್ಲಿನಂತೆ ಎರಡೂ ಬದಿ ಹಲ್ಲುಗಳನ್ನು ಒಳಗೊಂಡ ರೇಖಾಕೃತಿ ಇದು.

## ಕಲ್ಲಾಸರೆ : ಹದಿನಾರು

ಶಿಲಾಸಮಾಧಿ ನೆಲೆಯಿಂದ ಆಗ್ನೇಯಕ್ಕೆ ಸು.೧ ೧/೨ ಕಿ.ಮೀ ದೂರದಲ್ಲಿಯ ರಕ್ಕಸ ಬೀಳಿನ ರಕ್ಕಸ ಬಂಡೆ ಅಥವಾ ರಕ್ಕಸಕುಟ್ರಿ ವರ್ಣಚಿತ್ರ ಕಲ್ಲಾಸರೆಯ ಎದುರಿಗೆ ಇದು ಇದೆ. ಬೃಹತ್ ಬಂಡೆಯೊಂದು ಗವಿಯಿಂದ ಮುಂಚಾಚಿದ್ದು ಅದರ ಭಾವಣಿಯಲ್ಲಿ ಹುಡಗಳು, ಮೀನು ಮತ್ತು ಮನುಷ್ಯ ಚಿತ್ರಗಳಿವೆ. ಚಿತ್ರಗಳು ಕೆಂಪು ವರ್ಣದಲ್ಲಿದ್ದು ಬಹಳಷ್ಟು ಮಾಸಿವೆ.

ಹಲ್ಲಿ ಆಕಾರದ ಐದು ಹುಡಗಳಿವೆ. ಅವು ಸಾಮಾನ್ಯವಾಗಿ ೧.೧೧ ಮೀ ಉದ್ದವಾಗಿ ಮತ್ತು ೦.೨೮ ಮೀ(ಕಾಲು ಸಹಿತ) ಅಗಲವಿದೆ. ನಾಲ್ಕು ಮೇಲೆ ಎರಡು ಕೆಳಗೆ ಒಂದೇ ಕಡೆ ಮುಖ ಮಾಡಿದ್ದರೆ ತೀರ ಕೆಳಗೆ ಒಂದು ಅಡ್ಡವಾಗಿದೆ. ಚೂಪಾದ ಮೂತಿಯ ತಲೆ, ತೆಳುವಾದ ಕತ್ತು, ದಪ್ಪವಾದ ದೇಹ ಉದ್ದವಾದ ಬಾಲಗಳಿವೆ. ಮೇಲೆ, ಕೆಳಗೆ ಕಾಲುಗಳಿವೆ. ಮುಂದಿನ ಕಾಲುಗಳ ಪಾದಗಳು ಮುಂದಕ್ಕೆ(ಒಂದಕ್ಕೆ ಮಾತ್ರ ಹಿಂದಕ್ಕೆ ಪಾದಗಳಿವೆ). ಹಿಂದಿನ ಕಾಲುಗಳ ಪಾದಗಳು ಹಿಂದಕ್ಕೆ ಇವೆ. ಎಲ್ಲಾ ಹುಡಗಳ ಇಡೀ ದೇಹದ ಮೇಲೆ ವಕ್ರವಾಗಿ ಎರಡೂ ಬದಿಯಿಂದ ರೇಖೆಗಳನ್ನು ಹಾಕಲಾಗಿದೆ. ಅವು ಪರಸ್ಪರ ಛೇದಿಸುವುದರಿಂದಾಗಿ ದೇಹದಲ್ಲಿ ಅನೇಕ ವಜ್ರಾಕೃತಿಯ ಅಂಕಣಗಳಾಗಿವೆ. ಮೂತಿ ತಲೆಯ ಸುತ್ತಲೂ ಮತ್ತು ಹಿಂದಿನ ಕಾಲುಗಳ ಹಿಂಬದಿಗೆ ಮಾತ್ರ ಸಾಲಾಗಿ ಚಿಕ್ಕ ಚಿಕ್ಕಗೆರೆಗಳನ್ನು ಹಾಕಲಾಗಿದೆ.

ಇಲ್ಲಿ ಒಂದು ದೊಡ್ಡ ಮೀನಿನ ರೇಖಾಚಿತ್ರ ಒಳಬದಿಯಲ್ಲಿದೆ. ಇದು ೦.೮೩ ಮೀ x ೦.೫೦ ಮೀ ಆಳತೆಯಲ್ಲಿದೆ. ಸ್ವಲ್ಪ ಉದ್ದವಾಗಿ ಮೊಟ್ಟೆಯಾಕಾರದ ದೇಹ ಮುಂದೆ ಎರಡೂ ಕಡೆ ದೊಡ್ಡದಾದ ರೆಕ್ಕೆ ಮತ್ತು ಹಿಂಭಾಗದಲ್ಲಿ ಎರಡೂ ಭಾಗದ ರೆಕ್ಕೆಗಳಿವೆ. ಮೈಮೇಲೆಲ್ಲಾ ಅಡ್ಡರೇಖೆಗಳನ್ನು ಸಾಲಾಗಿ ಹಾಕಲಾಗಿದೆ. ಇಲ್ಲಿಯೇ ಚಿಕ್ಕ ಮನುಷ್ಯ(೦.೩೭ ಮೀ x ೦.೧೭ ಮೀ) ನ ಚಿತ್ರವಿದೆ. ಕಾಲುಗಳನ್ನು ಮುಂದಕ್ಕೆ ಮಾಡಿ ವಕ್ರವಾಗಿ ನಿಂತ ಪಾರ್ಶ್ವ ಬದಿಯದು. ಕೈಯನ್ನು ಮುಂದೆ ಮೇಲಕ್ಕೆ ಎತ್ತಿದೆ. ತಲೆ ದೇಹ ಕಾಲುಗಳ ಮೇಲೆ ಅಡ್ಡ ರೇಖೆಗಳಿವೆ.

ರಕ್ಕಸ ಕುಟ್ರಿಯ ಹಿಂಭಾಗದ ಬೆಟ್ಟದ ಕೆಳಭಾಗದಲ್ಲಿ ಈ ವಿಶಾಲವಾದ ಗವಿ ಇದೆ. ಇದಕ್ಕೆ ಎರಡೂ ಕಡೆಯಿಂದ ಪ್ರವೇಶವಿದೆ. ಗವಿಯ ವಿಶಾಲವಾದ ಭಾವಣಿಯಲ್ಲಿ ಎರಡು ವಿಚಿತ್ರವಾದ ದೊಡ್ಡ ಮನುಷ್ಯಾಕೃತಿಗಳಿವೆ.

ಮೊದಲನೆ ಆಕೃತಿಯು ಭಾವಣಿಯ ಪೂರ್ವ ಭಾಗದಲ್ಲಿದೆ. ಮನುಷ್ಯನಂತೆ ತೋರುವ ವಿಚಿತ್ರ ಆಕೃತಿ ಇದು. ೫ ಮೀ ಉದ್ದ, ೪ಮೀ ಅಗಲವಾಗಿದೆ. ತ್ರಿಕೋನಾಕಾರದ ತಲೆ, ಬೆನ್ನು ಬಾಗಿಸಿದ ಭಂಗಿಯಲ್ಲಿದೆ. ಬಲಕೈಯನ್ನು ತಲೆಯ ಮುಂದೆ ಮೇಲಕ್ಕೆ ಚಾಚಿದೆ. ಎಡಗೈ ತೋಳಿನ ಭಾಗದವರೆಗೆ ಇದೆ. ಪ್ರಾಯಶಃ ಕತ್ತರಿಸಿ ಸೀಳಿದಂತಿದೆ. ಬಾಲವಿದೆ. ಹೊಟ್ಟೆಯ ಭಾಗದಲ್ಲಿ ಕೆಳಮುಖವಾಗಿ ಅದೇ ಭಂಗಿಯ ಮನುಷ್ಯಾಕೃತಿ ಇದೆ. ಕಾಲಿನ ಮೇಲೆ ಒಬ್ಬ ವ್ಯಕ್ತಿ ಎರಡೂ ಕೈಗಳನ್ನು ಮೇಲಕ್ಕೆತ್ತಿ ನಿಂತಿದ್ದಾನೆ. ಇಡೀ ಆಕೃತಿಯ ತಲೆ ಬೆನ್ನು ತೊಡೆ ಕೈ ಮೇಲೆ ದ್ವಿ ರೇಖೆಯ ಪಟ್ಟಿಗಳಿವೆ. ಹೊಟ್ಟೆಯೊಳಗಿನ ಮನುಷ್ಯಾಕೃತಿಯ ಮೈಮೇಲೂ ಈ ರೀತಿ ಪಟ್ಟೆಗಳಿವೆ. ಎತ್ತರಿಸಿದ ಕೈ ನೇರವಾಗಿದೆ. ಅದರ ಹಸ್ತದಲ್ಲಿ ನಾಲ್ಕು ಚೂಪಾದ ಉಗುರುಗಳಿವೆ. ಕೈಯಲ್ಲಿ ಅಡ್ಡ ಪಟ್ಟೆಗಳಿವೆ.

ಎರಡನೇ ಆಕೃತಿಯು ಭಾವಣಿಯು ಪಶ್ಚಿಮ ಭಾಗದಲ್ಲಿದೆ. ಇದೂ ಕೂಡ ಮನುಷ್ಯನಂತೆ ತೋರುವ ವಿಚಿತ್ರ ಆಕೃತಿಯಾಗಿದ್ದು ೭ ಮೀ. ಉದ್ದವಾಗಿದೆ. ತಲೆ ಎರಡೂ ಕೈಗಳು ದೇಹ ಮತ್ತು ಉದ್ದವಾದ ಬಾಲ ಇದಕ್ಕಿದೆ. ಮೊಟ್ಟೆಯಾಕಾರದ ಸ್ವಲ್ಪ ಉದ್ದತಲೆ ಅದರ ಕತ್ತಿನ ಭಾಗದಿಂದ ಎರಡೂ ಬದಿ ಕೈ ಚಾಚಿವೆ. ಕೈ ತುದಿಯಲ್ಲಿ ಹಸ್ತವಿದ್ದು, ಮೂರು ಚೂಪಾದ ಕಿರು ಬೆರಳು ಅಥವಾ ಉಗುರುಗಳಿವೆ. ದೇಹ ಉಡ ಅಥವಾ ಹಲ್ಲಿಯಂತಿದ್ದು, ಉದ್ದವಾದ ಬಾಲವಿದೆ. ತಲೆಯಲ್ಲಿ ರೋಮನ್ ಲಿಪಿ ಆಕಾರದ ದ್ವಿ ರೇಖೆಗಳು ಅದರ ಕೆಳಗೆ ಉದ್ದವಾಗಿ ಎರಡು ರೇಖೆಗಳಿವೆ. ಕೈಗಳಲ್ಲಿ ತ್ರಿಕೋನದ ಭಾಗಗಳನ್ನು ಉಂಟು ಮಾಡುವ ಏರಿಳಿತದ ರೇಖೆ ಇದೆ. ದೇಹದಲ್ಲಿ ಬಾಹ್ಯ ರೇಖೆಯ ಆಕಾರದಲ್ಲಿ ಎರಡು ಜಂಟಿ ರೇಖೆಗಳು ಇವೆ. ಬಾಲದಲ್ಲಿ ಎರಡೂ ತುದಿಯಿಂದ ಪರಸ್ಪರ ಛೇದಿಸಿದ ಅಡ್ಡರೇಖೆಗಳನ್ನು ಹಾಕಲಾಗಿದೆ. ಇದು ಯಾವ ಆಕೃತಿಯೆಂದು ಗುರುತಿಸುವುದು ಕಷ್ಟ. ಗವಿಯ ದಕ್ಷಿಣ ಪ್ರವೇಶದಲ್ಲಿ ಮುಖ ಬಂಡೆಯ ಮೇಲೆ ಕೈಗಳನ್ನು ಮೇಲಕ್ಕೆತ್ತಿ ನಿಂತಿರುವ ಮನುಷ್ಯನ ಚಿಕ್ಕ ಚಿತ್ರಗಳಿವೆ. ಅದರ ಮೈ ಮೇಲೆ ಅಡ್ಡ ರೇಖೆಗಳಿವೆ.

## ಚಿಕ್ಕಬೆಣಕಲ್

ಗಂಗಾವತಿ ಕೊಪ್ಪಳ ರಸ್ತೆಯಲ್ಲಿ ಗಂಗಾವತಿಯಿಂದ ದಕ್ಷಿಣಕ್ಕೆ ಸುಮಾರು ೧೨ ಕಿ.ಮೀ ದೂರದಲ್ಲಿ ಈ ಗ್ರಾಮವಿದೆ. ಇದು ಒಟ್ಟು ಮೂರು ಕಲ್ಲಾಸರೆಗಳನ್ನು ಒಳಗೊಂಡಿದೆ.

### ಕಲ್ಲಾಸರೆ : ಒಂದು

ಇದು ಗ್ರಾಮದಿಂದ ದಕ್ಷಿಣಕ್ಕೆ ಸುಮಾರು ೧೨ ಕಿ.ಮೀ ದೂರದಲ್ಲಿ ಒನಕೆಕಿಂಡಿ ದಾರಿ (ಯಡಹಳ್ಳಿದಾರಿ)ಯಲ್ಲಿದೆ. ಬೆಟ್ಟದ ಪ್ರಾರಂಭದಲ್ಲಿ ಒಂದು ದೊಡ್ಡ ಒಂಟಿ ಗುಂಡು ಇದ್ದು, ಅದರ ಆಸರೆಯಲ್ಲಿ ಕೆಂಪು ವರ್ಣದ ಚಿತ್ರಗಳಿವೆ. ಇಲ್ಲಿ ಮುಖ್ಯವಾಗಿ ರಂಗೋಲಿ ರೀತಿಯ ಚಿತ್ರಗಳು ಮತ್ತು ಮನುಷ್ಯರ ಎರಡು ಕಡ್ಡಿ ಚಿತ್ರಗಳು, ಎತ್ತಿನ ಚಿತ್ರಗಳಿವೆ. ರಂಗೋಲಿ ರೀತಿಯ ಚಿತ್ರಗಳಲ್ಲಿ ಒಂದು ಚೌಕ ವಿನ್ಯಾಸದ ಚಿತ್ರ ಗಮನ ಸೆಳೆಯುತ್ತದೆ. ಚೌಕ ಅಂಕಣದಲ್ಲಿ ಸರಿಯಾಗಿ ಎರಡು ಅಡ್ಡರೇಖೆಗಳಿವೆ. ಇದರಿಂದ ಅಂಕಣವು ಮೂರು ಭಾಗವಾಗಿದೆ. ಈ ಅಡ್ಡರೇಖೆಗಳನ್ನು ಎರಡೂ ತುದಿಯಲ್ಲಿ ಅರೆ ತ್ರಿಕೋನಾಕಾರದ ಗೆರೆಯಿಂದ ಸೇರಿಸಲಾಗಿದೆ. ಹಾಗೂ ಚೌಕ ಅಂಕಣದ ಹೊರಗೆ ತ್ರಿಕೋನಾಕಾರದಲ್ಲಿ ಕೂಡಿವೆ.

ಆಯತಾಕೃತಿಯ ಚುಕ್ಕೆ ಚಿತ್ರವಿದೆ. ಮತ್ತೊಂದು ಲಂಬ ಆಯತದನಾಲ್ಕು ಮೂಲೆಗಳನ್ನು ಸೇರಿಸಿ ಪರಸ್ಪರ ಕತ್ತರಿಸುವ ರೇಖೆಗಳನ್ನು ಹಾಕಿದ್ದು, ಆ ರೇಖೆಗಳು ಆಯತದ ಹೊರ ಮೂಲೆಯಿಂದ ಮುಂದಕ್ಕೆ ಬಂದಿವೆ. ಚೌಕ ವಿನ್ಯಾಸದ, ಕೈಗಳನ್ನು ಮೇಲಕ್ಕೆತ್ತಿ ನಿಂತಿರುವ ಮನುಷ್ಯನ ರೇಖಾ ಚಿತ್ರಗಳಿವೆ. ಅವುಗಳಿಗೆ ತಲೆಗಳಿಲ್ಲ. ಎತ್ತಿನ ಚಿತ್ರ ದ್ವಿ ರೇಖೆಯದು. ಕೊಂಬು ಮುಂದಕ್ಕೆ ಬಾಗಿದೆ. ದೊಡ್ಡ ಇಣಿ ಇದೆ. ಬೆನ್ನಿನ ಗೆರೆಯು ಬಾಲವಾಗಿ ಕೊನೆಗೊಂಡಿರುವುದು ವಿಶೇಷ. ನಾಲ್ಕು ಕಾಲುಗಳು, ಶಿಶ್ನವಿದೆ. ಇನ್ನೊಂದು ಬದಿಯಲ್ಲಿ ಪ್ರಾಯಶಃ ಮಂಗನ ಹಾಗೂ ಎತ್ತಿನ ಕಡ್ಡಿ ರೂಪದ ಚಿತ್ರಗಳಿವೆ.

### ಕಲ್ಲಾಸರೆ : ಎರಡು

ಇದು ಗ್ರಾಮದಿಂದ ದಕ್ಷಿಣಕ್ಕೆ ಸುಮಾರು ೩ ಕಿ.ಮೀ ದೂರದಲ್ಲಿಯ ಮಳೆಯಮ್ಮನ ಊಟಿಯ ಹತ್ತಿರವಿದೆ. ಇದು ಸ್ವತಂತ್ರವಾಗಿರುವ ದೊಡ್ಡ ಕಲ್ಲಿನ ಗುಂಡು. (ವಾರೆ ಸವಕಳಿ ಬಂಡೆ ಆದರೆ) ಅದರಲ್ಲಿ ಸೊಗಸಾದ ಕಲ್ಲಾಸರೆ ಇದೆ. ಆ ಕಲ್ಲಾಸರೆಯಲ್ಲಿ ಅಸ್ಪಷ್ಟವಾದ ರೇಖಾ ಸಂಕೇತಗಳ ಕೆಂಪು ಚಿತ್ರಗಳಿವೆ. ಇದರಲ್ಲಿ ಬದಿಯ ಗುಂಡಿನಲ್ಲಿರುವ ಗೂಳಿಯ ಚಿತ್ರ (೨೦ x ೧೦ ಸೆಂ.ಮೀ) ವಿಶೇಷವೆನಿಸುತ್ತದೆ. ದ್ವಿ ರೇಖೆಯಲ್ಲಿ ದಪ್ಪನಾಗಿ ಕಾಲು ದೇಹವನ್ನು ಸಂಕೇತಿಸಿ ಚಿತ್ರ ಬಿಡಿಸಲಾಗಿದೆ. ಮುಖ ಒಂದು ಚಿಕ್ಕ ಬಿಂದು. ಅದಕ್ಕೆ ಮುಂಭಾಗಿದ ಕೋಡುಗಳಿವೆ.

## ಕಲ್ಲಾಸರೆ : ಮೂರು

ಇದು ಮಳೆಯಮ್ಮನ ಊಟಿಯ ಬದಿಯಲ್ಲಿ ಬೃಹತ್ ಶಿಲಾಯುಗದ ಶಿಲಾಸಮಾಧಿಗಳ ನೆಲೆಯ (ಮೊರೆರಕಲ್) ಹತ್ತಿರವಿದೆ. ಗವಿ ಇರುವ ಬೆಟ್ಟದ ಭಾಗ ತಡಸ್‌ಕುಟ್ರಿ. ಇಲ್ಲಿ ವಿಶಾಲವಾದ ಗವಿ ಇದಿ. ಬೃಹತ್ ಬಂಡೆಗಳು ಪರಸ್ಪರ ಮುಖಾಮುಖಿಯಾಗಿ ವಾರೆಯಾಗಿ ನಿಂತಿದ್ದು ಉತ್ತಮ ಆಸರೆ ಉಂಟಾಗಿದೆ. ಅದರ ದಕ್ಷಿಣ ಬದಿಯ ಬಂಡೆಯಲ್ಲಿ ಕೆಂಪು ವರ್ಣದ ಚಿತ್ರಗಳಿವೆ. ಅವು ನೆಲದಿಂದ ಸು.೬ ಅಡಿ ಎತ್ತರದ ಮೇಲೆ ಇರುವುದು ಗಮನಾರ್ಹ. ಬೃಹತ್ ಕಾಡುಕೋಣ ಹಾಗೂ ಮನುಷ್ಯ ಚಿತ್ರಗಳಿವೆ.

ಕಾಡುಕೋಣದ (ಸು. ೨ ಮೀ ಅಗಲ x ೨ ಮೀ ಎತ್ತರ)ಚಿತ್ರ ಬೃಹತ್ ಪ್ರಮಾಣದಲ್ಲಿದೆ. ಕಿರಿದಾದ ಕಿವಿ, ಬಾಯಿ, ಕಾಲುಗಳು, ಹೊಟ್ಟೆ, ಬಾಲ, ಶಿಶ್ನ ಸಹಜವಾಗಿದ್ದು ಕೋಣ ಬಲಿಷ್ಟವಾಗಿದೆ. ಇದು ಸಂಪೂರ್ಣ ರೇಖಾಚಿತ್ರವಾಗಿದೆ. ಮುಖದ ರಚನೆ ಅತ್ಯಂತ ಪ್ರಮಾಣ ಬದ್ದತೆಯಿಂದ ಸಹಜವಾಗಿದೆ. ಕೋಣದ ಚಿತ್ರದ ಹೊಟ್ಟೆಯ ಕೆಳಭಾಗದಲ್ಲಿ ಮತ್ತೊಂದು ಕೋಣ ಮುಖದ ಚಿತ್ರವಿದೆ. ಇತರ ಚಿತ್ರಗಳು ಅಸ್ಪಷ್ಟವಾಗಿವೆ.

ಇನ್ನೊಂದು ಬದಿಯಲ್ಲಿ ಮಾಂತ್ರಿಕ ವಿಧಿಯಲ್ಲಿ ನಿರತವಾಗಿರುವಂತೆ ತೋರುವ ಸುಮಾರು ಏಳು ಸಣ್ಣ ದೊಡ್ಡ ಮನುಷ್ಯ ಚಿತ್ರಗಳು, ಕಾಡು ಕೋಣದ ಅರ್ಧ ಭಾಗದ ಚಿತ್ರಗಳಿವೆ. ಐದು ಮನುಷ್ಯರು ಕೈಗಳನ್ನು ಮೇಲಕ್ಕೆತ್ತಿ ಕುಣಿಯುತ್ತಿರುವಂತಿದೆ. ಕಾಲುಗಳ ಭಂಗಿಗಳು ಬೇರೆ ಬೇರೆಯಾಗಿವೆ. ಒಂದು ಚಿತ್ರದಲ್ಲಿ ಕೈಗಳು ಭುಜದ ಸಮಾನಾಂತರದಲ್ಲಿ ಚಾಚಲಾಗಿದೆ. ಮತ್ತೊಂದು ಮನುಷ್ಯ ಚಿತ್ರ ಬದಿಯ ಭಾಗದ್ದು ಇದರ ತಲೆಯನ್ನು ಸಂಪೂರ್ಣ ವರ್ಣದಿಂದ ತುಂಬಲಾಗಿದೆ. ಮೈ ಮೇಲೆ ಬಾಣದ ತುದಿಯಾಕಾರದ ರೇಖೆಗಳಿವೆ. ಮತ್ತೊಂದರಲ್ಲಿ ಕೈ ಮತ್ತು ದೇಹದ ಮೇಲೆ ರೇಖೆಗಳಿವೆ. ಇವೆಲ್ಲ ರೇಖಾ ಚಿತ್ರಗಳಾಗಿದ್ದು ಮುಖದಲ್ಲಿ ಕಣ್ಣು, ಬಾಯಿ ಮತ್ತಿತರ ಅಂಗಗಳಿಲ್ಲ. ಹಸ್ತ ಮತ್ತು ಪಾದಗಳು ಇರುವುದಿಲ್ಲ. ಇಲ್ಲಿ ಕೋಣದ ಕೋಡುಗಳನ್ನು ಚಿತ್ರಿಸಲಾಗಿದೆ. ಅದರ ಮೇಲೆಯೇ ಕೋಣನ ಮುಖ ಹಾಗೂ ದೇಹದ ಮುಂಭಾಗದ ಚಿತ್ರ ಬಿಡಿಸಲಾಗಿದೆ.

## ಆನೆಗುಂದಿ

ಗಂಗಾವತಿಯಿಂದ ದಕ್ಷಿಣಕ್ಕೆ ಸುಮಾರು ೧೨ ಕಿ.ಮೀ. ದೂರದಲ್ಲಿ, ತುಂಗಾಭದ್ರಾ ನದಿಯ ಎಡದಂಡೆಯ ಮೇಲೆ ಈ ಗ್ರಾಮವಿದೆ. ಇಲ್ಲಿ ಒಂಭತ್ತು ಕಲ್ಲಾಸರೆಗಳು ಇದೆ.

ಈ ಕಲ್ಲಾಸರೆಯ ಛಾವಣಿ ಮತ್ತು ಬಲಬದಿಯ ಆಸರೆಯ ಕಲ್ಲಿನ ಮುಖಭಾಗದಲ್ಲಿ ಕೆಂಪುನ್ನು ಹೊಂದಿದೆ. ವರ್ಣದ ಚಿತ್ರಗಳಿವೆ. ಇವು ಎರಡು ಮಾನವಾಕೃತಿಗಳ ಮತ್ತು ಎರಡು ಎತ್ತುಗಳ ಹಾಗೂ ಇತರ ಸಂಕೇತಗಳ ಸಣ್ಣ ಚಿತ್ರಗಳು.

ಮನುಷ್ಯಚಿತ್ರವು ೦.೫೮ ಮೀ. ಎತ್ತರವಿದ್ದು, ಎಡ ಕೈಯನ್ನು ಭುಜದ ಸಮಾನಾಂತರದಲ್ಲಿ ಎತ್ತಿ, ತೋರು ಭಂಗಿಯಲ್ಲಿ ನಿಂತಿರುವ ಈ ಚಿತ್ರವು ಗಮನ ಸೆಳೆಯುತ್ತದೆ. ಮುಖ ತಲೆ ವಿಶೆಷವಾಗಿದೆ. ಮೂತಿಯು ಉಬ್ಬಿದ ರೀತಿಯಲ್ಲಿದೆ. ತಲೆಯ ಮೇಲೆ ಸಾಲು ತ್ರಿಕೋನಗಳ ರೀತಿಯಲ್ಲಿದೆ. ಮುಖದಲ್ಲಿ ಕಣ್ಣು, ಕಿವಿಗಳಿಲ್ಲ, ಭುಜ ವಿಶಾಲವಾಗಿದೆ. ಕಟಿ ತೆಳುವಾಗಿದ್ದು, ಪುಷ್ಮಭಾಗ ಕಾಲುಗಳು ಸಹಜವಾಗಿವೆ. ಬಲಕೈ ದೇಹದ ಹಿಂದೆ ಸ್ವಲ್ಪ ಅಂತರದಲ್ಲಿ ಕೆಳಕ್ಕೆ ಹಿಡಿಯಲಾಗಿದೆ. ಈ ಕೈ ಭುಜದಿಂದ ಮುಂಗೈವರೆಗೆ ಪೂರ್ಣ ವರ್ಣದಿಂದ ತುಂಬಲಾಗಿದೆ. ಕೈ ಕಾಲುಗಳಿಗೆ ಹಸ್ತ, ಪಾದಗಳು ಸ್ಪಷ್ಟವಿಲ್ಲ. ಎಡ ಕೈಯು ತೋರುಭಂಗಿಯಲ್ಲಿದೆ. ಈ ಮನುಷ್ಯಾಕೃತಿಯ ಮುಖವು ವಾನರನಂತೆ ಇದೆ, ಆದರೆ ಬಾಲವಿಲ್ಲ.

ಎರಡನೇ ಮನುಷ್ಯ ಚಿತ್ರವು ೨೯ ಸೆಂ.ಮೀ. ಎತ್ತರವಿದೆ. ಕೆಳಭಾಗದಲ್ಲಿ ಈ ಚಿತ್ರವಿದೆ. ನಿಂತಭಂಗಿಯಲ್ಲಿದ್ದು, ಕೈಗಳನ್ನು ಎರಡು ಬದಿ ದೇಹದಿಂದ ಸ್ವಲ್ಪ ಅಂತರದಲ್ಲಿ ಕೆಳಕ್ಕೆ ಹಿಡಿಯಲಾಗಿದೆ. ಹಸ್ತ, ಪಾದಗಳು ಸ್ಪಷ್ಟವಿಲ್ಲ. ದೇಹದ ರಚನೆ ಸ್ಪಷ್ಟವಾಗಿದೆ. ವಿಶಾಲಭುಜ, ಸಣ್ಣ ಕಟಿ, ಅಗಲ ಪುಷ್ಮ, ತೊಡೆಗಳು ಸಹಜವಾಗಿವೆ. ತಲೆಯು ದುಂಡಾಕಾರವಾಗಿದ್ದು, ತಲೆಯ ಸುತ್ತಲೂ ಕಿರಣಗಳ ರೀತಿಯಲ್ಲಿ ರೇಖೆಗಳನ್ನು ಎಳೆಯಲಾಗಿದೆ.

ಎರಡು ಎತ್ತಿನ ಚಿತ್ರಗಳನ್ನು ಹೊಂದಿದೆ. ಕೆಳಗಿನ ಎತ್ತಿನ ಚಿತ್ರ ನಿಂತ ಭಂಗಿಯ ಪಾರ್ಶ್ವ ನೋಟದ ಚಿತ್ರವಾಗಿದ್ದು, ಕೋಡುಗಳು ಎರಡು ಡೊಂಕಿನಲ್ಲಿವೆ. ಇದು ಛಾಯಾ ರೂಪದಲ್ಲಿ(೩೩ ಸೆಂ.ಮೀ ಉದ್ದ x ೨೮ ಸೆಂ.ಮೀ.ಅಗಲ), ಆಕಾರದಲ್ಲಿದೆ. ಕಿವಿ. ಇಣಿ ಬಾಲಗಳಿವೆ. ಬಾಲದಲ್ಲಿ(೩ ರೇಖೆಯ) ಕುಚ್ಚು ಇದೆ. ಶಿಶ್ನ ಬಿಡಿಸಲಾಗಿದೆ. ಇನ್ನೊಂದು ಚಿತ್ರ ಸ್ಪಷ್ಟವಿಲ್ಲ.

ಮಂಡಲ ಚಿತ್ರವು ಬೃಹತ್ ಮನುಷ್ಯಾಕೃತಿಯ ತಲೆಯ ಮೇಲ್ಭಾಗದಲ್ಲಿ ದೊಡ್ಡದಾದ ವೃತ್ತ ಮಂಡಲ ಚಿತ್ರವಿದೆ. ಒಟ್ಟು ಇಪ್ಪತ್ತು ತ್ರಿಕೋನ ಭಾಗಗಳು ಈ ಮಂಡಲದಲ್ಲಿವೆ. ವೃತ್ತದಲ್ಲಿ ಉದ್ದ, ಅಡ್ಡವಾಗಿ ಸಮಾನಾಂತರದಲ್ಲಿ ಎರಡೆರಡು ರೇಖೆಗಳು ಇವೆ. ಇದರಿಂದ ಒಂಭತ್ತು ಅಂಕಣಗಳು

ಉಂಟಾಗುತ್ತವೆ. ಮಧ್ಯದ ಚೌಕ ಅಂಕಣದಲ್ಲಿ ಅದರ ನಾಲ್ಕು ಮೂಲೆಗಳಿಂದ ಪರಸ್ಪರ ಸಂಧಿಸುವ ಎರಡು ರೇಖೆಗಳನ್ನು ಎಳೆಯಲಾಗಿದೆ. ಅಲ್ಲಿ ನಾಲ್ಕು ತ್ರಿಕೋನ ಭಾಗಗಳಾಗಿವೆ. ಮಧ್ಯದ ಅಂಕಣದ ನಾಲ್ಕು ಭುಜಗಳಿಂದ ನಾಲ್ಕು ಬದಿಯ ಅಂಕಣಗಳಲ್ಲಿ ತ್ರಿಕೋನಾಕಾರದ ರೇಖೆಗಳನ್ನು ಹಾಕಲಾಗಿದೆ (ವೃತ್ತದ ನಾಲ್ಕು ಮೂಲೆಯ ನಾಲ್ಕು ಅಂಕಣಗಳನ್ನು ಹೊರತುಪಡಿಸಿ). ಇದರಿಂದ ವೃತ್ತದಲ್ಲಿ ಒಟ್ಟು ಇಪ್ಪತ್ತು ತ್ರಿಕೋನ ಭಾಗಗಳು ಉಂಟಾಗಿವೆ.

ಬಲಬದಿಯ ಗೋಡೆಯ ಚಿತ್ರವು ಎರಡು ವಿಶಿಷ್ಟವಾದ ರೇಖಾಕೃತಿಗಳು ಮತ್ತು ಎತ್ತಿನ ಚಿತ್ರವನ್ನು ಹೊಂದಿದೆ. ರೇಖಾ ಸಂಕೇತಗಳನ್ನು ಗುರುತಿಸುವುದು ಕಷ್ಟ. ಎತ್ತು(೪೧ ಸೆಂ.ಮೀ ಉದ್ದ, ೬ ಸೆಂ.ಮೀ.ಎತ್ತರ) ಬಾಹ್ಯ ರೇಖೆಯಲ್ಲಿದೆ.

**ಕಲ್ಲಾಸರೆ : ಎರಡು**

ಈ ಕಲ್ಲಾಸರೆಯು ೧ ನೆಯದರ ಪಕ್ಕದಲ್ಲಿದೆ. ಇಲ್ಲಿ ಎಡಗೋಡೆ ಮತ್ತು ಛಾವಣಿ ಬಂಡೆಯಲ್ಲಿ ಕೆಮ್ಮಣ್ಣಿನ ವರ್ಣದ(ಕೆಂಪು) ಚಿತ್ರಗಳಿವೆ. ಎಡಗೋಡೆಯಲ್ಲಿ ೯ ಅನೇಕ ಪ್ರಾಣಿಗಳು, ಮೂವರು ಅಶ್ವಸವಾರರ ಹಾಗೂ ನಿಂತ ಎರಡು ಮನುಷ್ಯ ಚಿತ್ರಗಳಿವೆ. ಮೇಲಿನ ಐದು ಪ್ರಾಣಿಗಳು ಎತ್ತುಗಳು ಕೆಳಗೆ ನಾಲ್ಕು ಚಿಗರೆಯ ಚಿತ್ರಗಳ ಇವೆ.

ತೀರ ಮೇಲ್ಭಾಗದಲ್ಲಿ ಪರಸ್ಪರ ಎದುರಾ ನಿಂತ ಹಸು ಮತ್ತು ಹೋತು ಭಿನ್ನವಾದ ರಚನೆಗಳಾಗಿವೆ. ಹಸು ಚಿತ್ರ(೨೮ ಸೆಂ.ಮೀ. x ೧೯ ಸೆಂ.ಮೀ) ಕೋಡು, ಮುಖ, ಕತ್ತು, ದೇಹ, ಕಾಲು ಮತ್ತು ಬಾಲಗಳನ್ನು ಹೊಂದಿ ಸಹಜವಾಗಿದೆ. ದೇಹದಲ್ಲಿ ಹೊಟ್ಟೆಯ ಭಾಗ ತೆಳುವಾಗಿದ್ದು, ಎದೆ ಭಾಗ ಮತ್ತು ಪುಷ್ಠ ಭಾಗಗಳನ್ನೊಳಗೊಂಡ ತ್ರಿಕೋನಾಕಾರದ ಕಾಲುಗಳು ದೊಡ್ಡ ಪ್ರಮಾಣದಲ್ಲಿವೆ. ಬಾಲದ ತುದಿಯಲ್ಲಿ ೩ ರೇಖೆಗಳ ಕುಚ್ಚು ಇದೆ. ಕೋಡುಗಳು ರೋಮನ್‌ನ V ಮೂಲಾಕ್ಷರದಂತಿದೆ.

ಹೋತು ಎತ್ತಿಗೆ ಎದುರಾಗಿ ಮುಖ ಎತ್ತಿ ನಿಂತಿದ್ದು(೩೨ ಸೆಂ.ಮೀ ಎತ್ತರ ೨೩ ಸೆಂ.ಮೀ.), ಕೋಡುಗಳು ದೊಡ್ಡದಾಗಿ ಹಿಂದಕ್ಕೆ ಬಾಗಿವೆ. ದೇಹದ ಹೃದಯ ಭಾಗದಲ್ಲಿ ವಜ್ರಾಕೃತಿಯಲ್ಲಿ ಖಾಲಿ ಬಿಟ್ಟು ಉಳಿದಂತೆ ದೇಹದ ತುಂಬೆಲ್ಲಾ ವರ್ಣದಿಂದ ತುಂಬಲಾಗಿದೆ. ನಾಲ್ಕು ಕಾಲುಗಳು ತೆಳುವಾಗಿವೆ. ಬಾಲ ನಿಮಿರಿದೆ. ಶಿಶ್ನ ತೋರಿಸಲಾಗಿದೆ.

ಅಲಂಕೃತವಾಗಿರುವ ಎತ್ತುಗಳಲ್ಲಿ ಕೆಳಭಾಗದ ಇಡೀ ಚಿತ್ರ ಸಮೂಹದಲ್ಲಿ ದೊಡ್ಡದಿರುವ ಎತ್ತಿನ ಚಿತ್ರ ಅಪೂರ್ವವಾಗಿದೆ. ಇದು ನೋಡಲು ಕುದುರೆ ರೀತಿ ಕಾಣುತ್ತದಾದರೂ ಕೋಡು, ಇಣಿಗಳಿಂದ

ಎತ್ತು ಎನ್ನುವುದು ಸ್ಪಷ್ಟ. ಕೋಡು, ಮುಖ, ಕತ್ತು, ಇಣಿ, ದೇಹ, ಕಾಲು, ಬಾಲ ಮತ್ತು ಶಿಶ್ನಗಳಿವೆ. ದೇಹ, ಕಾಲು, ಬೆನ್ನು, ಕುತ್ತಿಗೆ ಮತ್ತು ಬಾಲಕ್ಕೆ ಅಲಂಕರಣ ರೀತಿಯ ರೇಖೆಗಳನ್ನು ಎಳೆದಿರುವುದು ವಿಶೇಷ. ಕತ್ತು ಮತ್ತು ಬೆನ್ನಿನ ಇಣಿಯ ಹಿಂದೆ ತಲಾ ಮೂರು ರೇಖೆಗಳನ್ನು ರೋಮದಂತೆ ಎಳೆಯಲಾಗಿದೆ. ದೇಹದಲ್ಲಿ ಕತ್ತಿನಿಂದ ಪುಷ್ಠ ಭಾಗದವರೆಗೆ ಸಮಾನಾಂತರ ಅಡ್ಡ ರೇಖೆಯನ್ನು ಹಾಕಿ ಅದಕ್ಕೆ ಮೇಲೆ ಕೆಳಗೆ ಬಾಣದೋಪಾದಿಯಲ್ಲಿ ವಕ್ರ ರೇಖೆಗಳಿವೆ.ಬಾಲಕ್ಕೂ ಕೂಡ ಅದರಂತೆ ರೇಖೆಗಳನ್ನು ಹಾಕಿದ್ದು, ಕುದುರೆ ಬಾಲದಂತೆ ತೋರುತ್ತದೆ. ಎರಡೂ ಕಾಲುಗಳ ಮೇಲೆ ವಜ್ರಾಕೃತಿಯಲ್ಲಿ ಹಾಕಿದ ರೇಖೆಗಳಿವೆ.

ಅಲಂಕೃತ ಎತ್ತಿನ ಮುಂದೆ ದಪ್ಪ ರೇಖೆಯ ಗೂಳಿಯಚಿತ್ರ ಹಾಗೂ ಹಿಂದೆ ಆಡಿನ ಚಿತ್ರಗಳಿವೆ. ಅವು ಪ್ರಮಾಣದಲ್ಲಿ ಚಿಕ್ಕ ಗಾತ್ರದವು. ಮುಂದಿನ ಗೂಳಿಗೆ ಕೋಡು, ಇಣಿ, ಬಾಲ ಶಿಶ್ನಗಳಿವೆ. ಆಡಿಗೆ ಕೆಚ್ಚಲು ನಾಲ್ಕು ಮೊಲೆ ತೊಟ್ಟುಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಆಡಿನ ಹಿಂಭಾಗದಲ್ಲಿ ಎತ್ತರವಾದ ಸರಳ ರೇಖೆ ಇದ್ದು ಅದರ ತುದಿಯಲ್ಲಿ ವೃತ್ತ ಹಾಗೂ ಅದಕ್ಕೆ ಸುತ್ತ ಐದು ರೇಖೆಗಳಿವೆ.

ಕೆಳಭಾಗದ ಚಿತ್ರಗಳು ಅಪೂರ್ವವಾಗಿವೆ. ಚಿಗರೆ, ಅಶ್ವಸವಾರರು ಮತ್ತು ಮನುಷ್ಯ ಚಿತ್ರಗಳ ಗುಂಪು ಇದೆ. ಚಿಗರೆಗಳನ್ನು ೩ ಜನ ಅಶ್ವಸವಾರರು ಬೆನ್ನಟ್ಟಿರುವಂತೆ(ಬೇಟೆ) ತೋರುವ ದೃಶ್ಯ ಚಿತ್ರವಿದು. ಜೊತೆಗೆ ಇಬ್ಬರು ವ್ಯಕ್ತಿಗಳ ಛಾಯಾರೂಪದ ಚಿಕ್ಕ ಚಿತ್ರಗಳಿವೆ. ಚಿಗರೆಗಳ ಕೋಡು, ಬೆನ್ನು ಬಾಲ ಹಾಗೂ ದೇಹದಲ್ಲಿ ಗೆರೆಗಳನ್ನು ಹಾಕಲಾಗಿದೆ. ಮೇಲಿನ ಅಲಂಕೃತ ಎತ್ತಿನಂತೆ ಇವು ಕಾಣುತ್ತಿದ್ದರೂ, ಇವಕ್ಕೆ ಇಣಿ ಇಲ್ಲ. ಹಾಗೂ ಕೊಂಬಿನಲ್ಲಿ ಕವಲುಗಳನ್ನು ತೋರಿಸಿರುವುದರಿಂದ ಚಿಗರೆಗಳೆಂದು ಹೇಳಬಹುದು. ಅವುಗಳ ಹಿಂದೆ ಕುದುರೆ ಸವಾರರ ಚಿತ್ರಗಳಿವೆ. ನಿಂತಿರುವ ಎರಡು ವ್ಯಕ್ತಿಗಳಲ್ಲಿ ಕೆಳಗಿನ ವ್ಯಕ್ತಿಯ ಕೈಯಲ್ಲಿ ಕೋಲಿನಾಕಾರದ ವಸ್ತು ಇದೆ. ಇಬ್ಬರ ತಲೆಯಲ್ಲೂ ಕೂದಲನ್ನು ಹಿಂದಕ್ಕೆ ಜುಟ್ಟಿನಂತೆ ಕಟ್ಟಿದಂತಿದೆ. ಒಟ್ಟಾರೆ ಇದು ಚಿಗರೆಗಳನ್ನು ಸೆರೆ ಹಿಡಿಯುವ ದೃಶ್ಯ ಚಿತ್ರವೆಂದು ಹೇಳಬಹುದು.

ಇದೇ ಗವಿಯ ಛಾವಣಿಯಲ್ಲಿ ೧ ಎತ್ತು ಹಾಗೂ ೩ ಆಕಳು ಅಥವಾ ಎಮ್ಮೆಯ ಚಿತ್ರಗಳಿವೆ. ಅವುಗಳಲ್ಲಿ ಮೂರು ಛಾಯಾ ರೂಪದವು. ಇನ್ನೊಂದು ರೇಖಾಚಿತ್ರ ಎಲ್ಲ ಪಶು ಚಿತ್ರಗಳನ್ನು ವಿವಿಧ ದಿಕ್ಕಿನಲ್ಲಿ ಚಿತ್ರಿಸಲಾಗಿದೆ. ಮೊದಲ ಎತ್ತು ಸಹಜವಾಗಿದ್ದು, ವಜ್ರಾಕೃತಿಯಲ್ಲಿ ಬಾಗಿದ ದೊಡ್ಡ ಕೊಂಬುಗಳು, ಇಣಿ, ಬಾಲ ಸಹಜ ದೇಹದಿಂದ ಕೂಡಿದೆ. ಉಳಿದವೆರಡಕ್ಕೆ ಹೊಟ್ಟೆ ಭಾಗ ಚಿಕ್ಕದಿದ್ದು

ಎರಡೂ ಕಾಲುಗಳ ಭಾಗವು ದೊಡ್ಡದಿರುವ ಶೈಲಿಯಲ್ಲಿವೆ. ಬದಿಯದನ್ನು ಲಂಬವಾಗಿ ಮುಖ ಮೇಲೆ ಬಾಲ ಕೆಳಗೆ ಬರುವಂತೆ ಚಿತ್ರಿಸಿರುವುದು ವಿಶೇಷ. ಗೆರೆಯಲ್ಲಿ ಚಿತ್ರಿಸಿರುವ ಪ್ರಾಣಿ ಮೊದಲ ಎತ್ತಿನ ವಿರುದ್ಧ ದಿಕ್ಕಿಗೆ ಮುಖ ಮಾಡಿದೆ.

ಬದಿಯ ಗೋಡೆಯಲ್ಲಿ ಎರಡು ಚಿತ್ರಗಳಿದ್ದು, ಪರಸ್ಪರ ಎದುರಾಗಿ ನಿಂತಿರುವ ನಾಯಿ ಮತ್ತು ಪ್ರಾಯಶಃ ದನದ ಕರುವಿನ ಚಿತ್ರಗಳಿವೆ. ಎರಡೂ ಪೂರ್ಣವರ್ಣದಲ್ಲಿದ್ದು, ಸಹಜವಾಗಿವೆ. ಈ ಚಿತ್ರಗಳ ನಂತರ ಎರಡು ಕಡ್ಡಿ ರೀತಿಯ ಮನುಷ್ಯಾಕೃತಿಗಳ ರೇಖಾಚಿತ್ರಗಳಿವೆ. ಅವು ಬಿಳಿ ಬಣ್ಣದವು.

**ಕಲ್ಲಾಸರೆ : ಮೂರು**

ಮೊದಲಿನ ಎರಡು ಗವಿಗಳ ಬಲಬದಿಯ ಮೇಲ್ಭಾಗದಲ್ಲಿ ಈ ಕಲ್ಲಾಸರೆ ಇದೆ. ಅಲ್ಲಿಗೆ ತಲುಪುವುದು ಸ್ವಲ್ಪ ಕಠಿಣವೆಂದೇ ಹೇಳಬಹುದು. ಇಲ್ಲಿ ಮನುಷ್ಯ, ಪಶು, ಮಂಡಲ ಮತ್ತು ಚುಕ್ಕೆಯಲ್ಲಿ ಬಾಣದ ಗುರುತಿನ ಚಿತ್ರಗಳಿವೆ. ಇವು ಒಂದರ ಬದಿಯಲ್ಲಿ ಒಂದು ರಚಿತವಾಗಿವೆ.

ಮನುಷ್ಯನ ಚಿತ್ರ ನಿಂತ ಭಂಗಿಯ ಛಾಯಾರೂಪದ್ದು, ಪರಸ್ಪರ ತ್ರಿಕೋನಗಳನ್ನು ಎದುರಾಗಿ ಒಂದರ ಮೇಲೊಂದರಂತೆ ಇರಿಸಿದ ರೀತಿಯ ದೇಹದ ರಚನೆ, ಕಾಲುಗಳು ಆಗಲಿಸಿ, ಕೈಗಳನ್ನು ದೇಹದಿಂದ ಅಂತರದಲ್ಲಿ ಇಳಿ ಬಿಡಲಾಗಿದೆ. ಅದರ ಬದಿಯಲ್ಲಿ ಉಳಿದೆಲ್ಲ ಚಿತ್ರಗಳಿಗಿಂತ ದೊಡ್ಡ ಪ್ರಮಾಣದ ಬಾಣದ ಮೊನೆಯ ಚುಕ್ಕೆ ಚಿತ್ರವಿದೆ. ಅದರ ಕೆಳಭಾಗದಲ್ಲಿ ಮುಖ ಮೇಲಕ್ಕೆ ಎತ್ತಿ ನಿಂತ ಪಶು(ಕರುವಿನ ಚಿತ್ರ), ಅದರ ಮೇಲ್ಭಾಗದಲ್ಲಿ ರಂಗೋಲಿ ರೀತಿಯ ವೃತ್ತಾಕಾರದ ಮಂಡಲ ಚಿತ್ರವಿದೆ.

ಈ ವೃತ್ತ ಮಂಡಲದಲ್ಲಿ ಇಪ್ಪತ್ತು ತ್ರಿಕೋನ ಬಾಗಗಳಿವೆ. ವೃತ್ತದಲ್ಲಿ ಅಡ್ಡ ಉದ್ದವಾಗಿ ಸಮಾನಾಂತರದಲ್ಲಿ ಎರಡೆರಡು ರೇಖೆಗಳನ್ನು ಎಳೆಯಲಾಗಿದ್ದು, ಹಾಗಾಗಿ ಒಂಭತ್ತು ಅಂಕಣಗಳು ಉಂಟಾಗಿವೆ. ಮಧ್ಯದ ಚೌಕ ಅಂಕಣದಲ್ಲಿ ಅದರ ನಾಲ್ಕು ಮೂಲೆಗಳಿಂದ ಪರಸ್ಪರ ಸಂಧಿಸುವ ಎರಡು ರೇಖೆಗಳನ್ನು ವಕ್ರವಾಗಿ ಎಳೆಯಲಾಗಿದೆ. ಅದರಿಂದ ಅಲ್ಲಿ ನಾಲ್ಕು ತ್ರಿಕೋನ ಭಾಗಗಳಾಗಿವೆ. ಮಧ್ಯದ ಅಂಕಣದ ನಾಲ್ಕು ಭುಜಗಳಿಂದ ನಾಲ್ಕು ಬದಿಯ ಅಂಕಣಗಳಲ್ಲಿ ತ್ರಿಕೋನಾಕಾರದ ರೇಖೆಗಳನ್ನು ಎಲೆಯಲಾಗಿದೆ ವೃತ್ತದ ನಾಲ್ಕು ಮೂಲೆಯ ನಾಲ್ಕು ಅಂಕಣಗಳನ್ನು ಹೊರತುಪಡಿಸಿ ಇದರಿಂದ ವೃತ್ತದಲ್ಲಿ ಒಟ್ಟು ಇಪ್ಪತ್ತು ತ್ರಿಕೋನ ಭಾಗಗಳನ್ನು ಸಿದ್ಧಗೊಂಡಿದೆ. ಈ ಮಂಡಲ ಚಿತ್ರ ಮೊದಲನೆಯ ಗವಿಯ ಮಂಡಲ ಚಿತ್ರದಂತಿದೆ.

## ಕಲ್ಲಾಸರೆ : ನಾಲ್ಕು

ಸೇತುವೆ ರಸ್ತೆಯ ಬಲಬದಿಯ ಬೆಟ್ಟದಲ್ಲಿ ರಸ್ತೆಗೆ ಹೊಂದಿಕೊಂಡಂತೆ ಈ ಕಲ್ಲಾಸರೆ ಇದೆ. ಅದರ ಛಾವಣಿ ಮತ್ತು ಗೋಡೆಗಳಲ್ಲಿ ಅನೇಕ ಮನುಷ್ಯಾಕೃತಿಗಳ, ಚೌಕ, ಆಯತ ಅಂಕಣಗಳ ಚಿಕ್ಕ ಚಿಕ್ಕ ಕಡ್ಡಿ(ರೇಖೆ) ಚಿತ್ರಗಳಿವೆ. ಬಿಳಿ ಬಣ್ಣವನ್ನು(ಸುಣ್ಣ) ಬಂಡೆಗೆಲ್ಲಾ ಬಳಿದು ಈ ರೀತಿಯ ಚಿತ್ರಗಳನ್ನು ಕೆಂಪು ಮತ್ತು ಬಿಳಿ(ಸುಣ್ಣ) ವರ್ಣದಲ್ಲಿ ಬಿಡಿಸಲಾಗಿದೆ. ಕೆಂಪು ಮನುಷ್ಯಾಕೃತಿಗಳಿಗಿಂತ ಬಿಳಿಯವು ಬಿನ್ನವಾಗಿವೆ. ಕೈಗಳಲ್ಲಿ ಖಡ್ಗ ಮತ್ತು ಡಾಲನ್ನು ಹಿಡಿದಂತೆ ಕೆಲ ಚಿತ್ರಗಳಿವೆ. ಕೆಲವು ಮನುಷ್ಯಕೃತಿಗಳ ಮುಖವು ತ್ರಿಕೋನದಂತಿದ್ದು, ಬಾಲಗಳಿವೆ ಪ್ರಾಯಶಃ ಇವು ವಾನರ ಅಥವಾ ಮಂಗಗಳ ಚಿತ್ರಗಳಿರಬೇಕು. ಒಂದೊಂದು ಚಿತ್ರವೂ ಒಂದೊಂದು ಭಂಗಿಯಲ್ಲಿರುವುದು ವಿಶೇಷ.

## ಕಲ್ಲಾಸರೆ : ಐದು

ಇದು ಮ್ಯಾಗೋಟಿ ದುರುಗಮ್ಮ ದೇವಾಲಯದ ಬೆಟ್ಟದಲ್ಲಿದೆ. ರಸ್ತೆ ಬದಿಗೆ ಹೊಂದಿಕೊಂಡಂತೆ ಈ ಕಲ್ಲಾಸರೆ ಇದೆ. ಇದರ ಛಾವಣಿಯ ತುಂಬ ಕೆಂಪು ಮತ್ತು ಬಿಳಿ ವರ್ಣದ ವೈವಿಧ್ಯಮವಾದ ಅನೇಕ ರಂಗೋಲಿ ಚಿತ್ರಗಳಿವೆ. ಇವುಗಳಲ್ಲಿ ಹಲವು ಒಂದೇ ರೀತಿಯಲ್ಲಿವೆ. ಕೆಲವು ಚಿತ್ರಗಳನ್ನು ಕೆಂಪು ಮತ್ತು ಬಿಳಿ ವರ್ಣ ಎರಡೂ ಸೇರಿ ಬಿಡಿಸಲಾಗಿದೆ. ರಂಗೋಲಿಯ ಒಳ ಭಾಗದಲ್ಲಿ ಬಿಳಿ ವರ್ಣದಿಂದ ತುಂಬಿ ಅಲಂಕಾರಗೊಳಿಸಲಾಗಿದೆ. ವೃತ್ತ, ಹೂ, ವಜ್ರಾಕೃತಿ, ಚಕ್ರ ಮುಂತಾದ ರೀತಿಯಲ್ಲಿ ರಂಗೋಲಿ ಚಿತ್ರಗಳಿವೆ.

## ಕಲ್ಲಾಸರೆ : ಆರು

ಈ ನೆಲೆ ದುರ್ಗಮ್ಮ ದೇವಾಲಯದ ಹಳೆಯ ಕಾಲುದಾರಿಯಲ್ಲಿ ಮೊದಲನೆಯ ಹಾಗೂ ಎರಡನೆಯ ಪ್ರವೇಶ ದ್ವಾರದ ನಡುವೆ ಇದೆ. ಇಲ್ಲಿ ಮೂರು ಸ್ವತಂತ್ರವಿರುವ ಗುಂಡುಗಳಲ್ಲಿ ಚಿತ್ರಗಳಿವೆ. ಗುಂಡುಗಳ ಮೂಲೆ ಭಾಗದಲ್ಲಿ ಕಲ್ಲು ತುಂಡಾಗಿ ಸಣ್ಣ ಪ್ರಮಾಣದ ಆಸರೆಗಳುಂಟಾಗಿವೆ. ಈ ಭಾಗದಲ್ಲಿ ಚಿತ್ರಗಳನ್ನು ಬಿಡಿಸಲಾಗಿದೆ.

ಗುಂಡು ಒಂದರಲ್ಲಿ ಸಾಲಾಗಿ ನಿಂತಿರುವ ಐದು ಪಕ್ಷಿಗಳ ಚಿತ್ರಗಳಿವೆ. ಕೋಳಿಗಳಂತೆ ತೋರುತ್ತವೆ. ಪ್ರಮಾಣದಲ್ಲಿ ಕ್ರಮವಾಗಿ ಹಿಂದಿನಿಂದ ಒಂದಕ್ಕಿಂತ ಒಂದು ದೊಡ್ಡದಿವೆ(೬.ಸೆಂ.ಮೀ. ದಿಂದ ೧೦ ಸೆಂ.ಮೀ.). ೨ ರೇಖೆಗಳಲ್ಲಿ ಪಕ್ಷಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ಮುಖ ಕೆಳಹೊಟ್ಟೆಯ ಭಾಗ ಒಂದು ರೇಖೆಯಲ್ಲಿ, ದೇಹದ ಮೇಲು ಭಾಗವನ್ನು ಮತ್ತೊಂದು ರೇಖೆಯಲ್ಲಿ ಚಿತ್ರಿಸಲಾಗಿದೆ. ಎರಡು

ಕಾಲು, ಪುಕ್ಕಗಳಿವೆ. ಕೆಳಬಾಗದಲ್ಲಿ ಎರಡು ಜಿಂಕೆಗಳ ರೇಖಾ ಚಿತ್ರಗಳಿವೆ(೧೨ ಸೆಂ.ಮೀ. x ೨೮ ಸೆಂ.ಮೀ). ಎರಡನೇ ಗುಂಡಿನಲ್ಲಿ ನಾಲ್ಕು ಜಿಂಕೆಗಳ ಮತ್ತು ಇಬ್ಬರು ಮನುಷ್ಯರ ಚಿತ್ರಗಳಿವೆ. ಮೂರು ಜಿಂಕೆಗಳು ರೇಖಾ ಚಿತ್ರಗಳಾಗಿವೆ. ಎರಡನೆಯದು ಮಾತ್ರ ದ್ವಿರೇಖೆಯಲ್ಲಿದೆ.

ಕೆಳಭಾಗದಲ್ಲಿ ಒಂದು ಅಪೂರ್ವ ಚಿತ್ರವಿದೆ. ಇಬ್ಬರು ಮನುಷ್ಯರು ಪಕ್ಷಿಯನ್ನು(ಪ್ರಾಯಶಃ ಬೇಟೆಯಾಡಿ) ಅದರ ಎರಡು ಪುಕ್ಕಗಳನ್ನು ಹಿಡಿದುಕೊಂಡು ಹೊರಟಿರುವ ದೃಶ್ಯ ಚಿತ್ರವಿದೆ. ಪಕ್ಷಿ ಚಿತ್ರವನ್ನು ಅದರ ರೆಕ್ಕೆ ಪುಕ್ಕಗಳ ಸಹಿತ ಸ್ಪಷ್ಟವಾಗಿ ಬಿಡಿಸಲಾಗಿದೆ. ಮನುಷ್ಯ ಚಿತ್ರಗಳು ಛಾಯಾರೂಪದ ಚಿತ್ರಗಳು.

ಮೂರನೇ ಗುಂಡಿನಲ್ಲಿ ಸುಣ್ಣ ಬಳಿದಿರುವುದರಿಂದ ಎರಡು ಸುಣ್ಣ ಪಟ್ಟಿಗಳ ನಡುವೆ ಒಂದು ಮನುಷ್ಯನ ಚಿತ್ರ ಕಾಣುತ್ತದೆ. ಇದು ಕೂಡ ಅಪರೂಪದ ಚಿತ್ರವಾಗಿದೆ. ಕತ್ತು ಮತ್ತು ದುಂಡು ತಲೆಯನ್ನು ಕೆಂಪು ವರ್ಣದಿಂದ ತುಂಬಲಾಗಿದೆ. ತಲೆಯ ಸುತ್ತಲೂ ಕೂದಲು ಹರಡಿದಂತೆ ರೇಖೆಗಳನ್ನು ಸುತ್ತಲೂ ಎಳೆಯಲಾಗಿದೆ. ಭುಜದಿಂದ ಮೊಣಕಾಲಿನವರೆಗೆ ಅಂಗಿಯನ್ನು ಧರಿಸಿದಂತೆ ತೋರುತ್ತದೆ. ಅದರ ಮೇಲ್ಭಾಗದಲ್ಲಿ ಅಂದರೆ ಎದೆಯ ಮೇಲೆ ಎರಡು ಭುಜಗಳ ನಡುವೆ ಸರಗಳಂತೆ ಅನೇಕ ರೇಖೆಗಳಿವೆ(ಈಗಿನ ಬ್ಯಾಂಡ್ ವಾದಕರ ಸಮವಸ್ತ್ರ ಅಂಗಿಯಂತಿದೆ). ತೋಳಿನಲ್ಲಿ ಭುಜದಿಂದ ಕೂಡ ಇಂಥ ಸರಗಳು(ರೇಖೆಗಳು) ಇವೆ. ಕೈಗಳು ಸುಣ್ಣದ ಪಟ್ಟಿಯಲ್ಲಿಮುಚ್ಚಿವೆ. ಕಾಲುಗಳು ಅಗಲವಾಗಿ ಊರಿದ್ದು, ಪಾದಗಳು ಇಲ್ಲ.

ನಾಲ್ಕನೇ ಗುಂಡು ಮೂರು ಗುಂಡುಗಳ ನೆಲೆಯಿಂದ ಅನತಿ ದೋರದಲ್ಲಿ ಕೋಟೆಯ ಒಳಗಿನ ಕನ್ನೆರಮ್ಮನ ಭಾವಿಯ ಹತ್ತಿರವಿದೆ. ಇಲ್ಲಿ ಗುಂಡಿನ ಮೇಲೆ ವಿಶಿಷ್ಟವಾದ ಮನುಷ್ಯಾಕೃತಿಯನ್ನು ಕೆಂಪು ಮತ್ತು ಬಿಳಿ ವರ್ಣದಲ್ಲಿ ದ್ವಿರೇಖೆಯಲ್ಲಿ ಚಿತ್ರಿಸಲಾಗಿದೆ. ಮನುಷ್ಯನೋರ್ವ ನಿಂತಿದ್ದು ಅವನ ಬಲಗೈ ಭುಜದ ಸಮಾನಾಂತರದಲ್ಲಿ ಮೇಲಕ್ಕೆ ಎತ್ತಿದೆ. ಅದರ ಹಸ್ತ ಕೈಗಿಂತ ದೊಡ್ಡದಿದ್ದು ಅಗಲಿಸಿ ಹಿಡಿಯಲಾಗಿದೆ. ಐದು ಬೆರಳುಗಳು ಸ್ಪಷ್ಟವಾಗಿವೆ. ಎಡ ಕೈ ಮೇಲಕ್ಕೆ ಎತ್ತಿದ್ದು ಅದೇ ಖಡ್ಗದಂತೆ ಮೇಲಕ್ಕೆ ಉದ್ದವಾಗಿದೆ. ಕಾಲುಗಳು ಸ್ಪಷ್ಟವಾಗಿ ಗೋಚರಿಸದು. ಕೆಂಪು ದ್ವಿರೇಖೆಯ ನಡುವೆ ಬಿಳಿ ವರ್ಣವನ್ನು ತುಂಬಲಾಗಿದೆ.

### ಕಲ್ಲಾಸರೆ : ಏಳು

ಚಿಂತಾಮಣಿ ಆಶ್ರಮದ ಹಿಂದೆ ನದಿಗೆ ಹೊಂದಿಕೊಂಡು ಕಲ್ಲಾಸರೆ ಇದ್ದು, ಅದರ ಛಾವಣಿ ಗೋಡೆಯಲ್ಲಿ ಆನೆಯ ಹಾಗೂ ಆಸರೆಯ ಗುಂಡಿನಲ್ಲಿ ಎತ್ತಿನ(ಹೋರಿ) ಚಿತ್ರಗಳಿವೆ.

ಆನೆ ಚಿತ್ರ ಪ್ರಮಾಣಬದ್ಧವಾಗಿಲ್ಲ(೦.೫೮ ಮೀ ಉದ್ದ ಮತ್ತು ೦.೯೦ ಮೀ ಎತ್ತರ). ದೇಹ ಆಯತಕಾರದಲ್ಲಿ ಬಹಳಷ್ಟು ಉದ್ದವಿದ್ದು, ಬೆನ್ನು ನೇರವಾಗಿದೆ. ಸೊಂಡಿಲು ದಪ್ಪವಾಗಿ ಕೆಳಗೆ ಇಳಿ ಬಿದ್ದಿದೆ. ಅದರ ತುದಿ ಮೇಲಕ್ಕೆ ಎತ್ತಿ ಅರೆ ವೃತ್ತಾಕಾರದಲ್ಲಿದೆ. ಕಾಲುಗಳನ್ನು ಮುಂದೆ ಮತ್ತು ಹಿಂದೆ ಒಂದರ ಪಕ್ಕ ಒಂದರಂತೆ ತೋರಿಸಲಾಗಿದೆ. ಇಡೀ ದೇಹವನ್ನು ವರ್ಣದಿಂದ ತುಂಬಲಾಗಿದೆ.

ಎತ್ತಿನ ಮೂರು ಚಿತ್ರಗಳು ಸ್ಪಷ್ಟವಾಗಿ ಕಾಣುತ್ತವೆ. ಸಾಲಾಗಿ ಮುಖವೆತ್ತಿ ನಿಂತಿವೆ. ಕೊಂಬು, ಮುಖ, ಕತ್ತು, ದೇಹ, ಇಣಿ, ಕಾಲು, ಬಾಲ, ಸಹಜವಾಗಿವೆ. ಮೊದಲನೆಯ ಎತ್ತಿನಲ್ಲಿ ೩.೫.ಸೆಂ.ಮೀ ಎತ್ತರ ೫೦ ಸೆಂ.ಮೀ. ಉದ್ದ ಶಿಶ್ನ ಮತ್ತು ಬಾಲದಲ್ಲಿ ಮೂರು ರೇಖೆಯ ಕುಚ್ಚನ್ನು ಬಿಡಿಸಲಾಗಿದೆ. ಬದಿಯಲ್ಲಿ ೨ ಕಲ್ಲಾಸರೆಗಳಿವೆ. ಒಂದರಲ್ಲಿ ಬಿಳಿ ವರ್ಣದ ಎರಡೂ ಚಿಕ್ಕ ಮನುಷ್ಯಾಕೃತಿಗಳು (೩ ಸೆಂ.ಮೀ. ಎತ್ತರ) ಮತ್ತು ಅರ್ಧವೃತ್ತಾಕಾರದ ರೇಖೆಯೊಂದಿಗೆ ಸೇರಿಸಿರುವ ಎರಡು ಚೌಕಗಳ ಚಿತ್ರಗಳಿವೆ. ಮತ್ತೊಂದರಲ್ಲಿ ಕೆಂಪುವರ್ಣದ ಅಷ್ಟದಳದ ರಂಗೋಲಿ ರೀತಿಯ ಚಿತ್ರವಿದೆ.

### ಕಲ್ಲಾಸರೆ : ಎಂಟು

ದುರ್ಗಾದೇವಿಯ ದೇವಾಲಯವಿರುವ ವಾಲಿಖಿಲ್ಲಾ ಬೆಟ್ಟದ ದಕ್ಷಿಣದ ಕಣಿವೆಯಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಕೆಂಪು ಬಿಳಿ ವರ್ಣದ ಅನೇಕ ಚುಕ್ಕೆಗಳನ್ನು ಇಡಲಾಗಿದೆ. ಅಲ್ಲದೇ ಮನುಷ್ಯರ, ಒಂದು ಆನೆಯ, ಎತ್ತಿನ ಚಿತ್ರಗಳಿವೆ.

ಮನುಷ್ಯ ಚಿತ್ರಗಳಲ್ಲಿ ಇಬ್ಬರ ಚಿತ್ರಗಳು ತಲೆಕೆಳಗಾಗಿ ರಚಿತವಾಗಿವೆ. ಆನೆಯ ಚಿತ್ರವೊಂದಿದೆ ನಾಲ್ಕು ಕಾಲುಗಳನ್ನು ಸಾಲಾಗಿ ಚಿತ್ರಿಸಲಾಗಿದೆ. ಹೊಟ್ಟೆ ಭಾಗವನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ. ಕಾಲುಗಳು ಕೂಡ ಅಸಮರ್ಪಕ ಪ್ರಮಾಣದಲ್ಲಿದೆ. ಅವು ಪಾದ ಭಾಗದಲ್ಲಿ ಮೇಲಿನಕ್ಕಿಂತ ಅಗಲವಾಗಿವೆ. ಬೆನ್ನು ಉಬ್ಬಾಗಿರದೇ ಸಮಮಟ್ಟದಲ್ಲಿದೆ. ತಲೆ, ಸೊಂಡಿಲು, ಬಾಲ ಸಹಜವಾಗಿವೆ. ಸೊಂಡಿಲ ಭಾಗದಲ್ಲಿ ಎರಡು ದಂತಗಳನ್ನು ತೋರಿಸಲಾಗಿದೆ. ಆನೆಯ ಮೇಲೆ ಒಬ್ಬ ಸವಾರನು (ಮಾವುತ?) ಕುಳಿತಿದ್ದು, ಇನ್ನೊಬ್ಬನು ಹಿಂದಿನ ಭಾಗದಲ್ಲಿ ಆನೆಯ ಮೇಲೆ ಏರುತ್ತಿರುವ ಚಿತ್ರಗಳಿವೆ.

ಮನುಷ್ಯ ಚಿತ್ರಗಳಲ್ಲಿ ಎರಡು ತಲೆ ಕೆಳಗಾಗಿ ಚಿತ್ರಿಸಲಾಗಿದೆ. ಒಂದು ಸಹಜ ರೀತಿಯಲ್ಲಿದೆ. ಇವುಗಳ ತಲೆ ದುಂಡಾಗಿದ್ದು, ದೇಹ ಆಯಾತಾಕಾರದಲ್ಲಿ ಇದೆ. ಕಾಲುಗಳು ನೇರವಾಗಿದ್ದು, ದ್ವಿರೇಖೆ ಹಾಗೂ ಏಕ ರೇಖೆಯಲ್ಲಿವೆ. ಕೈಗಳನ್ನು ಕೂಡ ಸರಳವಾಗಿ ರೇಖೆಯಲ್ಲಿ ಚಿತ್ರಿಸಲಾಗಿದೆ. ತಲೆ ಕೆಳಗಾಗಿ ಚಿತ್ರಿಸಿದ ಮನುಷ್ಯ ಜೋಡಿಯ ಬದಿಯಲ್ಲಿ ಒಂದು ರಥದ ಮಾದರಿಯ ಚಿತ್ರವಿದೆ. ಮಧ್ಯದಲ್ಲಿ

ಚೌಕ ಭಾಗವಿದೆ. ಅದರ ಕೆಳಗೆ ಗಾಲಿಯಾಕಾರದ ಎರಡು ಅರೆ ವೃತ್ತಗಳಿವೆ(ಚೌಕದ ರೇಖೆಗಳೇ ತಿರುಗಿ ಈ ವೃತ್ತ ರಚಿತವಾಗಿದೆ). ಈ ಚೌಕದ ಮೇಲಿನ ರೇಖೆಯೂ ಕೆಳ ರೇಖೆಗಿಂತ ಸ್ವಲ್ಪ ದೀರ್ಘವಾಗಿದೆ. ಇದರ ಮೇಲ್ಭಾಗದಲ್ಲಿ ತ್ರಿಕೋನಾಕಾರದಲ್ಲಿ ಗೋಪುರವಿದೆ. ಈ ಲಕ್ಷಣಗಳಿಂದ ಇದೊಂದು ರಥವಿರಬೇಕೆಂದು ತೋರುತ್ತದೆ. ಇದರ ಒಳ ಭಾಗವನ್ನು ಸಂಪೂರ್ಣ ಕೆಂಪು ವರ್ಣದಿಂದ ತುಂಬಲಾಗಿದೆ. ರಥ ಮಾದರಿಯ ಚಿತ್ರದ ಕೆಳಗೆ ಎತ್ತನ್ನು ಹೋಲುವ ಒಂದು ಪ್ರಾಣಿಯ ರೇಖಾ ಚಿತ್ರವಿದೆ.

ಇಲ್ಲಿ ಕೆಂಪು ಚುಕ್ಕೆಗಳ ನಡುವೆ ಬಿಳಿ ಚುಕ್ಕೆಗಳನ್ನು ಇರಿಸಲಾಗಿದೆ. ಹಾಗೂ ನಾಲ್ಕು ಚಿಕ್ಕ ಮನುಷ್ಯಾಕೃತಿಗಳ ಬಿಳಿ ಬಣ್ಣದ ಚಿತ್ರಗಳಿವೆ. ತೀರ ಸರಳವಾದ, ರೇಖಾ ಚಿತ್ರದಲ್ಲಿರುವ ಈ ರಚನೆಗಳಲ್ಲಿ ಬಾಲಗಳನ್ನು ತೋರಿಸಲಾಗಿದೆ. ಹಾಗಾಗಿ ಇವು ಮಂಗಗಳ ಚಿತ್ರಗಳೆನ್ನಬಹುದು.

ಕಲ್ಲಾಸರೆ ಬದಿಯ ಇಲ್ಲಿ ಒಂದು ಬಿಳಿ ಬಣ್ಣದ (ಸುಣ್ಣ?) ಮನುಷ್ಯಾಕೃತಿಯಿದೆ ತಲೆ, ತೆಳುವಾದ ಕತ್ತು, ಚೌಕಾಕಾರದ ದೇಹ ಅದೇ ಪ್ರಮಾಣದಲ್ಲಿ ನೇರವಾದ ಕಾಲುಗಳಿವೆ. ಬಲಗೈಯಿಂದ ಮೇಲಕ್ಕೆ ಎತ್ತಿದ್ದು ಕೈಯಲ್ಲಿ ಬಹುಶಃ ಖಡ್ಗವಿರಬೇಕು. ಸ್ಪಷ್ಟವಾಗುವುದಿಲ್ಲ. ಎಡಗೈಯಲ್ಲಿ ಡಾಲು ಇದೆ. ಸೊಂಟದ ಭಾಗದಲ್ಲಿ (ಎಡಬದಿಯಲ್ಲಿ) ಬಾಲದಂತಹ ರೇಖೆ ಇದೆ. ಬಿಳಿ ಬಣ್ಣದ ಈ ಆಕೃತಿಯ ಮೇಲೆ ಲಘುವಾಗಿ ಕೆಂಪು ವರ್ಣದ ಲೇಪನವಿದೆ.

ಈ ಚಿತ್ರದ ಬಲಗಾಲಿನ ಹತ್ತಿರ ಹಾಗೂ ಎಡಭಾಗದಲ್ಲಿ ಸುಣ್ಣದ ಎರಡು ರೇಖಾ ಚಿತ್ರಗಳಿವೆ. ಇವು ಮಂಗನ ಚಿತ್ರಗಳಾಗಿದ್ದು (ಅಂಡಾಕಾರದಲ್ಲಿ) ೨ ಕೈ, ಕಾಲು ಮತ್ತು ಬಾಲಗಳಿವೆ. ಕೈಗಳಲ್ಲಿ ಖಡ್ಗಗಳಿವೆ.

### ಕಲ್ಲಾಸರೆ : ಒಂಬತ್ತು

ಆನೇಗುಂದಿಯ ಉತ್ತರಕ್ಕೆ ಮ್ಯಾಗಲಮಠ ಗುಡ್ಡವಿದೆ. ಆ ಗುಡ್ಡದ ಪ್ರದೇಶದಲ್ಲಿ ೪ ಕಡೆ ಸಣ್ಣ, ಸಣ್ಣ ಚಿತ್ರಗಳಿವೆ.

ಮ್ಯಾಗಲ ಮಠ ಗುಡ್ಡದ ದಾರಿಯಲ್ಲಿ ಬೆಟ್ಟದ ಗುಂಡಿನಲ್ಲಿ ಕೆಂಪು ಬಣ್ಣದ ಮನುಷ್ಯ ಚಿತ್ರವಿದೆ. (೧೮ ಸೆಂ.ಮೀ ಎತ್ತರ) ಇದು ಛಾಯಾ ರೂಪದ್ದು, ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಡಾಲು ಹಿಡಿದು ನಿಂತ ಭಂಗಿಯಲ್ಲಿದೆ. ರುಂಡವಿಲ್ಲ, ಕತ್ತು ಇದೆ. ಸೊಂಟದ ಹಿಂದೆ ಬಾಲವಿದೆ. ಮೊದಲ ಚಿತ್ರದ ಗುಂಡಿನ ಎದುರಿನ ಗವಿಯಲ್ಲಿ ಉದ್ದವಾಗಿರುವ ಡಮರು ರೀತಿಯ ಕೆಂಪು ರೇಖಾ ಚಿತ್ರವಿದೆ.

ತೇರು ಬೀದಿ ಎದುರಿನಲ್ಲಿ (ಈಗ ಗದ್ದೆ) ಸುಮಾರು ೩೦ ಮೀ. ಎತ್ತರದಲ್ಲಿ ಒಂದು ಗವಿ ಇದೆ. ಅದರಲ್ಲಿ ಒಂದರ ಮೇಲೆ ಒಂದಿರು ೩ ವಜ್ರಾಕೃತಿಗಳ ರೇಖಾ ಚಿತ್ರವಿದೆ. ಕೆಳಗಿನದು ಅರ್ಧ ಭಾಗದಲ್ಲಿದೆ. ಮಧ್ಯದ್ದು ದೊಡ್ಡದಿದೆ. ಅದರಲ್ಲಿ ಮತ್ತು ಮೇಲಿನದರಲ್ಲಿ ಮಧ್ಯ ರೇಖೆ ಇದೆ. ಮಧ್ಯದ ರೇಖೆಯ ಎರಡೂ ಬದಿಯಲ್ಲಿ ಒಂದೊಂದು ಚುಕ್ಕೆಗಳಿವೆ.

ಮೇಲಿನ ಗವಿಕೆಳಗೆ ಇನ್ನೊಂದು ಗವಿಯಲ್ಲಿ ಬಿಳಿ ಮತ್ತು ಕೆಂಪು ಬಾಹ್ಯ ರೇಖೆಯ ಚೌಕ ಪಟ್ಟಿಇದೆ. (೩ ಸೆಂ.ಮೀ) ಅದರಲ್ಲಿ ೩ ಉದ್ದ ರೇಖೆಗಳಿವೆ. ಮೇಲೆ ಚಂದ್ರ, ಸೂರ್ಯರ, ಮನುಷ್ಯ ಆಕೃತಿಯ ಕಡ್ಡಿ ರೂಪದ ಚಿತ್ರಗಳಿವೆ.

## ಅಂಜನ ಹಳ್ಳಿ

ಗಂಗಾವತಿ ಶಿವಪುರ ರಸ್ತೆಯಲ್ಲಿ ರಾಂಪುರ ಕ್ರಾಸ್‌ನಿಂದ ಮುಂದೆ ೧/೨ ಕಿ.ಮೀ ದೂರದಲ್ಲಿ ಈ ಗ್ರಾಮವಿದೆ. ಇಲ್ಲಿ ಒಟ್ಟು  ಎರಡು ಕಲ್ಲಾಸರೆಗಳಿವೆ.

### ಕಲ್ಲಾಸರೆ : ಒಂದು

ಪಂಪಾಸರೋವರ ತಿರುವಿಗೆ ಸಿಗುವ ಅಂಜನಹಳ್ಳಿ ರಸ್ತೆ ಕ್ರಾಸ್‌ನ ಎದುರಿಗೆ ಬೆಟ್ಟವೊಂದು ಇದೆ. ಅದರ ಎಡಬದಿಯಲ್ಲಿ ಈ ಕಲ್ಲಾಸರೆ ಇದೆ.

ಇಲ್ಲಿ ೬.೪೨ ಮೀ. ಅಳತೆಯ ಒಂದು ದೊಡ್ಡ ದೋಣಿ (ಹಡಗು) ಯ ರೇಖಾಚಿತ್ರವಿದೆ. ಅದರ ಮಧ್ಯ ಭಾಗದಲ್ಲಿ ೧ ಮೀ. ಎತ್ತರಾಗಿದ್ದು ಎರಡು ತುದಿಗಳು ಚೂಪಾಗಿವೆ. ದೋಣಿಯ ಮೈಭಾಗದಲ್ಲಿ ಜಿಂಕೆ, ನವಿಲು, ಎದುರಾಗಿ ನಿಂತ ಜೋಡಿ ಎತ್ತುಗಳ ಚಿಕ್ಕ ಚಿಕ್ಕ ಚಿತ್ರಗಳಿವೆ. ದೋಣಿಯ ಮೇಲ್ಭಾಗದಲ್ಲಿ ಒಂದು ಗೂಳಿಯ, ಒಂದು ನವಿಲಿನ ಚಿತ್ರಗಳು ಮತ್ತು ದೋಣಿಯ ಕೆಳಗೆ (ಎಡಭಾಗ) ಎತ್ತುಗಳ ಚಿತ್ರಗಳಿವೆ.

### ಕಲ್ಲಾಸರೆ : ಎರಡು

ಒಂದನೆಯ ಕಲ್ಲಾಸರೆಯ ಬೆಟ್ಟದ ಹಿಂಭಾಗದಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಗೂಳಿ ಮತ್ತು ಆನೆಯ ಕೆಂಪು ವರ್ಣದ ಚಿತ್ರಗಳಿವೆ. ಇವು ಛಾಯಾ ರೂಪದ ಚಿತ್ರಗಳು. ದೊಡ್ಡ ಕೋಡುಗಳನ್ನು ಇಣಿಯನ್ನು ಹೊಂದಿರುವ ಗೂಳಿಯ ಚಿತ್ರ ಗಾಂಭೀರ್ಯಕ್ಕೆ ನಿದರ್ಶನವಾಗಿದೆ. ಆನೆ ಚಿತ್ರ ಸಹಜವಾಗಿದೆ.

# ಮಲ್ಲಾಪುರ

ಗಂಗಾವತಿ ಆನೆಗುಂದಿ ರಸ್ತೆಯಲ್ಲಿ ಸಂಗಾಪುರದಿಂದ ೪ ಕಿ.ಮೀ ಒಳಗೆ ಈ ಗ್ರಾಮವಿದೆ. ಇಲ್ಲಿ ಒಟ್ಟು ಹದಿನಾಲ್ಕು ಕಲ್ಲಾಸರೆಗಳಿವೆ.

## ಕಲ್ಲಾಸರೆ : ಒಂದು

ಇದು ಮಲ್ಲಾಪುರದಿಂದ ಉತ್ತರಕ್ಕೆ ಎರಡು ಕಿ.ಮೀ ದೂರದಲ್ಲಿ ಅರವಟ್ಟಿಗೆ ದಾರಿಯ ಬಲಬದಿಯ ಬೆಟ್ಟದಲ್ಲಿದೆ. ಬೆಟ್ಟದ ಮಧ್ಯಬಾಗದಲ್ಲಿ ಈ ಕಲ್ಲಾಸರೆಯ ಬಂಡೆ ಹೊರ ಚಾಚಿದೆ. (ದಕ್ಷಿಣಕ್ಕೆ ಮುಖ) ಅದರ ಭಾವಣಿಯಲ್ಲಿ ನಗ್ನ ಮನುಷ್ಯನ ಹಾಗೂ ಹಿಂಬದಿಯ ಕಲ್ಲಾಸರೆಯಲ್ಲಿ ಕೆಂಪು ವರ್ಣ ಚಿತ್ರಗಳಿವೆ.

ನಗ್ನ ಪುರುಷ ಎರಡು ಕಾಲುಗಳನ್ನು ಅಗಲಿಸಿ, ಕೈಗಳನ್ನು ಮೇಲಕ್ಕೆತ್ತಿ ನಿಂತಿದ್ದಾನೆ. ಮುಂಗೈಗಳು, ಪಾದಗಳು ಇಲ್ಲ. ಎರಡೂ ತೊಡೆಗಳ ಮಧ್ಯ ವೃಷಣ, ಶಿಶ್ನ ತೋರಿಸಲಾಗಿದೆ. ಮುಖ, ಕತ್ತು, ಕೈ, ದೇಹ, ಕಾಲು, ವೃಷಣ, ಶಿಶ್ನಗಳ ಮೇಲೆಲ್ಲಾ ರೇಖೆಗಳಿವೆ. ದೇಹದಲ್ಲಿ ಎರಡೂ ಕಂಕುಳದಿಂದ ವಿರುದ್ಧವಾಗಿ ಸೊಂಟದವರೆಗ ರೇಖೆಗಳನ್ನು ಎಳೆದಿದ್ದು ಅದರಿಂದ ದೇಹದಲ್ಲಿ ಆಲ್ಕು ತ್ರಿಕೋನಾಕಾರದ ಭಾಗಗಳಾಗಿವೆ. ಅದರಲ್ಲಿ (ತ್ರಿಕೋನಾಕಾರದಲ್ಲಿ) ಅನೇಕ ರೇಖೆಗಳನ್ನು ಹಾಕಲಾಗಿದೆ. ತಲೆಯಲ್ಲಿ ಇದೇ ರೀತಿ ಇದೆ. ತೊಡೆ ಕಾಲುಗಳಲ್ಲಿ ಸಂಕೀರ್ಣವಾದ ರೇಖೆಗಳಿವೆ. ಇದರಿಂದ ಇದೊಂದು ಮೈಮೇಲೆ ರೇಖೆಗಳನ್ನು ಬಳಿದುಕೊಂಡು ಮಾತ್ರಿಕ ವಿದಿಯ ನೃತ್ಯದಲ್ಲಿ ತೊಡಗಿರುವ ಪುರುಷನ ಚಿತ್ರವೆಂದು ತಿಳಿಯಬಹುದು.

ಅದೇ ಕಲ್ಲಾಸರೆಯ ಉತ್ತರ ಬದಿಯಲ್ಲಿ ಪಶ್ಚಿಮಕ್ಕೆ ಮುಖವಿರುವ ಮತ್ತೊಂದು ಭಾಗದಲ್ಲಿ ಕೆಂಪು ವರ್ಣ ಚಿತ್ರಗಳಿವೆ. (ಚಿತ್ರದ ಭಾಗ ೨.೫೫ ಮೀ. ಅಗಲ ೧.೪೫ ಮೀ. ಎತ್ತರ) ಇಲ್ಲಿ ವಿಚಿತ್ರವಾದ ಎರಡು ಮನುಷ್ಯಾಕೃತಿಗಳು, ಎರಡು ಎತ್ತು, ಗುರುತಿಸಲಾಗದ ಇನ್ನೊಂದು ಪ್ರಾಣಿ ಮತ್ತು ಕೆಲ ಅಸ್ಪಷ್ಟ ಚಿತ್ರಗಳಿವೆ.

ಮನುಷ್ಯ ಚಿತ್ರಗಳಲ್ಲಿ ಮೊದಲನೆಯದು ಕಾಲುಗಳನ್ನು ಅಗಲಿಸಿ, ನಿಂತ ಪ್ರಾಯಶಃ ನಗ್ನ ಮನುಷ್ಯನದು. ಲಂಬ ಆಯತಾಕಾರದ ದೇಹ ಭುಜದಿಂದ ಸ್ವಲ್ಪವೇ ಹೊರಬಂದ ಕೈಗಳು, ಸೊಂಟದಿಂದ ಸ್ವಲ್ಪ ಹೊರಬಂದ ಅಗಲಿಸಿ ನೆಲಕ್ಕೆ ಊರಿರುವ ಕಾಲುಗಳು, ಅವುಗಳ ನಡುವೆ ಮುಂಡದಷ್ಟು ಅಗಲದ ಭಾಗವಿದೆ. ಅದು ಶಿಶ್ನವನ್ನು ನಿದರ್ಶಿಸುತ್ತಿರಬೇಕು. ಮೇಲೆ ಸ್ವಲ್ಪ

ಉದ್ದವಿರುವ ತಲೆ, ದೇಹ ಮತ್ತು ಕೆಳಗಿನ ಅರೆ ವೃತ್ತದ ಭಾಗದಲ್ಲಿ ಗುಣಾಕಾರ ಚಿನ್ಹದ ರೀತಿಯಲ್ಲಿ ರೇಖೆಗಳನ್ನು ಹಾಕಲಾಗಿದೆ.

ನಗ್ನ ಮನುಷ್ಯನ ಬಳಿ ಮತ್ತೊಂದು ವಿಚಿತ್ರ ರೀತಿಯ ವ್ಯಕ್ತಿಯ ಚಿತ್ರವಿದೆ. ತಲೆ ಅಸ್ಪಷ್ಟವಾಗಿದ್ದು, ದುಂಡಾಕಾರದಲ್ಲಿರಬೇಕೆನಿಸುತ್ತದೆ. ಅದಕ್ಕೆ ಒಂದು ಸರಳ ರೇಖೆಯ ಕತ್ತು. ಕತ್ತಿನ ಕೆಳಗೆ ಎರಡೂ ಬದಿಗೆ ಇಳಿಜಾರಾದ ಭುಜಗಳು, ಭುಜದಿಂದ ಎರಡೂ ಬದಿ ಮೇಲಕ್ಕೆತ್ತಿದ ಕೈಗಳು ಇವೆ. ಭುಜದಿಂದ ಎರಡೂ ಬದಿ ರೇಖೆಗಳಿಗೆ ಹೊಂದಿಕೊಂಡು ಕೆಳಗೆ ದಪ್ಪವಾದ ತೊಡೆಗಳು, ತೆಳುವಾದ ಕಾಲುಗಳಿವೆ. ಪಾದಗಳಿಲ್ಲ, ತೊಡೆಗಳಲ್ಲಿ ರೇಖೆಗಳಿವೆ. ಎಡಗೈಯಲ್ಲಿ ಹಸ್ತವಿದೆ. ಈ ವ್ಯಕ್ತಿಯ ಚಿತ್ರ ಬಾದಾಮಿಯ, ಹಿರೇಗುಡ್ಡದ ಸೂಕ್ಷ್ಮಶಿಲಾಯುಗದ ಮನುಷ್ಯ ಚಿತ್ರಗಳನ್ನು ಹೋಲುತ್ತದೆ. ಎರಡು ಎತ್ತಿನ ಚಿತ್ರಗಳ ಮತ್ತೊಂದು ಪ್ರಾಣಿಯ ಚಿತ್ರ ಅಸ್ಪಷ್ಟವಿದೆ. ಮಲ್ಲಾಪುರದ ಅರವಟಿಗೆ ಪ್ರದೇಶದಲ್ಲಿ ಈ ಕಲ್ಲಾಸರೆ ಇದೆ. ವಿವಿಧ ಶೈಲಿಯ ಗೂಳಿಗಳ ಕೆಂಪು ವರ್ಣಚಿತ್ರಗಳಿವೆ.

### ಕಲ್ಲಾಸರೆ : ಎರಡು

ಒಂದನೇ ಗೂಳಿಯದು ಛಾಯಾ ರೂಪದ ಚಿತ್ರ. ಹಿಂದಿನ ಪುಷ್ಠಭಾಗ, ಮುಂದಿನ ಎದೆ ಭಾಗದೊಂದಿಗೆ ಕಾಲುಗಳ ತ್ರಿಕೋನಾಕಾರದಲ್ಲಿವೆ. ಹೊಟ್ಟೆ ತೀರ ತೆಳುವಾಗಿದೆ. ಕೋಡುಗಳು U ಆಕಾರದಲ್ಲಿ ದೊಡ್ಡದಾಗಿದೆ. ಬಾಲ ದೊಡ್ಡದಾಗಿದೆ.

ಎರಡನೇ ಗೂಳಿ ಚಿತ್ರ ವಿಶಿಷ್ಠ ರಚನೆ. ಉದ್ದವಾದ ದೇಹ ಮುಂಬಾಗಿನ ದೊಡ್ಡ ಕೋಡುಗಳು, ದೊಡ್ಡ ಇಣಿ, ಅಸಹಜವಾದ ದೊಡ್ಡ ಬಾಲ ಅದಕ್ಕೆ ಹಸ್ತದಂತಿರುವ ಕುಚ್ಚು (ಐದು ರೇಖೆಗಳಿವೆ) ನಾಲ್ಕು ಕಾಲುಗಳು ಇದರ ಲಕ್ಷಣಗಳು. ಸಾಮಾನ್ಯವಾಗಿ ಎಲ್ಲಾ ಗೂಳಿಗಳ ಚಿತ್ರಗಳಿಗಿಂತ ಇದು ಭಿನ್ನವಾಗಿದೆ. ಇದು ಕೂಡಾ ಛಾಯ ರೂಪದ್ದು.

ಉದ್ದ ಕತ್ತಿನ ಎತ್ತರದ ಪ್ರಾಣಿಯ ಚಿತ್ರವೊಂದು ಇಲ್ಲಿದೆ. ನಾಲ್ಕು ಕಾಲುಗಳು ಎತ್ತರವಾಗಿವೆ. ತೆಳುವಾದ ಕತ್ತಿದೆ. ಮುಖ ಕುದುರೆಯದಂತಿದ್ದು ತಲೆಯ ಮೇಲೆ ಸಾಲಾಗಿ ತುರಾಯಿಗಳಿವೆ. ದಪ್ಪ ಬಾಲವಿದೆ. ಮೇಲೆ ಸವಾರನೊಬ್ಬ ಕುಳಿತಂತಿದ್ದು ಈ ಚಿತ್ರ ಅಸ್ಪಷ್ಟವಿದೆ.

### ಕಲ್ಲಾಸರೆ : ಮೂರು

ಇದು ಮಲ್ಲಾಪುರದಿಂದ ದಕ್ಷಿಣಕ್ಕೆ ಸುಮಾರು ೩ ಕಿ.ಮೀ. ದೂರದ ಬೆಟ್ಟದಲ್ಲಿದೆ. ಇದೊಂದು ಅತ್ಯಂತ ವಿಸ್ತಾರವಾದ ನೈಸರ್ಗಿಕ ಗುಹೆ, ಬೃಹತ್ತಾದ ಕಲ್ಲು ಚಪ್ಪಡಿಯೊಂದು ದೊಡ್ಡ ಕಲ್ಲುಗಳ

ಮೇಲೆ ಚಾಚಿದ್ದು, ಕೆಳಗೆ ವಿಶಾಲವಾದ ಗವಿಯುಂಟಾಗಿದೆ. ಕಲ್ಲು ಚಪ್ಪಡಿಯ ವಿಶಾಲವಾದ ಛಾವಣಿಯಲ್ಲಿ ದೊಡ್ಡ ಅಳತೆಯ ಅನೇಕ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳಿವೆ.

ಇಲ್ಲಿಯ ಚಿತ್ರಗಳನ್ನು ಎರಡು ಭಾಗಗಳಲ್ಲಿ ವಿಂಗಡಿಸಬಹುದು. ದಕ್ಷಿಣ ಭಾಗ ಮತ್ತು ಉತ್ತರ ಭಾಗ, ದಕ್ಷಿಣ ಭಾಗದಲ್ಲಿ ಎರಡು ಜೋಡಿ ದಂಪತಿಗಳ, ನಾಲ್ಕು ಬಿಡಿ ಮನುಷ್ಯರ, ಒಂದು ಹಂದಿ, ಒಂದು ಜಿಂಕೆ ಮತ್ತು ಒಂದು ಸಾರಂಗದ ಚಿತ್ರಗಳಿವೆ. ಉತ್ತರ ಭಾಗದಲ್ಲಿ ಎರಡು ಕೋಣ, ಹಂದಿ, ನವಿಲು, ಮೀನ ಮತ್ತು ಗಡಿದ ಒಂದೊಂದು ಚಿತ್ರಗಳಿವೆ. ಇಲ್ಲಿ ಒಟ್ಟು ಮುಷ್ಯರ ಆರು ಬಿಡಿ ಚಿತ್ರಗಳಿವೆ.

**ಮನುಷ್ಯ ಚಿತ್ರ ಒಂದು** (ಎತ್ತರ ೦.೫೫ ಮೀ ಅಗಲ ೦.೩೭ ಮೀ.) : ಕಾಲುಗಳನ್ನು ಅಗಲಿಸಿ ನಿಂತ ಪುರುಷನೊಬ್ಬನು ತನ್ನ ಎರಡೂ ಕೈಗಳು ಕೆಳಗೆ ಇಳಿಬಿದ ಹಸ್ತುಗಳು ಸೊಂಟದ ಭಾಗದಲ್ಲಿ ಸೇರಿಕೊಂಡಿವೆ. ಕಾಲುಗಳು ತೊಡೆ ಭಾಗದಿಂದ ಮೊಣಕಾಲಿನವರೆಗೆ ಕ್ಷೀಣಿಸುತ್ತಾ ಹೋಗಿ ಅಲ್ಲಿಂದ ಪಾದದವರೆಗೆ ಕಡ್ಡಿಯಂತೆ ತೆಳುವಾಗಿವೆ. ಮೈಮೇಲೆ ಭುಜದ ಎರಡೂ ಬದಿಯಿಂದ ಕೆಳಗಿಳಿಯುವ ರೇಖೆಗಳು ಹೊಟ್ಟೆ ಭಾಗದಿಂದ ಹಾದು ಕೆಳ ತೊಡೆಗೆ ಸೇರಿವೆ.

**ಮನುಷ್ಯ ಚಿತ್ರ ಎರಡು** (ಎತ್ತರ ೧ ಮೀ. ಅಗಲ ೦.೬೩): ಎರಡೂ ಕಾಲುಗಳನ್ನು ಅಗಲಿಸಿ ನಿಂತ ಮನುಷ್ಯನ ಚಿತ್ರವಿದು. ತಲೆ ದುಂಡಾಗಿದೆ. ಭುಜ ಅಗಲವಾಗಿದೆ, ಎರಡೂ ಕೈಗಳು ಕೆಳಗೆ ಇಳಿ ಬಿದ್ದು, ಹಸ್ತಗಳು ಸೊಂಟದ ಭಾಗದಲ್ಲಿ ಸೇರಿಕೊಂಡಿವೆ. ಕಾಲುಗಳು ತೊಡೆ ಭಾಗದಿಂದ ಮೊಣಕಾಲಿನವರೆಗೆ ಕ್ಷೀಣಿಸುತ್ತಾ ಹೋಗಿ ಅಲ್ಲಿಂದ ಪಾದದವರೆಗೆ ಕಡ್ಡಿಯಂತೆ ತೆಳುವಾಗಿದೆ. ಮೈಮೇಲೆ ಭುಜದ ಎರಡೂ ಬದಿಯಿಂದ ಕೆಳಗಿಳಿಯುವ ರೇಖೆಗಳು ಹೊಟ್ಟೆ ಭಾಗದಿಂದ ಹಾದು ಕೆಳ ತೊಡೆಗೆ ಸೇರಿವೆ.

**ಮನುಷ್ಯ ಚಿತ್ರ ಮೂರು** (ಎತ್ತರ ೨.೪೫ ಮೀ.): ಇದು ದೊಡ್ಡ ಚಿತ್ರವಾಗಿದೆ. ವ್ಯಕ್ತಿ ಪಾರ್ಶ್ವವಾಗಿ ನಿಂತ ಚಿತ್ರ ಇದಾದ್ದರಿಂದ ಒಂದು ಕಾಲು ಮತ್ತು ಒಂದು ಕೈ ಮಾತ್ರ ಇದೆ. ದುಂಡುತಲೆ, ತೆಳವಾದ ಎತ್ತರ ಕತ್ತುಗಳಿವೆ, ಕಾಲು ಸ್ವಲ್ಪ ಡೊಂಕಾಗಿದೆ. ಮೈಮೇಲೆ ಅರೆ ವೃತ್ತಾಕಾರದ ಲಂಬರೇಖೆಗಳು ಅವುಗಳನ್ನು ಛೇದಿಸುವ ಅಡ್ಡರೇಖೆಗಳಿವೆ.

**ಮನುಷ್ಯ ಚಿತ್ರ ನಾಲ್ಕು** (ಎತ್ತರ ೧.೬೬ ಮೀ. ಅಗಲ ೦.೯೪ ಮೀ.): ಇದು ಎಲ್ಲಾ ಮನುಷ್ಯ ಚಿತ್ರಗಳಿಗಿಂತ ಭಿನ್ನವಾಗಿದೆ. ಕಾಲುಗಳನ್ನು ಅಗಲಿಸಿ ನಿಂತಿದ್ದಾನೆ. ದುಂಡಾದ ತಲೆ ಇದೆ. ಇಲ್ಲಿ ತಲೆಯ

ಸುತ್ತಲೂ ತಲೆಯಿಂದ ಹೊರಟ ರೇಖೆಗಳಿವೆ. ಕುತ್ತಿಗೆ ತೀರ ತೆಳುವಾಗಿದೆ. ಎರಡು ಕೈಗಳನ್ನು ಮೇಲಕ್ಕೆತ್ತಿದೆ. ಈ ಎರಡು ಕೈಗಳನ್ನು ಮತ್ತು ಭುಜವನ್ನು ಒಂದೇ ಪಟ್ಟಿಕೆಯಲ್ಲ ರಚಿಸಲಾಗಿದೆ. ಹಸ್ತ ವೃತ್ತಾಕಾರದ ಇಲ್ಲವೇ, ದುಂಡಾಗಿದೆ. ಅದರಿಂದ ಬೆರಳು ಸೂಚಕವೋ ಎಂಬಂತೆ ತಲಾ ಆರು ಗೆರೆಗಳಿವೆ. ದೇಹದಲ್ಲಿ ಮೇಲೆ ಕೆಳಗೆ ಪರಸ್ಪರ ಎದುರಾದ ತ್ರಿಕೋನಾಕಾರದ ರೇಖೆಗಳು ಬದಿಯಲ್ಲಿ ಅರೆ ವೃತ್ತಾಕಾರದ ಲಂಬ ರೇಖೆಗಳಿವೆ. ಕಾಲುಗಳನ್ನು ಅಗಲಿಸಿದ್ದು, ತೊಡೆ ಮತ್ತು ಮೊಣಕಾಲ ಕೆಳಗಿನ ಮೀನಖಂಡ ಭಾಗಗಳನ್ನು ಸ್ಪಷ್ಟವಾಗಿ, ಪ್ರಮಾಣಬದ್ಧವಾಗಿಯೂ ರಚಿಸಲಾಗದೆ. ಕಾಲುಗಳಲ್ಲಿ ಉದ್ದಕ್ಕೂ ರೇಖೆಗಳಿವೆ. ಪಾದಗಳು ಸ್ಪಷ್ಟವಾಗಿಲ್ಲ.

**ಮನುಷ್ಯ ಚಿತ್ರ ಐದು** (ಎತ್ತರ ೩ ಮೀ. ಅಗಲ ೧.೮೦ ಮೀ): ಇದು ದಕ್ಷಿಣ ಭಾಗದಲ್ಲಿದ್ದು, ಎಲ್ಲಾ ಮನುಷ್ಯ ಚಿತ್ರಗಳಲ್ಲಿಯೇ ಅತ್ಯಂತ ದೊಡ್ಡದಾಗಿದೆ. ದೇಹ ಕೂಡ ದಷ್ಟಪುಷ್ಟವಾಗಿದೆ. ಕಾಲುಗಳನ್ನು ಅಗಲಿಸಿದ್ದು, ಕೈಗಳನ್ನು ಮೇಲಕ್ಕೆತ್ತಿದೆ. ಮೈಮೇಲೆ ರೇಖೆಗಳಿವೆ.

**ಮನುಷ್ಯ ಚಿತ್ರ ಆರು :** ಕೋಣ ಚಿತ್ರದ ಮುಂದಿನ ಕಾಲಿನ ಹತ್ತಿರ ಈ ಚಿಕ್ಕ ಮಾನವ ಚಿತ್ರವಿದೆ. ಇದು ಕೂಡ ಕಾಲುಗಳನ್ನು ಅಗಲಿಸಿ ನಿಂತಿದ್ದು, ಆದರೆ ಕೈಗಳನ್ನು ಮೇಲಕ್ಕೆತ್ತಿಲ್ಲ ಬದಲಿಗೆ ಭುಜದ ನೇರದಲ್ಲಿ ಚಾಚಾಲಾಗಿದೆ. ಮೈತುಂಬ ರೇಖೆಗಳಿವೆ. ದಕ್ಷಿಣ ಭಾಗದಲ್ಲಿ ಎರಡೂ ಜೋಡಿ ದಂಪತಿಗಳ ಚಿತ್ರಗಳಿವೆ. ಸಾರಂಗ ಚಿತ್ರದ ಮೇಲ್ಭಾಗದಲ್ಲಿ ದಂಪತಿಗಳ ಜೋಡಿ ಚಿತ್ರಗಳಿವೆ. ಸ್ತ್ರೀ ನಿಂತ ಪಾರ್ಶ್ವದ ಚಿತ್ರವಾಗಿದ್ದು (ಎತ್ತರ ೦.೬೮ ಮೀ ಅಗಲ ೦.೩೬ ಮೀ) ಕಾಲುಗಳನ್ನು ಸ್ವಲ್ಪ ಮಡಚಿ ನಿಂತ ಭಂಗಿಯಲ್ಲಿದೆ. ಹೊಟ್ಟೆ ಸ್ವಲ್ಪ ಉಬ್ಬಿದೆ (ಗರ್ಭಿಣಿ?) ಸ್ತನವನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಕೈಯನ್ನು ಮೇಲಕ್ಕೆತ್ತಿದೆ. ಪುರುಷನ ಚಿತ್ರವು (ಎತ್ತರ ೦.೬೮ ಮೀ ಅಗಲ ೦.೩೬ ಮೀ) ಕೂಡ ಕಾಲುಗಳನ್ನು ಡೊಂಕಾಗಿ ಅಗಲಿಸಿ ನಿಂತಿದೆ. ಸೊಂಟವನ್ನು ಸ್ವಲ್ಪ ಭಾಗಿಸಿ, ಕೈಗಳನ್ನು ಮೇಲಕ್ಕೆತ್ತಿದೆ. ಮೈತುಂಬಾ ರೇಖೆಗಳಿವೆ. ಇದು ಸ್ತ್ರೀ ಚಿತ್ರಕ್ಕಿಂತ ಕೆಳಮಟ್ಟದಲ್ಲಿದೆ.

**ದಂಪತಿ ಚಿತ್ರ ಒಂದು :** ದಂಪತಿಗಳ ಈ ಚಿತ್ರವು ಮೊದಲಿನಕ್ಕಿಂತ ಅಳತೆಯಲ್ಲಿ ದೊಡ್ಡದಿದೆ. ಪುರುಷನ ಚಿತ್ರಕ್ಕಿಂತ ಸ್ತ್ರೀ ಚಿತ್ರವು ದೊಡ್ಡದಾಗಿದೆ. (ಎತ್ತರ ೧.೭೬ ಮೀ.) ಸ್ತ್ರೀಯ ಪಾರ್ಶ್ವದ ಚಿತ್ರ ಇದಾಗಿದ್ದು ಒಂದು ಕಾಲು, ಒಂದು ಕೈಗಳಿವೆ. ಸ್ತನವೂ ದೊಡ್ಡದಿದೆ. ಕಾಲನ್ನು ಸ್ವಲ್ಪ ಮಣಿಸಿದೆ. ಕೈಯನ್ನು ಸ್ವಲ್ಪ ಮೇಲಕ್ಕೆ ಎತ್ತಿದೆ. ಮೈತುಂಬಾ ಕಾಲುಗಳಲ್ಲಿ ತ್ರಿಕೋನದ, ಅರೆ ವೃತ್ತದ ರೇಖೆಗಳಿವೆ.

**ದಂಪತಿ ಚಿತ್ರಗಳ ಜೊತೆಗೆ :** ಇಲ್ಲಿ ಜಿಂಕೆ, ಸಾರಂಗ, ಕೋಣ, ನವಿಲು ಮತ್ತು ಮೀನಿನ ಒಂದೊಂದು ಹಾಗೂ ಎರಡು ಹಂದಿ ಚಿತ್ರಗಳಿವೆ.

ಜಿಂಕೆಯ ಚಿತ್ರವು ಮುಖ ಮುಂದಿನ ಕಾಲನ್ನು ಒಳಗೊಂಡ ಅರ್ಧ ದೇಹ ಮಾತ್ರ ಸ್ಪಷ್ಟವಾಗಿಉಳಿದಿದೆ. ಮೈಮೇಲೆ, ಕತ್ತಿನ ಭಾಗದಲ್ಲಿ ಚಿಕ್ಕ ಚಿಕ್ಕ ಉದ್ದ ಪಟ್ಟೆಗಳಿವೆ. ಸಾರಂಗ (ಉದ್ದ ೧.೨೪ ಮೀ) ದ ಮುಖಭಾಗ ನಾಶವಾಗಿದೆ. ದೇಹವು ಪ್ರಮಾಣಬದ್ಧವಾಗಿದೆ. ಎರಡು ಕಾಲು, ಚಿಕ್ಕ ಬಾಲ ಮತ್ತು ಬೆನ್ನ ಮೇಲೆ ಹಿಂದಕ್ಕೆ ಬಾಗಿದ ರೇಖೆಗಳಿದ್ದು ರೋಮಗಳನ್ನು ಸೂಚಿಸುತ್ತವೆ.

ಕೋಣ ಮತ್ತು ಹಂದಿಗಳು ಒಂದೇ ತೆರನಾಗಿವೆ. ಭಿನ್ನತೆ ಗುರುತಿಸುವುದು ಕಷ್ಟ. ಕೋಣ (ಉದ್ದ ೩.೧೦ ಮೀ ಎತ್ತರ ೨.೧೫ ಮೀ) ನ ತಲೆಗ ಚಿಕ್ಕ ಕೋಡುಗಳಿವೆ. ಮೈದುಂಬಿ ದಷ್ಟಪುಷ್ಟವಾಗಿದೆ. ಅದಕ್ಕೆ ಶಿಶ್ನವನ್ನು ತೋರಿಸಲಾಗಿದೆ. ಮೈಮೇಲೆ ಪುರುಷರ ಚಿತ್ರಗಳಲ್ಲಿಯಂತೆ ರೇಖೆಗಳಿವೆ.

ಹಂದಿಗಳಲ್ಲಿ ದಕ್ಷಿಣ ಭಾಗದಲ್ಲಿರುವ ಹಂದಿಯು ೨.೬ ಮೀ. ಉದ್ದವಾಗಿದೆ. ದೇಹ ಬಲಿಷ್ಠವಾಗಿದೆ. ಮೈತುಂಬ ವಕ್ರ ರೇಖೆಗಳು, ಅರೆ ವಜ್ರಾಕೃತಿಗಳು ಇವೆ. ಉತ್ತರದ ಬದಿಯಲ್ಲಿಯ ಹಂದಿಯ ಚಿತ್ರವೂ ಕೂಡ ಇದನ್ನು ಹೋಲುತ್ತದೆ.

ಉತ್ತರ ಭಾಗದಲ್ಲಿ ತೀರ ಹಿಂದೆ ದೊಡ್ಡ ನವೀನ ಚಿತ್ರವಿದೆ. (ಉದ್ದ ೨.೫ ಮೀ) ಇದಕ್ಕೆ ಗರಿಗಳು ಉದ್ದವಾಗಿಲ್ಲ ತಲೆಯ ಮೇಲೆ ತುರಾಯಿ ಇದೆ. ಬಾಯಿ ಕೆಳಗೆ ಎರಡು ರೇಖೆಗಳನ್ನು ಕೆಳಕ್ಕೆ ಎಳೆಯಲಾಗಿದೆ.. ಮೈಮೇಲೆಲ್ಲಾ ವಜ್ರಾಕೃತಿಯ ರೇಖೆಗಳಿವೆ. ೨ ಕಾಲುಗಳಿವೆ. ಗಿಡ ಚಿತ್ರದ ಪಶ್ಚಿಮದಲ್ಲಿರುವ ಚಿತ್ರವು ಒಂದು ವಿಧದಲ್ಲಿ ಮೀನನ್ನು ಹೋಲುತ್ತದೆ.

ಒಂದು ದೊಡ್ಡ ಗಿಡದ ಚಿತ್ರವನ್ನು ಬಿಡಿಸಲಾಗಿದೆ. ಪ್ರಧಾನವಾಗಿ ಅದರ ಕಾಂಡ ಮತ್ತು ಟೊಂಗೆಗಳು ಇವೆ. ಗಿಡದ ಕಾಂಡ ಮತ್ತು ಟೊಂಗೆಗಳ ಭಾಗಗಳಲ್ಲಿ ಮನುಷ್ಯ ಮತ್ತು ಪ್ರಾಣಿ ಚಿತ್ರಗಳ ಮೈಮೇಲಿರುವಂತೆ ವಿಶಿಷ್ಠ ರೀತಿಯ ರೇಖೆಗಳಿವೆ.

## ಕಲ್ಲಾಸರೆ : ನಾಲ್ಕು

ಮಲ್ಲಾಪುರ ಗ್ರಾಮದಿಂದ ಪಶ್ಚಿಮಕ್ಕೆ ಸುಮಾರು ೩ ಕಿ.ಮೀ. ದೂರದಲ್ಲಿ ಬಳಿಗಾರ ಊಟಿ ಎಂಬಲ್ಲಿ ಈ ಕಲ್ಲಾಸರೆ ಇದೆ. ಇದಕ್ಕೆ ಲಕ್ಷ್ಮೀಗುಂಡು ಎಂದು ಕರೆಯುವರು. ಸಮತಟ್ಟಾದ ಭೂಮಿಯಲ್ಲಿ ಒಂದು ಚಿಕ್ಕ ಗುಂಡಿನ ಮೇಲೆ (ಸುಮಾರು ೩೦ ಅಡಿ ಎತ್ತರ) ಬೃಹದಾಕಾರಾದ ಬಂಡೆಯೊಂದು ಓರೆಯಾಗಿ ಬಿದ್ದಿದೆ (ಸುಮಾರು ೫೦ ಅಡಿ ಎತ್ತರ) ದೊಡ್ಡ ಬಂಡೆಯ ಕೆಳಗೆ ಆಸರೆ ಉಂಟಾಗಿದ್ದು, ಅದರ ಬದಿಯಲ್ಲಿ ಹಾಗೂ ಕೆಳಗಿನ ಆಸರೆ ಗೂಡಿನಲ್ಲಿ ಚಿತ್ರಗಳಿವೆ.

ದೊಡ್ಡ ಬಂಡೆಯಲ್ಲಿ ಮೂರು ಮನುಷ್ಯಾಕೃತಿಗಳ ಒಂದೊಂದು ಹಂದಿ (ಮುಖ) ಮತ್ತು ನಾಯಿಯ ಚಿತ್ರಗಳಿವೆ. ಇವು ಮಳೆ ನೀರಿಗೆ ಸಿಲುಕಿ ಬಹಳಷ್ಟು ಮಾಸಿವೆ. ಕೆಳಗಿನ ಬಂಡೆಯ ಚಿತ್ರಗಳು ಸ್ಪಷ್ಟವಿಲ್ಲ.

ಮನುಷ್ಯ ಚಿತ್ರಗಳು ಮಾಂತ್ರಿಕ ನೃತ್ಯ ವಿಧಿಯಲ್ಲಿ ತೊಡಗಿರುವಂತಿವೆ. ಕಾಲುಗಳನ್ನು ಅಗಲಿಸಿ, ಕೈಗಳನ್ನು ಭುಜದ ಸಮಾನಾಂತರದಲ್ಲಿ ಅಗಲಿಸಿ ಮುಂಗೈಗಳನ್ನು ಕೆಳಮುಖವಾಗಿ (ಹಸ್ತಗಳಲ್ಲಿ) ಹಿಡಿದಿರುವ ಮನುಷ್ಯ (೧ ಮೀ. ೦.೫೦ ಮೀ) ನ ಮೈಮೇಲೆ ನಿರ್ಧಿಷ್ಟವಾಗಿ ಬರೆದ ರೇಖೆಗಳಿವೆ. ಅದರ ಬದಿಯಲ್ಲಿ ಅಪೂರ್ಣವಾಗಿ ಗೋಚರಿಸುವ ಎರಡು ಮನುಷ್ಯಾಕೃತಿಗಳಿವೆ. ಹಂದಿ (೦.೭೦ ಮೀ) ಮುಖ ಚಿತ್ರವಿದೆ. ಕಣ್ಣುಮೂತಿ, ಬಾಯಿಗಳನ್ನು ಗುರುತಿಸಿಲ್ಲ. ಮನುಷ್ಯ ಚಿತ್ರಗಳ ಮೇಲ್ಭಾಗದಲ್ಲಿ ನಾಯಿಯ ಚಿಕ್ಕ ರೇಖಾ ಚಿತ್ರವಿದೆ.

**ಕಲ್ಲಾಸರೆ : ಐದು**

ಇದು ಮಲ್ಲಾಪುರ ಗ್ರಾಮದಿಂದ ದಕ್ಷಿಣಕ್ಕೆ ಒಂದು ಕಿ.ಮೀ ದೂರದ ಬೆಟ್ಟದಲ್ಲಿಯ ಸಣ್ಣ ಮೊರಿಯರ ತಟ್ಟೆಯಲ್ಲಿದೆ. ಇದು ಬೃಹತ್ ಶಿಲಾಯುಗದ ಸಮಾಧಿ ನೆಲೆ. ಇಲ್ಲಿಯ ದೊಡ್ಡ ಹಾಸಲು ಬಂಡೆಯ ಒಳಭಾಗದ ಛಾವಣಿಯಲ್ಲಿ ಕೆಂಪು ವರ್ಣದ ಚಿತ್ರಗಳಿವೆ.

ಮೂರು ಚಿತ್ರಗಳಲ್ಲಿ ಒಂದು ಪ್ರಾಣಿಯ ಮುಂಭಾಗದ ದೇಹ, ಎರಡು ರೇಖಾ ಸಂಕೇತಗಳು. ಪ್ರಾಣಿಯು ಚಿಕ್ಕಕೋಡು ಅಥವಾ ಕಿವಿಗಳನ್ನು ಸ್ವಲ್ಪ ನೀಳವೆನಿಸುವ ಕತ್ತು ಮತ್ತು ಅರ್ಧ ಮುಂಡವನ್ನು ಹೊಂದಿದೆ. ಸಂಕೇತಗಳಲ್ಲಿ ಒಂದು ಕೂಡಿಸುವ ಚಿನ್ಹೆಯಂತಿದ್ದು ಅದರ ನಾಲ್ಕು ಕೋನಗಳಲ್ಲಿ V ಆಕಾರದಲ್ಲಿ ರೇಖೆಗಳಿವೆ. ಮತ್ತೊಂದು ಅರ್ಥವಾಗದ ರೇಖಾಕೃತಿ ಇದೆ.

**ಕಲ್ಲಾಸರೆ : ಆರು**

ಬೆಟ್ಟದ ಮೇಲಿರುವ ವಾನಭದ್ರೇಶ್ವರ ದೇವಾಲಯದ ದಾರಿಯಲ್ಲಿ ಪಾಪಯ್ಯ ಸುರಂಗದ ಎರಡನೆ ಕಿಂಡಿಯ (ಜರಡಿಭಾವಿ)ಹತ್ತಿರದಲ್ಲಿ ಈ ಗವಿ ಇದೆ. ಗವಿಯ ಮುಖಭಾಗದ ಕಲ್ಲಾಸರೆಯಲ್ಲಿ ಮೇಲಿನ ಛಾವಣಿ ಮತ್ತು ಗೋಡೆಯ ಮೇಲೆ ಚಿತ್ರಗಳಿವೆ.

ಮೇಲಿನ ಛಾವಣಿಯಲ್ಲಿ ಒಂದು ಮಂಡಲದ, ಎರಡು ವೃತ್ತಾಕಾರದ ಅಲಂಕರಣೆಗಳ ಚಿತ್ರಗಳಿವೆ. ಇಲ್ಲಿಯ ಮಂಡಲವು ಮೂರು ರೇಖೆಗಳಲ್ಲಿರುವುದು ಗಮನಾರ್ಹ. ನಾಲ್ಕು ಮೂಲೆಗಳಲ್ಲಿ ಹೊರಳಿಕೆ ಗಂಟನ್ನು ಹೊಂದಿರುವ ಮಂಡಲದಲ್ಲಿ ಮತ್ತೊಂದು ವಾದ ದ್ವಿ ರೇಖೆಯ ಮಂಡಲವಿದೆ. ಒಟ್ಟು ಮಂಡಲವು ೦.೬೬ ಮೀ. ೦.೫೬ ಮೀಟರ ಅಳತೆಯಲ್ಲಿದೆ. ಎರಡು ವೃತ್ತಗಳು ೦.೨೭ ಮೀ.

ಮತ್ತು ೦.೨೬ ಮೀ. ಅಳತೆಯಲ್ಲಿವೆ. ಗೋಡೆಯಲ್ಲಿ ಅನೇಕ ಚಿತ್ರಗಳಿವೆ. ಅವುಗಳಲ್ಲಿ ಮುಖ್ಯವಾಗಿ ನಾಯಿಗಳು, ಗೂಳಿಗಳೂ, ಎತ್ತುಗಳು, ಜಿಂಕೆಗಳು, ಮನುಷ್ಯರ ಮತ್ತು ನವಿಲಿನ ಚಿತ್ರಗಳಿವೆ. ಇನ್ನು ಕೆಲವು ಚಿತ್ರಗಳು ಅಸ್ಪಷ್ಟವಾಗಿವೆ.

ಇಲ್ಲಿ ಒಟ್ಟು ೪, ಮನುಷ್ಯ ಚಿತ್ರಗಳಿವೆ. ಅವುಗಳಲ್ಲಿ ಒಂದನ್ನೊರತು ಉಳಿದವು ಸರಳ ರಚನೆಗಳಾಗಿವೆ. ಅಂದರೆ ಒಂದರ ಮೇಲೊಂದರಂತೆ ವಿರುದ್ಧವಾಗಿ ಜೋಡಿಸಿಟ್ಟಂತೆ ಎರಡು ತ್ರಿಕೋನಗಳು ಅವುಗಳಿಗೆ ಕೈ, ಕಾಲುಗಳ ಸೂಚಕ ಸರಳ ರೇಖೆಯನ್ನು ಎಳೆಯಲಾಗಿದೆ. ಉಳಿದಂತೆ ವ್ಯಕ್ತಿಯ ಚಿತ್ರವೊಂದು ವಿಶೇಷವಾಗಿದೆ. ಎರಡೂ ಕಾಲುಗಳನ್ನೂ ಎರಡೂ ಕೈಗಳನ್ನು ಅಗಲಿಸಿ ನಿಂತಿದ್ದು ತಲೆಯ ಮೇಲೆ ಕೋಡಿನ ಮುಖವಾಡ ಧರಿಸಿದ್ದಾನೆ. ಎರಡೂ ಕಾಲುಗಳ ಮಧ್ಯ ಬಾಲವಿದೆ. ಕಣ್ಣು, ಬಾಯಿ, ಮೂಗು, ಕಿವಿ, ಹಸ್ತ ಮತ್ತು ಪಾದಗಳನ್ನು ಬಿಡಿಸಿಲ್ಲ. ಇದೊಂದು ಛಾಯಾಚಿತ್ರವಾಗಿದೆ. (ಎತ್ತರ ೦.೪೭ ಮೀ) ಇದೆ ರೀತಿಯ ಚಿತ್ರವೊಂದು ಹಿರೇಬೆಣಕಲ್‌ನ ೫ನೇ ಗವಿಯಲ್ಲಿದೆ.

ಪ್ರಾಣಿಗಳಲ್ಲಿ ೫ ಎತ್ತಿನ ಚಿತ್ರಗಳಿವೆ. ಅವುಗಳಲ್ಲಿ ಮೂರು ಎತ್ತುಗಳ ಚಿತ್ರಗಳು ಸಹಜವಾಗಿದೆ. ೪ ಕಾಲು, ಬಾಲ, ಇಣಿ ಮತ್ತು ಕೋಡುಗಳಿದ್ದು ತಕ್ಕಮಟ್ಟಿಗೆ ಪ್ರಮಾಣಬದ್ಧವಾಗಿದೆ. ಉಳಿದೆರಡು ಪರಸ್ಪರ ಎದುರಾಗಿ ನಿಂತಿವೆ. ಇಣಿ, ಕೋಡು, ಬಾಲಗಳ ಜೊತೆಗೆ ಒಂದಕ್ಕೆ ಶಿಶ್ನವನ್ನು ತೋರಿಸಲಾಗಿದೆ. ಇವುಗಳ ದಪ್ಪವಾದ ಎರಡೇ ಕಾಲುಗಳನ್ನು ಮಾತ್ರ ಹೊಂದಿವೆ. ಇಲ್ಲಿ ನವಿಲಿನ ಒಂದು ಚಿತ್ರವಿದೆ. ತಲೆಯ ಮೇಲೆ ತುರಾಯಿ ಇದ್ದು, ಕಾಲುಗಳಲ್ಲಿ ೩ ರೇಖೆಯ ಪಾದಗಳಿವೆ.

ಇಲ್ಲಿ ಜಿಂಕೆಯ ಆರು ಚಿತ್ರಗಳಿವೆ. ದ್ವಿರೇಖೆಯಲ್ಲಿ ಇವುಗಳನ್ನು ಚಿತ್ರಿಸಲಾಗಿದೆ. ಕೋಡು, ಬಾಲಗಳೂ ಇವೆ. ಕೆಲವು ಜಿಂಕೆಗಳ ಮೈಮೇಲೆ ರೇಖೆಗಳಿವೆ. ಎಡಬದಿಯಲ್ಲಿ ಒಂದು ದೊಡ್ಡ ಅಳತೆಯ ಜಿಂಕೆಯ ರೇಖಾ ಚಿತ್ರವು ಸರಳವೂ, ಸಹಜವೂ ಆಗಿದೆ.

### ಕಲ್ಲಾಸರೆ : ಏಳು

ಇದು ಆರನೇಯ ಕಲ್ಲಾಸರೆಯಿಂದ ಈಶಾನ್ಯಕ್ಕೆ ಸ್ವಲ್ಪ ದೂರದಲ್ಲಿದೆ. ಬೆಟ್ಟದ ಮಧ್ಯ ಚಿಕ್ಕ ಕಲ್ಲಾಸರೆಯ ಛಾವಣೆಯಲ್ಲಿ ಕೆಂಪು ವರ್ಣದ ಚಿತ್ರಗಳಿದ್ದು ಅಸ್ಪಷ್ಟವಾಗಿವೆ.

ಇಲ್ಲಿ ಒಬ್ಬ ಅಶ್ವಸವಾರ, ಮೂರು ಮನುಷ್ಯರ ಮತ್ತು ಎರಡು ಚಕ್ರಗಳ ಚಿತ್ರಗಳಿವೆ. ಎಲ್ಲವೂ ಛಾಯಾ ರೂಪದವು. ಅಶ್ವವು ಉದ್ದವಾಗಿದೆ. ನಾಲ್ಕು ಕಾಲುಗಳು, ಬಾಲವಿದೆ. ತಲೆಯ ಮೇಲೆ ಸಾಲಾಗಿ ಚಿಕ್ಕ ರೇಖೆಗಳು ಅವುಗಳ ಮೇಲೆ ಚುಕ್ಕಿಗಳಿವೆ. ಪ್ರಾಯಶಃ ಅವು ಕೂದಲಾಗಿರಬೇಕು.

ಕುದುರೆ ಮುಂದೆ ವ್ಯಕ್ತಿಯೊಬ್ಬ ನಿಂತಿದ್ದಾನೆ. ಚಿತ್ರ ಸ್ಪಷ್ಟವಿಲ್ಲ. ಕೈ ಸ್ವಲ್ಪ ಅಗಲಿಸಿ ನಿಂತ ಮೂರು ಮನುಷ್ಯರ ಚಿತ್ರಗಳಿವೆ. ಅವುಗಳಲ್ಲಿ ಒಂದಕ್ಕೆ ಸೊಂಟದಿಂದ ಕೆಳಭಾಗ ಗೋಚರಿಸುವುದಿಲ್ಲ. ವೃತ್ತಗಳು ಅವುಗಳಲ್ಲಿ ರೇಖೆಯಿರುವ ಎರಡು ಚಿತ್ರಗಳಿವೆ. ಒಟ್ಟಾರೆ ಇಲ್ಲಿಯ ಚಿತ್ರಗಳು ಸಮರ್ಪಕವಾಗಿಲ್ಲ.

### ಕಲ್ಲಾಸರೆ : ಎಂಟು

ವಾನಭದ್ರೇಶ್ವರ ದೇವಾಲಯದ ಮೇಲಿನ ದಾರಿಯಲ್ಲಿ (ಬಸಾಪಟ್ಟಣ ಮತ್ತು ಮಲ್ಲಾಪುರ ರಸ್ತೆಗಳು ಕೂಡಿದ ರಸ್ತೆ) ಬಲಬದಿಯ ಗುಡ್ಡದಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಕೆಂಪು ವರ್ಣದ ಎರಡು ಎತ್ತುಗಳು ಒಂದು ಜಿಂಕೆ ಮತ್ತು ರೇಖಾಚಿತ್ರಗಳಿವೆ.

ಎತ್ತಿನ ಜಿಂಕೆಯ ಮುಂಡಗಳು, ಕತ್ತು ಸ್ವಲ್ಪ ಉದ್ದವಾಗಿವೆ. ಕೋಡು, ಇಣಿ, ನಾಲ್ಕು ಕಾಲು, ಬಾಲ ಸಹಜವಿದೆ. ಒಂದಕ್ಕೆ ಶಿಶ್ನ ಮತ್ತು ಮೈಮೇಲೆ ರೇಖೆಗಳಿವೆ. ಒಂದು ಎತ್ತಿನ ಕೋಡುಗಳು ಮೂರು ಬಾರಿ ಡೊಂಕಾಗಿ ವಜ್ರಾಕೃತಿಯಲ್ಲಿವೆ. ಇದಕ್ಕೆ ಮೈಮೇಲೆ ರೇಖೆಗಳಿಲ್ಲ. ಜಿಂಕೆಯ ಚಿತ್ರಕ್ಕೆ ರುಂಡ ಗೋಚರಿಸುತ್ತಿಲ್ಲ. ಮೈಮೇಲೆ ಅಡ್ಡ ಪಟ್ಟೆಗಳು ಮತ್ತು ಶಿಶ್ನವಿದೆ. ಕೆಲವು ರೇಖಾಕೃತಿಗಳು ವೃತ್ತಗಳು ಇಲ್ಲಿವೆ.

### ಕಲ್ಲಾಸರೆ : ಒಂಬತ್ತು

ವಾನಭದ್ರೇಶ್ವರ ಗುಹಾ ದೇವಾಲಯದ ಹಿಂದೆ ಈ ಕಲ್ಲಾಸರೆ ಇದೆ. ಇಲ್ಲಿ ಕೆಂಪು ವರ್ಣದ ಏಳು ಮನುಷ್ಯರ, ಎರಡು ಗೂಳಿ ಮತ್ತು ಒಂದು ಪ್ರಾಣಿಯ ಚಿತ್ರಗಳಿವೆ.

ಮನುಷ್ಯ ಚಿತ್ರಗಳಲ್ಲಿ, ಒಂದು ದೊಡ್ಡ, ಎರಡು ಮಧ್ಯಮ ಮತ್ತು ನಾಲ್ಕು ಚಿಕ್ಕ ಪ್ರಮಾಣದಲ್ಲಿವೆ. ಇವುಗಳ ರಚನೆಯ ವಿನ್ಯಾಸ ವಿಶೇಷವಾಗಿದೆ. ಪೈಲ್ವಾನರಂತೆ ತೋರುತ್ತವೆ. ಬಲಿಷ್ಠವಾದ ಅಗಲದ ಭುಜ, ತೋಳುಗಳು, ಸಣ್ಣ ನಡು, ಬಲಿಷ್ಠ ತೊಡೆಗಳುಇವೆ. ಪಾದ, ಹಸ್ತಗಳಿಲ್ಲ. ಇವು ಛಾಯಾರೂಪದವು. ದೊಡ್ಡ ಮನುಷ್ಯನು ಮುಖವಾಡ ಧರಿಸಿದಂತಿದೆ.

ಗೂಳಿಗಳಲ್ಲಿ ಒಂದು ಬಲಿಷ್ಠ ಗೂಳಿಯ ಚಿತ್ರ. ರುಂಡ, ಮುಂಡ, ಕತ್ತು, ಕಾಲು, ಇಣಿಗಳು ದಷ್ಟಪುಷ್ಟವಾಗಿದೆ.ಚಿಕ್ಕ ಕೋಡುಗಳು, ಕಿವಿಗಳು ಇದು ಛಾಯಾ ರೂಪದ ಚಿತ್ರವಾಗಿದೆ. ಇದೊಂದು ಅಪೂರ್ವ ಗೂಳಿಯ ಚಿತ್ರವಾಗಿದೆ. ಉಳಿದವು ಸಾಧಾರಣ ಚಿತ್ರಗಳಾಗಿವೆ. ಇಲ್ಲಿ ಒಂದರೊಳಗೊಂದರಂತೆ ಇರುವ ಮೂರು ಆಯತಗಳ ಚಿತ್ರವಿದೆ.

## ಕಲ್ಲಾಸರೆ : ಹತ್ತು

ಒಂಭತ್ತನೆಯ ಕಲ್ಲಾಸರೆ ಬದಿಯಲ್ಲಿ ಇದು ಇದೆ. ಒಂದು ದೊಡ್ಡ ಬಂಡೆ ಸೀಳಿ ಆಸರೆ ಉಂಟಾಗಿದೆ. ಅದರ ಒಂದು ತುಂಡಿನ ಸೀಳು ಮುಖಕ್ಕೆ ಕೆಂಪು ವರ್ಣದಲ್ಲಿ ಎತ್ತುಗಳ ಮತ್ತು ಇತರ ಪ್ರಾಣಿಗಳ ರೇಖಾ ಚಿತ್ರಗಳಿವೆ.

ಮೇಲೆ ಎರಡು, ಕೆಳಗೆ ಸಾಲಾಗಿ ನಾಲ್ಕು ಎತ್ತುಗಳಿವೆ. ಪಾರ್ಶ್ವ ಬದಿಯ ಚಿತ್ರಗಳಿವು. ನಾಲ್ಕಕ್ಕೆ ಆಕಾರದಲ್ಲಿ ಒಂದಕ್ಕೆ ಅರೆ ವೃತ್ತದಲ್ಲಿ ಒಳ ಭಾಗಿದ ಮತ್ತೊಂದಕ್ಕೆ ತುದಿಯಲ್ಲಿ ಒಳಬಾಗಿದ ಕೋಡುಗಳಿವೆ. ಇಣಿ, ಬಾಲ, ಎಡು ಕಾಲುಗಳಿದ್ದರೆ, ತುದಿಯಲ್ಲಿ ಒಳಬಾಗಿದ ಕೋಡಿನ ಎತ್ತಿಗೆ ನಾಲ್ಕು ಕಾಲುಗಳಿವೆ. ಛಾವಣಿಯಲ್ಲಿ ಒಂದು ಆಡಿನ ಚಿತ್ರವಿದೆ.

## ಕಲ್ಲಾಸರೆ : ಹನ್ನೊಂದು

ಒಂಭತ್ತನೆಯ ಕಲ್ಲಾಸರೆಗೆ ಎಡಭಾಗದಲ್ಲಿ ಸ್ವಲ್ಪ ದೂರದಲ್ಲಿ ಈ ಗವಿ ಇದೆ. ಗವಿಯ ಪ್ರವೇಶ ಭಾಗದಲ್ಲಿ ಎಡಗೋಡೆಯಲ್ಲಿ ಚಿತ್ರಗಳಿವೆ. ಚಿತ್ರಗಳು ಕೆಂಪುವರ್ಣದವು. ಚಿಕ್ಕ ಚಿಕ್ಕ ಬಾಹ್ಯ ಗೂಳಿಗಳು ಪೂರ್ವಾಭಿಮುಖವಾಗಿದ್ದರೆ, ಉಳಿದ ಮೂರು ಪಶ್ಚಿಮಾಭಿಮುಖವಾಗಿವೆ. ಸರಳವಾದ ರೇಖೆಗಳೆ ಕೊಬ್ಬಿದ ಗೂಳಿಗಳನ್ನು ಸ್ಪಷ್ಟವಾಗಿ ಸಂಕೇತಿಸುತ್ತವೆ.

## ಕಲ್ಲಾಸರೆ : ಹನ್ನೆರಡು

ವಾನಭದ್ರೇಶ್ವರ ದೇವಾಲಯದ ಎದುರಿಗೆ ಅನತಿ ದೂರದಲ್ಲಿ ಕೆಲವು ಕಲ್ಲಾಸರೆಗಳು, ಗವಿಗಳಿವೆ. ಅಲ್ಲಿಯ ಪಶ್ಚಿಮ ಬದಿಯ ಒಂದು ಕಲ್ಲಾಸರೆಯ ಛತ್ತಿನಲ್ಲಿ ಮನುಷ್ಯನ ನಿಂತ ಭಂಗಿಯ, ಒಂದು ಸಣ್ಣ ಕೆಂಪು ವರ್ಣದ ಚಿತ್ರವಿದೆ. (೧೫ ಸೆಂ.ಮಿ. ಎತ್ತರ) ದ್ವಿತ್ರಿಕೋನಾಕಾರದ ರೀತಿಯ ಮುಂಡವಿದೆ. ವೃತ್ತಾಕಾರದ ತಲೆ, ದೀರ್ಘವಲ್ಲದ ಕೈಗಳಿವೆ. ದೇಹವೆಲ್ಲ ವರ್ಣದಿಂದ ತುಂಬಿ ಛಾಯಾರೂಪದಲ್ಲಿದೆ. ಆದರೆ ತಲೆಯ ವೃತ್ತದಲ್ಲಿ ವರ್ಣವಿಲ್ಲ.

## ಕಲ್ಲಾಸರೆ : ಹದಿಮೂರು

ಮಲ್ಲಾಪುರ ವಾನಭದ್ರೇಶ್ವರ ದೇವಾಲಯ ದಾರಿಯಲ್ಲಿ ಬೆಟ್ಟದ ಮೇಲೆ ಬೂದಿ ಗುಡ್ಡದ ಎಡಬದಿಗೆ ಈ ಕಲ್ಲಾಸರೆ ಇದೆ. ಇಲ್ಲಿ ಬೂದಿ ಬಣ್ಣದ ಹಸ್ತದ ಮುದ್ರೆಗಳಿವೆ. ಪ್ರಾಯಶಃ ಸುಣ್ಣ ಮತ್ತು ಬೂದಿ ಮಿಶ್ರಿತ ದ್ರಾವಣದಲ್ಲಿ ಕೈಯನ್ನು ಎದ್ದಿ ಚಟ್ಟು ಬಡಿಯಲಾಗಿದೆ.

## ಕಲ್ಲಾಸರೆ : ಹದಿನಾಲ್ಕು

ವಾನಭದ್ರೇಶ್ವರ ಬೆಟ್ಟದ ಮೇಲೆ ಈಶಾನ್ಯ ತುದಿಯಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿಂದ ನೇರ ಕೆಳಗೆ ಪಾಪಯ್ಯ ಸುರಂಗದ ಹೊರಮುಖ ಗೋಚರಿಸುತ್ತದೆ. ಇಲ್ಲಿ ಕೆಂಪು ವರ್ಣದ ಒಂದು ಮಧ್ಯಮ ಪ್ರಮಾಣದ ಕವಲು ಕೋಡಿನ ಜಿಂಕೆಯ ಚಿತ್ರವಿದೆ.

## ತೆಂಬಾ

ಈ ಗ್ರಾಮವು ಈಗ ಜನವಸತಿರಹಿತವಾಗಿದ್ದು, ಬೂದಗುಂಪಾ ಗಂಗಾವತಿ ಬೆಟ್ಟ ಶ್ರೇಣಿಯಲ್ಲಿ ನಡುಮಧ್ಯ ಇದೆ. ಮಲ್ಲಾಪುರದಿಂದ ಬೆಟ್ಟಮಾರ್ಗದಲ್ಲಿ ಸುಮಾರು ೫ ಕಿ.ಮೀ. ದಕ್ಷಿಣಕ್ಕೆ ಇದೆ.

## ಕಲ್ಲಾಸರೆ : ಒಂದು

ಮಲ್ಲಾಪುರ-ತೆಂಬಾ (ಬೆಟ್ಟದ) ದಾರಿಯಲ್ಲಿ ಭಾಗರಾಜನ ಕೆರೆಯಿಂದ ಪಶ್ಚಿಮಕ್ಕೆ ಸುಮಾರು ೧ ಕಿ.ಮೀ. ದೂರದಲ್ಲಿ ಒಂದು ವಿಶಾಲವಾಗಿರುವ ಹರಡಿರುವ ಬಂಡೆ ಇದೆ. ಅದರ ಬದಿಯಲ್ಲಿ ಹರಿಯುವ ನೀರಿನ ತೊರೆ (ಊಟಿ) ಪಕ್ಕದಲ್ಲಿ ಒಂದು ಕಲ್ಲಾಸರೆ ಇದೆ. ಅದರಲ್ಲಿ ಬಳಿ ವರ್ಣದ ಚಿತ್ರಗಳಿವೆ. ಚಿತ್ರಗಳು ಕಡ್ಡಿ ರೂಪದವು. ಬೆರಳಿನಿಂದ ರಚಿಸಿದಂತಿದೆ. ಸಣ್ಣ ಆಕೃತಿಗಳು ಎತ್ತಿನ ಸವಾರ, ಇಬ್ಬರು ವ್ಯಕ್ತಿಗಳು, ಒಂದು ಪಶು ಹಾಗೂ ಅಪೂರ್ಣ ರಚನೆಯ ವ್ಯಕ್ತಿ ಚಿತ್ರಗಳಿವೆ.

ಎತ್ತಿನ ಮೇಲೆ ಕುಳಿತಿರುವ ವ್ಯಕ್ತಿ ಎರಡೂ ಕೈಗಳನ್ನು ಮೇಲಕ್ಕೆತ್ತಿದ್ದಾನೆ. ಎತ್ತಿನಲ್ಲಿ ಎರಡು ಕೋಡು, ಕಿವಿ,ಇಣಿ, ನಾಲ್ಕು ಕಾಲು ಸ್ಪಷ್ಟವಿದೆ. ಇನ್ನೊದು ದನದ ಚಿತ್ರ ಇದೆ. ಅರ್ಧ ಮುಷ್ಯಾಕೃತಿಯ ತಲೆ, ಕೈಗಳನ್ನು ಹೊಂದಿದ್ದು ಕೈ ಮೇಲಕ್ಕೆತ್ತಿವೆ. ಎರಡು ಮನುಷ್ಯರಲ್ಲಿ ಒರ್ವನ ಕೈಯಲ್ಲಿ ಖಡ್ಗ, ಡಾಲ ಹಿಡಿದಂತಿದೆ. ಅವನ ಮುಂದಿನ ಕಾಲುಗಳನ್ನು ಅಲಗಿಸಿ ಕೈ ಎತ್ತಿಸಿ ನಿಂತಿದ್ದಾನೆ.

## ಕಲ್ಲಾಸರೆ : ಎರಡು

ಮಲ್ಲಾಪುರ-ತೆಂಬಾ ಎರಡನೇ ಬೆಟ್ಟದ ದಾರಿಯಲ್ಲಿ ಸಾರಾಯಿ ಡೋಣಿ ಅಡವಿಯ ದಾರಿ ಬದಿ ಕಲ್ಲಾಸರೆಯಲ್ಲಿ ಬಳಿ ವರ್ಣದ ಮನುಷ್ಯಾಕೃತಿಗಳ ಚಿತ್ರಗಳಿವೆ. ಕ್ರಮವಿಲ್ಲದ ಮೂರು ಸಾಲಿನಲ್ಲಿ ಒಟ್ಟು ೧೩ ಕಡ್ಡಿ ರೂಪದ ಚಿತ್ರಗಳಿವೆ. ಬೆರಳಿನಿಂದ ರಚಿಸಿರುವಂತಿದೆ. ಎಲ್ಲವೂ ಕಾಲುಗಳನ್ನು ಅಗಲಿಸಿ ಕೈಗಳನ್ನು ಮೇಲಕ್ಕೆತ್ತಿದ್ದ ಭಂಗಿಯಲ್ಲಿವೆ.

## ಕಲ್ಲಾಸರೆ : ಮೂರು

ಮಲ್ಲಾಪುರ-ತೆಂಬಾ ಬೆಟ್ಟದ ದಾರಿಯಲ್ಲಿ ಚಿತ್ರಪಡಿ ಸಮೀಪದ ಜಜ್ಜಲ ಊಟಿ ಎಂಬಲ್ಲಿ (ತೆಂಬಾದಿಂದ ಸುಮಾರು ೩ ಕಿ.ಮೀ. ಮೊದಲೇ) ಹಳ್ಳದ ಪ್ರಪಾತವಿದೆ. ಅದರ ಬಲ ಬದಿಯಲ್ಲಿ ಕಲ್ಲಾಸರೆ ಇದೆ. ಅದರ ಉತ್ತರ ಮುಖದಲ್ಲಿ ಕೆಂಪುವರ್ಣದ ಕೆಲವು ಚಿತ್ರಗಳಿವೆ. ಅವು ಒಂದು ಮನುಷ್ಯನ ಪೂರ್ಣ ಚಿತ್ರ (೫ ಸೆಂ.ಮೀ. ಎತ್ತರ) ಮತ್ತೊಂದು ಕೈ, ಕಟಿಯವರೆಗಿನ ಮನುಷ್ಯ ಚಿತ್ರ (೧೦ ಸೆಂ.ಮೀ. ಎತ್ತರ) ಮತ್ತು ಒಂದು ಹೂವಿನ ಚಿತ್ರಗಳು.

ಮನುಷ್ಯ ಚಿತ್ರಗಳು ಛಾಯಾ ರೂಪದವು. ಮೊದಲ ಚಿತ್ರ ಕಾಲುಗಳನ್ನು ಅಗಲಿಸಿ ನಿಂತ ಮನುಷ್ಯನ ಚಿತ್ರ. ಬಲಗೈ ಮೇಲಕ್ಕೆ ಎತ್ತಿದ, ಎಡಗೈ ಕೆಳಕ್ಕೆ ಇಳಿಬಿಟ್ಟ ಭಂಗಿಯಲ್ಲಿವೆ. ಇನ್ನೊಂದು ಚಿತ್ರವಿದೆ. ಇನ್ನೊಂದು ಕಡ್ಡಿಯಂತಹ ಕಾಂಡ ಅದರ ತುದಿಯಲ್ಲಿ ದುಂಡಗೆ ಹೂವಿನಂತೆ ಇದೆ. ಜಜ್ಜಲ ಊಟಿಯ ಪ್ರಪಾತದ ಬಂಡೆಗಳಲ್ಲಿ ಎರಡು ಕಡೆ ಆಯುಧಗಳನ್ನು ತಿಕ್ಕಿದ ಗುರುತಿನ ಐದು ಕೊರೆದ ಉದ್ದ ಗುಳಿಗಳು (೧೦ ಸೆಂ.ಮೀ. ಅಗಲ, ೪೫ ಸೆಂ.ಮೀ. ಉದ್ದ) ಇವೆ.

## ಕಲ್ಲಾಸರೆ : ನಾಲ್ಕು

ತೆಂಬಾದಿಂದ ವಾಯುವ್ಯಕ್ಕೆ ಸುಮಾರು ೧ ಕಿ.ಮೀ. ದೂರದಲ್ಲಿ (ಕರಡಿ ವಟ್ಟದಿಂದ ಪೂರ್ವಕ್ಕೆ) ಈ ಕಲ್ಲಾಸರೆ ಇದೆ. ಅಲ್ಲಿ ಚಿಕ್ಕ ಹಳ್ಳವೊಂದು ಈಶಾನ್ಯದಿಂದ ನೈರುತ್ಯಕ್ಕೆ ಹರಿದಿದ್ದು ಒಂದು ಚಿಕ್ಕ ಪ್ರಪಾತದಲ್ಲಿ ಕೆಳಗೆ ಧುಮುಕುತ್ತಿದೆ. ಪ್ರಪಾತಕ್ಕೆ ಎಡಬದಿಗೆ ಹೊಂದಿಕೊಂಡಂತೆ ಪಶ್ಚಿಮಾಭಿಮುಖದ ಕಲ್ಲಾಸರೆ ಇದೆ. ಕಲ್ಲಾಸರೆಯಲ್ಲಿ ಸಾಲಾಗಿ ನಾಲ್ಕು ಎತ್ತುಗಳು ಮತ್ತು ಅವುಗಳ ಹಿಂದೆ ದನಗಾಯಿಯ ಚಿತ್ರ ಮತ್ತು ಕೆಳಗೆ ಚಿತ್ರವಿದೆ. (೨.೧೦ ಮೀ. ೧.೨೮ ಮೀ. ಒಟ್ಟು ವಿಸ್ತೀರ್ಣ)

ನಾಲ್ಕು ಎತ್ತುಗಳು (ಕ್ರಮವಾಗಿ ೦.೫೦, ೦.೪೬, ೦.೫೫, ೦.೫೫ ಅಳತೆಯಲ್ಲಿವೆ) ಛಾಯರೂಪದವು. ದೇಹ ಉದ್ದವಾಗಿದೆ. ಕೋಡು, ಇಣೆ, ಬಾಲ ಸಹಜವಾಗಿವೆ. ಕೋಡು ರೇಖೆಯಂತಿರದೆ ದಪ್ಪಗಿದೆ. ಬಾಲದಲ್ಲಿ ತುದಿಯಲ್ಲಿ ಕುಚ್ಚು (೩ ರೇಖೆಯದು) ಇವೆ. ಎಲ್ಲವಕ್ಕೂ ಶಿಶ್ನ ತೋರಿಸಲಾಗಿದೆ. ಮತ್ತು ಎಲ್ಲಾ ಎತ್ತುಗಳ ಕೊರಳಲ್ಲಿ ಗಂಟೆಯಾಕಾರದ ವಸ್ತುವಿದ್ದು ಗಮನಾರ್ಹವೆನಿಸುತ್ತದೆ.

ಮನುಷ್ಯ ಚಿತ್ರ ನಡೆಯುವ ಭಂಗಿಯಲ್ಲಿದೆ. ಇದು ಛಾಯಾ ರೂಪದ ಚಿತ್ರ. (೦.೨೮ ಮೀ ೦.೨೩ ಎತ್ತರ) ಬಲಗೈಯಲ್ಲಿ ಕೋಲು ಇದೆ. ಎಡ ಸೊಂಟದಲ್ಲಿ ಮತ್ತೊಂದು ಕೋಲು ಇದೆ. ಪಾದ, ಹಸ್ತ ಸ್ಪಷ್ಟವಾಗಿದೆ. ಬೆರಳು, ಕಣ್ಣು, ಮಗು, ಬಾಯಿಗಳಿಲ್ಲ.

ಕಳಿಭಾಗದಲ್ಲಿ ದ್ವಿವೃತ್ತಗಳ ಚಿತ್ರವಿದ್ದು, ಅಸ್ಪಷ್ಟವಾಗಿದೆ. ಈ ಕಲ್ಲಾಸರೆಯ ಸಮೀಪದಲ್ಲಿ ಪ್ರಾಗಿತಿಹಾಸ ಕಾಲದ ನಿವೇಶನವಿದೆ. ಕಲ್ಲಾಸರೆಗೆ ಸುತ್ತಲೂ ಸಣ್ಣ ಕಲ್ಲುಗಳ ಗೋಡೆ ಕಟ್ಟಿದ್ದು ವಾಸಕ್ಕಾಗಿ ಬಳಸಿಕೊಳ್ಳಲಾಗಿದೆ. ಈ ಕಲ್ಲಾಸರೆಯಲ್ಲಿ ಮಡಕೆ ಚೂರುಗಳು ದೊರೆತಿವೆ.

### ಕಲ್ಲಾಸರೆ : ಐದು

ನಾಲ್ಕನೆಯ ಕಲ್ಲಾಸರೆಯಿಂದ ವಾಯುವ್ಯಕ್ಕೆ ಸ್ವಲ್ಪ ದೂರದಲ್ಲಿಯ ದೊಡ್ಡ ಬಂಡೆಯಲ್ಲಿ ಪೂರ್ವಾಭಿಮುಖವಾಗಿ ಈ ಕಲ್ಲಾಸರೆ ಇದೆ. ಇಲ್ಲಿ ಕೆಂಪು ವರ್ಣದ ಎತ್ತು ಮತ್ತು ಒಂದು ಅಂಕಣದ ರೇಖಾಚಿತ್ರಗಳಿವೆ. ಎತ್ತಿನದು (೦.೭೮ ಉದ್ದ, ೦.೫೦ ಎತ್ತರ) ಪಾರ್ಶ್ವ ಬದಿಯ ಚಿತ್ರವಾದರೂ ನಾಲ್ಕು ಕಾಲುಗಳನ್ನು ತೋರಿಸಲಾಗಿದೆ. ಇಣಿ ಇಲ್ಲ. ಪುಷ್ಠದಿಂದ ಬೆನ್ನು ಕುತ್ತಿಗೆ ತಲೆಯಲ್ಲಿ ಯಾವುದೇ ವ್ಯತ್ಯಾಸವಿಲ್ಲದೇ ಒಂದೇ ಸರಳ ರೇಖೆಯಲ್ಲಿ ಇದೆ. ಎರಡು ಕೋಡುಗಳಿವೆ. ಮೈಮೇಲೆ ವಕ್ರವಾಗಿ ಪರಸ್ಪರ ಛೇದಿಸುವ ರೇಖೆಗಳಿವೆ. ಎತ್ತಿನ ಮುಂದೆ ಆಯಾತಾಕಾರದ ಅಂಕಣ (೦.೫೬ ಮೀ. ಅಗಲ, ೦.೪೬ ಎತ್ತರ) ದ ಚಿತ್ರವಿದೆ. ಅದರಲ್ಲಿ ಸಮಾನಾಂತರದಲ್ಲಿ ಮೇಲಿನಿಂದ ಕೆಳಕ್ಕೆ ಎಳೆದ ಮೂರು ರೇಖೆಗಳಿದ್ದು ಅಂಕಣ ನಾಲ್ಕು ಭಾಗದ್ದಾಗಿದೆ. ಎತ್ತಿನ ಕೆಳಭಾಗದಲ್ಲಿ ಮೇಲ್ಮುಖವಾಗಿರುವ ಮತ್ತೊಂದು ಎತ್ತಿನ ಸಣ್ಣ ಚಿತ್ರವಿದೆ. ಇದು ದೊಡ್ಡ ಎತ್ತಿನಂತಿದ್ದರೂ, ಮೈಮೇಲೆ ರೇಖೆಗಳಿಲ್ಲ. ಅದರ ಕೆಳಗೆ ಅಸ್ಪಷ್ಟ ಚಿತ್ರವಿದೆ.

### ತಿರುಮಲಾಪುರ

ಗಂಗಾವತಿ-ಶಿವಪುರ ರಸ್ತೆಯಲ್ಲಿ, ಆನೆಗುಂದಿಯಿಂದ ಸುಮಾರು ೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮವಿದೆ. ಇಲ್ಲಿ ಒಂದು ಕಲ್ಲಾಸರೆ ಇದೆ.

### ಕಲ್ಲಾಸರೆ : ಒಂದು

ಸಣಾಪುರ ತಿರುಮಲಾಪುರ ರಸ್ತೆಯಲ್ಲಿ, ತಿರುಮಲಾಪುರಕ್ಕೆ ಅರ್ಧ ಕಿ.ಮೀ. ಮುಂಚೆ ರಸ್ತೆ ಎಡಬದಿ ಬೆಟ್ಟದ ಬುಡದಲ್ಲಿ ಪಶ್ಚಿಮಾಭಿಮುಖವಾಗಿ ಈ ದೊಡ್ಡ ಕಲ್ಲಾಸರೆ ಇದೆ. ಇಲ್ಲಿ ವಿವಿಧ ಕಾಲ ಘಟ್ಟದಲ್ಲಿ ರಚಿತವಾಗಿರುವ ಅನೇಕ ಚಿತ್ರಗಳು, ಬರಹಗಳು ಕೆಂಪು ಮತ್ತು ಬಳಿ ವರ್ಣದಲ್ಲಿವೆ.

ಮನುಷ್ಯರ ಚಿಕ್ಕ, ದೊಡ್ಡ ರೇಖಾಕೃತಿಗಳು, ಎತ್ತುಗಳು, ರೈಲ್ವೆ ಹಳ್ಳಿಯಂತೆ ತೋರುವ ರಥದ ಮಾದರಿಗಳು, ಗಿಡಗಳು ಮತ್ತಿತರ ಅನೇಕ ಚಿಕ್ಕ ಚಿಕ್ಕ ಚಿತ್ರಗಳಿವೆ. ಮನುಷ್ಯರ ಚಿಕ್ಕ ಹಾಗೂ ದೊಡ್ಡ ರೇಖಾಚಿತ್ರಗಳು, ಎತ್ತಿನ ಮೇಲೆ ಕುಳಿತ ವ್ಯಕ್ತಿ, ಮತ್ತಿತರ ಕಿರು ಚಿತ್ರಗಳು ಮತ್ತು ಬರಹಗಳಿವೆ.

ಇಲ್ಲಿಯ ಕೆಲವು ಚಿತ್ರಗಳನ್ನು ಬೆರಳಿನಿಂದ ಬಿಡಿಸಿದಂತಿವೆ. ಮತ್ತು ಎಲ್ಲಾ ಚಿತ್ರಗಳ ಬೆರೆಕೆಯಿಂದ ಅದರಲ್ಲಿ ಪ್ರಾಚೀನ ಚಿತ್ರಗಳಾದವು, ಆಧುನಿಕ ಚಿತ್ರಗಳಾವವು ಎಂದು ಗುರುತಿಸಲು ಗೊಂದಲವಾಗುತ್ತದೆ.

## ಚಿಕ್ಕರಾಂಪುರ

ಗಂಗಾವತಿ ಮುನಿರಾಬಾದ್ ರಸ್ತೆಯಲ್ಲಿ ರಾಂಪುರ ಕ್ರಾಸ್‌ನಿಂದ ರಾಂಪುರ ಕಡೆ ೨ ಕಿ.ಮೀ ದೂರದ ಒನಕೆ ಕಂಡಿ ಗುಡ್ಡದಲ್ಲಿ ಈ ನೆಲೆ ಇದೆ. ಇದು ಒಟ್ಟು ಆರು ಕಲ್ಲಾಸರೆಯನ್ನು ಹೊಂದಿದೆ.

ರಾಂಪುರ ರಸ್ತೆಯ ಬಲಬದಿಯ ಬೆಟ್ಟಗಳಲ್ಲಿ ನಡುವೆ ಸುಮಾರು ಇಪ್ಪತ್ತು ಎಕರೆಯಷ್ಟು ವಿಶಾಲವಾದ ಬಯಲು ಇದೆ. ಸುತ್ತಲೂ ಬೆಟ್ಟ. ಈ ಬೆಟ್ಟದ ಗವಿ ಮತ್ತು ಶಿಲಾಶ್ರಯಮಗಳಲ್ಲಿ ವರ್ಣ ಚಿತ್ರಗಳಿವೆ. ಈ ಪ್ರದೇಶಕ್ಕೆ ಒಂದೇ ಇಕ್ಕಟ್ಟಾದ ಹಾದಿಯುಂಟು. ಅದೇ ಒನಕೆ ಕಂಡಿ ದಾರಿ.

## ಕಲ್ಲಾಸರೆ : ಒಂದು

ಬಯಲು ಪ್ರದೇಶದ ಪ್ರವೇಶಕ್ಕೆ ಬಲಬಾಗದಲ್ಲಿ ಈ ಗವಿ ಇದೆ. ಇದು ಇಲ್ಲಿಯ ಪ್ರಮುಖ ವರ್ಣಚಿತ್ರಗಳು ಮುಖ್ಯವಾಗಿ ಮನುಷ್ಯರ, ಎತ್ತುಗಳ, ಸಾಲು ಜಿಂಕೆಗಳ, ನವಿಲುಗಳು ಮತ್ತು ಸಾಲು ನೃತ್ಯಗಾರರ ಚಿತ್ರಗಳಿವೆ.

ಗವಿಯ ಪ್ರವೇಶ ಬಲಬದಿಯಲ್ಲಿ ಚೌಕಾಕಾರದ ಖಾನೆ (ಮಂಡಲ?) ಯಲ್ಲಿ ಇಬ್ಬರು ವ್ಯಕ್ತಿಗಳ ಚಿತ್ರಗಳಿವೆ. ಅದರ ಮೇಲ್ಭಾಗದಲ್ಲಿ ಪರಸ್ಪರ ಎದುರು ನಿಂತ ಜೋಡಿ ಎತ್ತುಗಳಿದ್ದು, ಮಧ್ಯದಲ್ಲಿ ಮನುಷ್ಯನ ಚಿತ್ರವಿದೆ. ಇವುಗಳ ಮೇಲೆ ಓರ್ವ ಮನುಷ್ಯನ ದೊಡ್ಡ ಚಿತ್ರವಿದೆ. ನಂತರ ಒಂದು ನಾಯಿ ಮತ್ತು ನಾಲ್ಕು ಎತ್ತುಗಳ ಚಿತ್ರಗಳಿವೆ.

ಗವಿ ಪ್ರವೇಶದಿಂದ ಎಡಬದಿಯ ಮೇಲ್ಭಾಗದಲ್ಲಿಯೂ ಒಂದು ಅಂಕಣವು ಅದರಲ್ಲಿ ಇಬ್ಬರು ಮನುಷ್ಯರ ಚಿತ್ರಗಳಿವೆ. ಅದರ ಮೇಲೆ ಎತ್ತು, ಮನುಷ್ಯರ, ತೀರ ಮೇಲ್ತುದಿಯಲ್ಲಿ ನಾಲ್ಕು ನವಿಲುಗಳ ಚಿತ್ರಗಳಿವೆ. ಇವುಗಳ ಕೆಳಭಾಗದಲ್ಲಿ ಚೌಕ ಮಂಡಲ ಗಳು ಅದರಲ್ಲಿ ವ್ಯಕ್ತಿಗಳ ಚಿತ್ರಗಳು ಕೆಳಭಾಗದಲ್ಲಿ ಸಾಲು ಜಿಂಕೆಗಳ ಚಿತ್ರಗಳಿವೆ. ಇಲ್ಲಿಯ ಮನುಷ್ಯ ಚಿತ್ರಗಳನ್ನು ಮೂರು ರೀತಿಯಲ್ಲಿ ಗುರುತಿಸಬಹುದು. ಬಿಡಿ ವ್ಯಕ್ತಿ ಚಿತ್ರಗಳು, ಮಂಡಲದಲ್ಲಿಯ ದಂಪತಿ ಚಿತ್ರಗಳು ಮತ್ತು ಸಾಲಾಗಿ ನಿಂತ ನೃತ್ಯಗಾರರ ಚಿತ್ರಗಳು.

ಮನುಷ್ಯ ಚಿತ್ರಗಳ ರಚನೆಯು ಎರಡು ವಿಧದಲ್ಲಿದೆ. ಇಲ್ಲಿಯ ಒಬ್ಬ ವ್ಯಕ್ತಿಯ ಚಿತ್ರವು ಸಹಜವಾಗಿದೆ. ಮುಖ ಸ್ಪಷ್ಟವಾಗಿದ್ದು, ಕಣ್ಣು, ಮೂಗೂ, ಬಾಯಿಗಳನ್ನು ತೋರಿಸಲಾಗಿದೆ. ಕೈ

ಮತ್ತು ಕಾಲುಗಳು ದ್ವಿರೇಖೆಯಲ್ಲಿ ಸಹಜ ಪ್ರಮಾಣಕ್ಕನುಗುಣವಾಗಿವೆ. ಇದು ಸಂಪೂರ್ಣ ವರ್ಣಛಾಯಾಚಿತ್ರವಾಗಿದ್ದರೂ ಕಣ್ಣನ್ನು ಮಾತ್ರ ಆ ಭಾಗದಲ್ಲಿ ಬಣ್ಣ ಬಳಿಯದೇ ಖಾಲಿಯಾಗಿಟ್ಟು ತೋರಿಸಿರುವುದು ವಿಶೇಷ. ಮನುಷ್ಯ ನಡೆಯುವ ಭಂಗಿಯಲ್ಲಿದ್ದಾನೆ. ಒಂದು ಕಾಲನ್ನು ಮಂದಕ್ಕೆ ಇನ್ನೊಂದು ಕಾಲನ್ನು ನಡೆಯುವಾಗ ಉಂಟಾಗುವ ಭಂಗಿಯಂತೆ ಮೇಲಕ್ಕೆತ್ತಿ ಅರೆ ಮಡಚಿದ ಸ್ಥಿತಿಯಲ್ಲಿದೆ. ಮುಂದಿನ ಕೈಯಲ್ಲಿ ಬಹುಶಃ ಕೋಲು ಎಂದು ತೋರುವ ವಸ್ತು ಇದೆ. ಕೋಲಿನ ಕೆಳಭಾಗದಲ್ಲಿ ಅಪೂರ್ಣವಾಗಿ ಕಾಣುವ ಎತ್ತಿನ ಚಿತ್ರವೊಂದಿದೆ. ಆದ್ದರಿಂದ ಇದು ದನಗಾಯಿಯ ಚಿತ್ರವೆಂದು ಹೇಳಬಹುದು.

ಎರಡನೇ ರೀತಿಯ ಮನುಷ್ಯ ಚಿತ್ರಗಳು ದ್ವಿತ್ರಿಕೋನಾಕಾರದ ಮುಂಡ ಶೈಲಿಯವು. ಈ ವಿಧದ ಮನುಷ್ಯ ಚಿತ್ರಗಲೇ ಇಲ್ಲಿ ಹೆಚ್ಚಾಗಿ ರಚಿತವಾಗಿವೆ. ಇಲ್ಲಿ ಮೂರು ಚೌಕಾಕಾರದ ಮಂಡಲಗಳಿವೆ. ಅವುಗಳಲ್ಲಿ ಎರಡು ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಹೊರಳಿಕೆಗಳು ಹೊಂದಿದ ದ್ವಿರೇಖೆಯ ರಚನೆಗಳಾಗಿವೆ. ಒಂದು ಸರಳ ಚೌಕ ಅಂಕಣವಾಗಿದೆ. ಈ ಎಲ್ಲಾ ಚೌಕಗಳ ಮಧ್ಯದಲ್ಲಿ ಇಬ್ಬರು ಮಾನವಾಕೃತಿಗಳನ್ನು ತೋರಿಸಲಾಗಿದೆ. ಪರಸ್ಪರ ಕೈಹಿಡಿದು ನಿಂತಿರುವ ಇವರು ದಂಪತಿಗಳಾಗಿರಬೇಕು.

ಇಲ್ಲಿ ಕೈಕೈ ಹಿಡಿದು ಕುಣಿಯುತ್ತಿರುವ ಮಾನವರ ನಾಲ್ಕು ಸಾಲು ಮನುಷ್ಯ ಚಿತ್ರಗಳಿವೆ. ಅವುಗಳಲ್ಲಿ ೧೯, ೧೫, ೭ ಮತ್ತು ೬ ಜನರ ತಂಡಗಳಿವೆ. ಇಲ್ಲಿ ಮೇಲೆ ನೋಡಿದಂತೆ ಎರಡನೇ ರೀತಿಯ ಮಾನವಾಕೃತಿಗಳನ್ನು ಒಂದರ ಪಕ್ಕ ಒಂದರಂತೆ ನಿಲ್ಲಿಸಲಾಗಿದೆ. ಎಲ್ಲವೂ ಹೆಚ್ಚು ಕಡಿಮೆ ಒಂದೇ ಅಳತೆ ಪ್ರಮಾಣದಲ್ಲಿವೆ. ಇವುಗಳ ಕೈಗಳನ್ನು ಪರಸ್ಪರ ಜೋಡಿಸಲಾಗಿದೆ. ಕೆಳಭಾಗದಲ್ಲಿರುವ ೧೫ ಜನರ ತಂಡವನ್ನು ೨ ಸಮಾನಾಂತರ ರೇಖೆಯ ಮಧ್ಯದಲ್ಲಿ ರಚಿಸಲಾಗಿದೆ. ಕೇವಲ ಎರಡು ಅಡ್ಡ ಗೆರೆಗಳನ್ನು ಎಳೆದು ಮಾನವಾಕೃತಿಗಳನ್ನು ರಚಿಸಲಾಗಿದೆ. ಸಾಲಿನಲ್ಲಿ ಕೊನೆಯ ೩ ಜನರಿಗೆ ಮಾತ್ರ ಕಾಲುಗಳನ್ನು ತೋರಿಸಲಾಗಿದೆ.

ಪ್ರಾಣಿ ಚಿತ್ರಗಳಲ್ಲಿ ಎತ್ತುಗಳ, ಜಿಂಕೆಗಳ, ನವಿಲುಗಳ ಮತ್ತು ನಾಯಿ ಚಿತ್ರಗಳಿವೆ. ಎದುರಾಗಿ ನಿಂತ ಎತ್ತಿನ ಜೋಡಿಗಳು, ಇಲ್ಲಿ ಪ್ರಮುಖವಾಗಿವೆ. ಇದೇ ರೀತಿಯ ಅನೇಕ ಎತ್ತುಗಳ ಚಿತ್ರಗಳು ಅಲ್ಲಲ್ಲಿ ಇವೆ. ಎತ್ತುಗಳು ಸಾಮಾನ್ಯವಾಗಿ ನೆರಳಿನ ಚಿತ್ರಗಳಾಗಿವೆ. ಇವುಗಳು ಎತ್ತುಗಳ ಬದಿಯ ಚಿತ್ರಗಳಾಗಿರುವುದರಿಂದ ಎರಡು ಕಾಲುಗಳನ್ನು ಮಾತ್ರ ಚಿತ್ರಿಸಲಾಗಿದೆ. ಸಾಮಾನ್ಯವಾಗಿ ದೊಡ್ಡ ಕೋಡುಗಳು ಗಮನಾರ್ಹವಾಗಿವೆ. ಇಣಿ, ಬಾಲಗಳನ್ನು ತೋರಿಸಲಾಗಿ. ಸಾಲಾಗಿ ನಿಂತ ಆರು ಜಿಂಕೆಗಳ ಚಿತ್ರಗಳು ಇಲ್ಲಿವೆ. ಕೋಡುಗಳು ದೊಡ್ಡದಾಗಿಲ್ಲ. ಈ ಎಲ್ಲಾ ಆರು ಜಿಂಕೆಗಳು ಒಂದೇ ಅಳತೆ ಪ್ರಮಾಣದಲ್ಲಿದೆ.

ಮೇಲ್ಭಾಗದಲ್ಲಿ ಸಣ್ಣ ಆಳತೆಯ ೪ ನವಿಲು ಚಿತ್ರಗಳಿವೆ. ಮೈಮೇಲೆ ವಕ್ರವಾಗಿ ಒಂದಕ್ಕೊಂದು ಛೇದಿಸಿರುವ ರೇಖೆಗಳಿವೆ. ೩ ರೇಖೆಯ ಪಾದಗಳನ್ನು ತಲೆಗೆ ತುರಾಯಿಗಳನ್ನು ತೋರಿಸಿರುವುದು ಗಮನಾರ್ಹ. ಒಂದು ನವಿಲು ತನ್ನ ಗರಿಗಳನ್ನು ಉದ್ದಕ್ಕೆ ಬಿಚ್ಚಿಕೊಂಡು ನಿಂತಿದೆ. ಒಟ್ಟಿನಲ್ಲಿ ಚಿತ್ರಗಳು ಸುಂದರವಾಗಿವೆ.

ಇಲ್ಲಿ ಮೇಲಿನ ಎತ್ತುಗಳ ಸಮೂಹದಲ್ಲಿ ಹಾಗೂ ಕೆಳಭಾಗದಲ್ಲಿ ಒಟ್ಟು ಎರಡು ನಾಯಿಗಳ ಚಿತ್ರಗಳಿವೆ. ೨ ರೇಖೆಯಲ್ಲಿ ನಾಯಿಯನ್ನು ಬಿಡಿಸಿರುವುದು ಗಮನಾರ್ಹ. ಮುಂದಿನ ಒಂದು ಕಾಲಿನಿಂಗ ಪ್ರಾರಂಭಗೊಳ್ಳುವ ಒಂದು ರೇಖೆ ಮುಖವಾಗಿ ಬೆನ್ನಾಗಿ ನಂತರ ಹಿಂದಿನ ಒಂದು ಕಾಲಾಗಿ ಕೊನೆಗೊಳ್ಳುತ್ತದೆ. ಇನ್ನೊಂದು ರೇಖೆ ಮುಂದಿನ ಎರಡನೇ ಕಾಲಾಗಿ, ಹೊಟ್ಟೆಯಾಗಿ ಹಾಗೂ ಹಿಂದಿನ ಮೊದಲ ಕಾಲಾಗಿ ಕೊನೆಗೊಳ್ಳುತ್ತದೆ. ಮತ್ತು ಬಾಲ ಮೇಲಕ್ಕೆತ್ತಿವೆ.

ಗವಿಯ ಬಾಗಿಲ ಮೇಲ್ಭಾಗದಲ್ಲಿ ಮುಂದಕ್ಕೆ ಚಾಚಿರುವ ಶಿಲಾಶ್ರಯವಿದೆ. ಅದರ ಛಾವಣಿಯಲ್ಲಿ ಒಂದು ವೃತ್ತದ ಚಿತ್ರವಿದೆ. ಈ ವೃತ್ತದ ಸುತ್ತಲೂ ಅರ್ಧಭಾಗದಲ್ಲಿ ಕಮಲದ ಎಲೆಗಳ ಆಕೃತಿಗಳು ಉಳಿರ್ಧದಲ್ಲಿ ವಕ್ರವಾಗಿ ಎಳೆದಿರುವ ರೇಖೆಗಳಿವೆ. ವೃತ್ತದ ಮಧ್ಯಭಾಗದಲ್ಲಿ ಅಸಮವಾಗಿ ಎಳೆದ ಎರಡು ರೇಖೆಗಳು ವೃತ್ತವನ್ನು ಎರಡು ಭಾಗಗಳನ್ನಾಗಿಸಿವೆ. ಈ ಎರಡು ರೇಖೆಗಳನ್ನು ಅಡ್ಡ ರೇಖೆಗಳಿಂದ ಸೇರಿಸಲಾಗಿದೆ. ಇದರ ಒಂದು ಬದಿಗೆ ತ್ರಿಕೋನಾಕಾರಗಳ ಸಾಲಿದ್ದರೆ ಮತ್ತೊಂದರ ಬದಿಗೆ ತುದಿಯಲ್ಲಿ ತ್ರಿಪಟ್ಟಿಕೆಗಳನ್ನು ಹೊಂದಿರುವ ವಕ್ರ ರೇಖೆಗಳಿವೆ. ಮಧ್ಯದ ಸಾಲಿಗೆ ಸೇರುವಂತೆ ಎಡಬದಿಯಲ್ಲಿ ದ್ವಿರೇಖೆಗಳ ಅರೆ ವೃತ್ತವೊಂದಿದ್ದು ಅದ ನಡುವೆ ಮಾನವಾಕೃತಿ ಇದೆ. ವೃತ್ತದ ಒಳ ಭಾಗದಲ್ಲಿ ಸುತ್ತಲೂ ಸಣ್ಣ ಸಣ್ಣ ಹನ್ನೆರಡು ವೃತ್ತಗಳಿವೆ. ಇಂತಹ ಮೂರು ವೃತ್ತಗಳು ಮಧ್ಯದ ಅರೆ ವೃತ್ತಾಕಾರದ ೨ ರೇಖೆಗಳ ಮಧ್ಯದಲ್ಲೂ ಇವೆ. ಈ ವೃತ್ತಗಳು ಕಲ್ಲು ಗುಂಡುಗಳು ಮಧ್ಯದ ಮನುಷ್ಯ ಚಿತ್ರವು ಶವವಾಗಿದ್ದು, ಚಿತ್ರ ಶಿಲಾವೃತ್ತ ಸಮಾದಿಯದಾಗಿದೆ.

ಗವಿಯ ಮುಖಭಾಗದಲ್ಲಿ ಒಬ್ಬ ಮನುಷ್ಯನ ಹಾಗೂ ಎರಡು ಪ್ರಾಣಿಗಳ ಬಿಳಿ ಬಣ್ಣದ ಚಿತ್ರಗಳಿವೆ. ಇವು ಕೆಂಪು ಚಿತ್ರಗಳಂತೆ ಸುಂದರವಾಗಿಲ್ಲ. ಪ್ರಾಯಶಃ ಇವು ನಂತರ ಕಾಲದ ಚಿತ್ರಗಳಾಗಿರಬೇಕು.

ಗವಿಯ ಒಳಭಾಗದಲ್ಲಿ ಎರಡೂ ಬದಿಯ ಮುಖಗೋಡೆಗಳಲ್ಲಿ ವರ್ಣಚಿತ್ರಗಳಿವೆ. ಬಲಬದಿಯಲ್ಲಿ ಒಂದು ಪ್ರಾಣಿಯ ಮೇಲೆ ವ್ಯಕ್ತಿಯೊಬ್ಬ ಕುಳಿತಾಗಿದೆ. ಪ್ರಾಣಿಗೆ ನಾಲ್ಕು ಕಾಲುಗಳನ್ನು ತೋರಿಸಲಾಗಿದೆ. ಇದರ ಮಂದೆ ಕೋತಿಯ ರೇಖಾಚಿತ್ರಗಳಿವೆ. ಮುಖದಲ್ಲಿ ಮೂತಿಯ ಭಾಗವನ್ನು ಮುಂದಕ್ಕೆ ಎಳೆದು

ಉಬ್ಬನ್ನು ತೋರಿಸಲಾಗಿದೆ. ಒಂದು ಮಂಗಕ್ಕೆ ಶಿಶ್ನವು, ಬಾಲವು ಇದೆ. ಪಕ್ಕದಲ್ಲಿರುವ ಮಂಗಕ್ಕೆ ಸ್ತನಗಳನ್ನು ತೋರಿಸಿ ಹೆಣ್ಣು ಗಂಡುಗಳ ಸ್ಪಷ್ಟತೆಯನ್ನು ಸೂಚಿಸಲಾಗಿದೆ. ಇಲ್ಲಿಯೇ ಒಂದು ಚಿಕ್ಕ ಮಾನವ ಇಲ್ಲವೇ ಮಂಗದ ಬಿಳಿ ಚಿತ್ರವಿದೆ. ಎದುರು ಗೋಡೆಯ ಮೇಲೆ ಸಾಲು ಎತ್ತುಗಳ ಚಿತ್ರಗಳಿದ್ದು, ಅಸ್ಪಷ್ಟವಾಗಿವೆ. ಈ ಎತ್ತುಗಳು ವಿವಿಧ ಪ್ರಮಾಣದಲ್ಲಿವೆ.

ಗವಿಯ ಒಳಭಾಗದಲ್ಲಿ ಛಾವಣಿಯು ಹಾವಿನ ಹೆಡೆಯಾಕಾರದಲ್ಲಿ ಪೊಳ್ಳಾಗಿ, ನುಣುಪಾಗಿದೆ. ಅದನ್ನೆ ಹೆಡೆಯಾಗಿಸಿ ದೊಡ್ಡ ಸರ್ಪವನ್ನು ಬಿಡಿಸಲಾಗಿದೆ. ಬಾಲ ಬಹುಮಟ್ಟಿಗೆ ನೇರವಾಗಿದೆ. ಕೆಂಪು ಬಣ್ಣದಿಂದ ಹೆಡೆಗೆ ಬಾಹ್ಯ ರೇಖೆ ಹಾಕಲಾಗಿದೆ. ಒಳಗಿನ ಫಣಿ ಕೂಡ ಕೆಂಪು. ಉಳಿದಂತೆ ಹಳದಿ ಮಿಶ್ರಿತ ಬಿಳಿ ಬಣ್ಣದಲ್ಲಿ ಹೆಡೆಯ ಒಳಭಾಗ, ಬಾಲವನ್ನು ಚಿತ್ರಿಸಲಾಗಿದೆ. ಇದು ಇತಿಹಾಸ ಆರಂಭಕಾಲದ ಚಿತ್ರವಾಗಿದೆ.

### ಕಲ್ಲಾಸರೆ : ಎರಡು

ಒನಕೆ ಕಂಡಿ ದಾರಿಯ ಬಲದಿಯಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ದೊಡ್ಡ ಬಂಡೆಯ ಮುಖಭಾಗದಲ್ಲಿ ಎದುರು ಬದುರಾಗಿ ನಿಂತ ಎರಡು ದೊಡ್ಡ ದನಗಳ ಚಿತ್ರಗಳಿವೆ. ಕೆಂಪು ವರ್ಣ ಚಿತ್ರಗಳು ಬಯಲಿಗೆ ತೆರೆದಿರುವುದರಿಂದ ಬಹಳಷ್ಟು ಮಾಸಿವೆ. ಇವು ಶೈಲಿ ಮತ್ತು ರೂಪದಲ್ಲಿ ಒಂದನೇ ಗವಿಯ ಚಿತ್ರಗಳಂತಿವೆ.

### ಕಲ್ಲಾಸರೆ : ಮೂರು

ಎರಡನೆ ಗವಿಯ ಬದಿಯಲ್ಲಿ ಈ ಶಿಲಾಶ್ರಯವಿದೆ. ಇಲ್ಲಿಯ ಛಾವಣಿ ಹಾಗೂ ಛಾವಣಿ ಕಲ್ಲಿನ ಬದಿಯ ಆಸರೆ ಕಲ್ಲಿಗೂ ಚಿತ್ರಗಳನ್ನು ಬಿಡಿಸಲಾಗಿದೆ. ಇಲ್ಲಿಯ ಮೂಲ ಚಿತ್ರಗಳು ಅಸ್ಪಷ್ಟವಾಗಿವೆ. ತದನಂತರ ಅವುಗಳ ಬೆರಳುಗಳಿಂದ ಕೆಂಪು ಮತ್ತು ಬಿಳಿ ವರ್ಣದಲ್ಲಿ ಮನುಷ್ಯ ಚಿತ್ರಗಳನ್ನು, ಮುಸಲ್ಮಾನರ ಪಂಜಾಗಳ ಚಿತ್ರಗಳನ್ನು ಬಿಡಿಸಲಾಗಿದೆ. ಅಲ್ಲಲ್ಲಿ ಬಿಳಿ ವರ್ಣದ ಮಂಗಗಳ ಚಿತ್ರಗಳು ಇವೆ.

### ಕಲ್ಲಾಸರೆ : ನಾಲ್ಕು

ಒಂದನೆಯ ಗವಿಯ ಎದುರಿನ ಬೆಟ್ಟಗಳಲ್ಲಿ ಈ ಗವಿ ಇದೆ. ಗವಿಯ ಮುಖಭಾಗದಲ್ಲಿ ಬದಿಯ ಶಿಲೆಯೊಂದಕ್ಕೆ ವರ್ಣಚಿತ್ರಗಳಿವೆ. ಇಲ್ಲಿ ಪರಸ್ಪರ ಎದುರು ಮುಖಮಾಡಿ ನಿಂತ ಮೂರು ಜೋಡಿ ಎತ್ತಿನ ಚಿತ್ರಗಳು, ಇಬ್ಬರು ಬಿಲ್ಲುಧಾರಿಗಳು ಹಾಗೂ ಓರ್ವ ಅಶ್ವಸವಾರನ ಚಿತ್ರಗಳಿವೆ. ಒಂದನೆಯ

ಗವಿಯ ಎತ್ತುಗಳ ಚಿತ್ರಗಳಿಗಿಂತ ಇವು ಭಿನ್ನವಾಗಿವೆ. ಇವುಗಳಿಗೆ ನಾಲ್ಕು ಕಾಲುಗಳನ್ನು ಬಿಡಿಸಲಾಗಿದೆ. ಮತ್ತು ಬಾಲದ ತುದಿಗಳನ್ನು ಮೂರು ಗೆರೆಗಳಿಂದ ತೋರಿಸಿ ರೋಮಗಳನ್ನು ಸೂಚಿಸಲಾಗಿದೆ.

ಧನುರ್ಧಾರಿಗಳು ಪರಸ್ಪರ ಎದುರಾಗಿ ನಿಂತಿದ್ದು, ಕೈಗಳಲ್ಲಿ ಬಿಲ್ಲುಗಳಿವೆ. ಬಿಲ್ಲುಗಳಿಗೆ ಬಾಣಗಳನ್ನು ಹೂಡಲಾಗಿದೆ. ಬಾಣಗಳ ತುದಿಯಲ್ಲಿ ತ್ರಿಕೋನಾಕಾರದ ಮೊನೆಗಳಿವೆ. ಒಂದನೇ ಗವಿಯಲ್ಲಿಯ ಮನುಷ್ಯ ಚಿತ್ರಗಳಿಗಿಂತ ಇವು ಕೂಡ ಭಿನ್ನವಾಗಿವೆ. ಇಲ್ಲಿ ಕೈ ಮತ್ತು ಕಾಲುಗಳನ್ನು ಸ್ವಲ್ಪ ದಪ್ಪವಾಗಿ ತೋರಿಸಲಾಗಿದೆ. ಭುಜದ ಭಾಗ ಸ್ವಲ್ಪ ಎತ್ತರಿಸಿರುವುದರಿಂದ ಸಹಜವಾಗಿ ತೋಳುಗಳ ಬಲಿಷ್ಠತೆ ಕಂಡುಬರುತ್ತದೆ. ಇವರಿಬ್ಬರ ಮಧ್ಯ ಅಶ್ವಸವಾರನ ಚಿತ್ರವಿದೆ. ಅಶ್ವದ ಬಾಲಕ್ಕೆ ಹಲವಾರು ಗೆರೆಗಳನ್ನು ಎಳೆದು ಕುದುರೆಯ ಬಾಲದ ಸಹಜತೆ ತರಲಾಗಿದೆ. ಅಶ್ವಸವಾರನು ಹಿಡಿದ ಕುದುರೆ ಲಗಾಮು ಸ್ಪಷ್ಟವಾಗಿದೆ.

ಇಲ್ಲಿಯ ದೊಡ್ಡ ಜೋಡಿ ಎತ್ತುಗಳ ಮಧ್ಯದಲ್ಲಿ ಓರ್ವ ಮನುಷ್ಯನ ಚಿತ್ರವಿದೆ. ಕೇವಲ ಎದೆಯ ಭಾಗ, ಭುಜ ಮತ್ತು ರುಂಡ ಮಾತ್ರ ಸ್ಪಷ್ಟವಿದೆ. ತಲೆಯಲ್ಲಿ ಎಡಭಾಗಕ್ಕೆ ಹೊರಳಿದ ಕೂದಲುಗಳ ಹಾಗೆ ಗೆರೆಗಳನ್ನು ತೋರಿಸಲಾಗಿದೆ. ಇಲ್ಲಿ ಕೂಡ ೨ ಬಿಳಿ ವರ್ಣದ ಆಕೃತಿಗಳಿವೆ.

### ಕಲ್ಲಾಸರೆ : ಐದು

ಮೂರನೆಯ ಶಿಲಾಶ್ರಯದ ಬದಿಯಲ್ಲಿ ಇರುವ ಈ ಶಿಲಾಶ್ರಯ ನೆಲದಿಂದ ಸುಮಾರು ೮, ೧೦ ಮೀ ಎತ್ತರದಲ್ಲಿದೆ. ಇಲ್ಲಿಯ ಛಾವಣಿಯಂತೆ ಅಡ್ಡ ಚಾಚಿರುವ ಬಂಡೆಯ ಒಳಮೈ ಮೇಲೆ ಒಬ್ಬ ಮನುಷ್ಯನ ಚಿತ್ರವಿದೆ. ಇದು ಸಂಪೂರ್ಣ ಛಾಯಾಚಿತ್ರ. ಸುಮಾರು ೨ ಮೀ. ಎತ್ತರವಿರಬಹುದು. ದುಂಡ ತಲೆ, ಪ್ರಮಾಣ ಬದ್ದ ದೇಹದಿಂದ ಇದು ಸ್ವಲ್ಪ ಗಮನಾರ್ಹ ಚಿತ್ರವಾಗಿದೆ. ತೊಡೆಗಳನ್ನು ಅಗಲಿಸಿಲ್ಲ. ಕೈಗಳೂ ಬದಿಗೆ ಭುಜದಿಂದ ಸ್ವಲ್ಪ ಕೆಳಕ್ಕೆ ಎತ್ತಲ್ಪಟ್ಟಿವೆ. ಕಾಲಿನ ಬಳಿ ಒಂದು ಚಿಕ್ಕ ಗೂಳಿಯ ಛಾಯಾರೂಪದ ಚಿತ್ರವೂ ಇದ್ದು, ಅದು ಮಲ್ಲಾಪೂರದ ೧೧ನೇ ಕಲ್ಲಾಸರೆಯ ಗೂಳಿಗಳಂತಿದೆ.

### ಕಲ್ಲಾಸರೆ : ಆರು

ಇಲ್ಲಿ ೧.೫೭ ಮೀ. ೧.೪೪ ಮೀ. ಅಳತೆಯ ಜಾಗೆಯಲ್ಲಿ ದೊಡ್ಡ, ಮಧ್ಯಮ ಮತ್ತು ಚಿಕ್ಕ ಅಳತೆಯ ಮೂರು ಮಂಡಲಗಳ ಚಿತ್ರಗಳ ಮತ್ತು ಒಂದು ಎತ್ತಿನ ಚಿತ್ರವಿದೆ. ದೊಡ್ಡ ಮಂಡಲದಲ್ಲಿ ಅರ್ಧಭಾಗ ಮಾಸಿ ಹೋಗಿದೆ. ಅರ್ಧಭಾಗವು ಸ್ಪಷ್ಟವಾಗಿದೆ. ದ್ವಿರೇಖೆಯ ಆಯಾತಾಕಾರದ

ಆವರಣವಿದೆ. ಅದರ ಮೇಲ್ಭಾಗದ ಆವರಣ ಮಧ್ಯದಲ್ಲಿ ಮೇಲಕ್ಕೆ ಇದೆ. ಈ ಆವರಣದ ಮಧ್ಯಭಾಗದಲ್ಲಿ ನಾಲ್ಕು ಮೂಲೆಗಳಲ್ಲಿ ಹೊರಳಿಕೆಗಳನ್ನು ಹೊಂದಿರುವ ಮಂಡಲವಿದೆ. ಈ ಮಂಡಲಗಳಿಗೆ ಪುನಃ ಇದೇ ರೀತಿಯ ಮಂಡಲವು ಪಕ್ರವಾಗಿದೆ. ಇದರಿಂದ ಇಡೀ ಮಂಡಲ ಎಂಟು ಗಂಟಿನದಾಗಿದೆ.

ಎರಡನೇ ಮಂಡಲವು ವಿಶೇಷವಾಗಿದೆ. ಒಂಭತ್ತು ವೃತ್ತಗಳನ್ನು, ಮೂರು ಸಾಲಿನಲ್ಲಿ ಮೇಲೆ, ಮಧ್ಯ, ಕೆಳಗೆ ಒಂದಕ್ಕೊಂದು ಅಂತರದಲ್ಲಿ ಬಿಡಿಸಲಾಗಿದೆ. ಈ ಎಲ್ಲಾ ವೃತ್ತಗಳನ್ನು ಜೋಡಿಸುವಂತೆ ಮೂರು ಲಂಬರೇಖೆಗಳನ್ನು ಎರಡು ವಕ್ರ ರೇಖೆಗಳನ್ನು ಜೋಡಿಸಿದ್ದರಿಂದ ಮಧ್ಯದಲ್ಲಿ ವೃತ್ತವುಳ್ಳ ವಜ್ರಾಕೃತಿ ರಚಿತವಾಗಿದೆ.

ಮೂರನೆಯ ಮಂಡಲವು ಚಿಕ್ಕದಿದೆ. ವೃತ್ತದೊಳಗೆ ನಾಲ್ಕು ಮೂಲೆಗಳಲ್ಲಿ ತಿರುವುಗಳನ್ನು ಹೊಂದಿರುವ ದ್ವಿರೇಖೆಯ ಮಂಡಲವನ್ನು ಹೊಂದಿದೆ. ಈ ಮಂಡಲದ ಮುಂದೆ ಗೂಳಿಯ ಚಿತ್ರವೊಂದಿದೆ. ಕೋಡು, ದೊಡ್ಡ ಇಣಿ, ಬಲಿಷ್ಟ ದೇಹವನ್ನು ಹೊಂದಿದ ಈ ಗೂಳಿಗೆ ಶಿಶ್ನ ವೃಷಣವನ್ನು ಬಿಡಿಸಲಾಗಿದೆ.

ಇನ್ನೊಂದು ಕಡೆ ಇಲ್ಲಿ ೧.೭೦ x ೧.೧೪ ಅಳತೆಯ ವಿಸ್ತೀರ್ಣದಲ್ಲಿ ಮೂರು ಮಂಡಲ, ಒಂದು ಜೋಡಿ ಪರಸ್ಪರ ಎದುರು ನಿಂತ ಎತ್ತುಗಳು ಮತ್ತು ಒಂದು ಜಿಂಕೆ ಓರ್ವ ಮನುಷ್ಯ ಮತ್ತು ಕೆಳಗೆ ಮತ್ತೊಂದು ಎತ್ತಿನ ರೇಖಾ ಚಿತ್ರವಿದೆ. ಮಂಡಲಗಳು ಮೊದಲನೆಯ ಕಲ್ಲಾಸರೆಯ ಮಂಡಲಗಳನ್ನು ಹೆಚ್ಚು ಕಡಿಮೆ ಹೋಲುತ್ತವೆ. ಒಂದು ಮಂಡಲ ಬಹಳಷ್ಟು ಅಸ್ಪಷ್ಟವಾಗಿದೆ. ಜಿಂಕೆ ಮತ್ತು ಚಿತ್ರಗಳು ತೀರ ಚಿಕ್ಕ ಪ್ರಮಾಣದಲ್ಲಿವೆ.

## ಸಂಗಾಪುರ

ಗಂಗಾವತಿ ಆನೇಗುಂದಿ ರಸ್ತೆಯಲ್ಲಿ ಗಂಗಾವತಿಯಿಂದ ೪ ಕಿ.ಮೀ.ದೂರದಲ್ಲಿ ಈ ಗ್ರಾಮವಿದೆ. ಇಲ್ಲಿ ಒಟ್ಟು ಹತ್ತು ಕಲ್ಲಾಸರೆಗಳು ಕಂಡುಬಂದಿದೆ.

### ಕಲ್ಲಾಸರೆ : ಒಂದು

ಕರಡಿ ವಟ್ಲ ಗುಡ್ಡಕ್ಕೆ ಪಶ್ಚಿಮದ ಕಡೆಯಿಂದ(ಕಣಿವೆ ಆಂಜನೇಯ ದೇವಾಲಯ ಕಡೆಯಿಂದ) ಪ್ರವೇಶವಿದೆ. ಪ್ರವೇಶದ ದಾರಿಯಿಂದ ಬಲಬದಿಯಲ್ಲಿ ಕೆಲವು ಗವಿಗಳು, ಕಲ್ಲಾಸರೆಗಳು ಇವೆ. ಇಲ್ಲಿ ನೂತನ ಶಿಲಾಯುಗದ ಕೊಡಲಿಗಳು, ಮಡಕೆ ಚೂರುಗಳು ಮತ್ತು ಕೆಂಪು ಶಿಲೆಯ ಅಲಂಕೃತ

ಮಣಿಗಳ ಚೂರುಗಳು, ಚರ್ಟ ಶಿಲೆಯ ಚಕ್ಕೆಗಳು ದೊರೆಯುತ್ತವೆ. ಒಂದನೇ ಕಲ್ಲಾಸರೆಯು ಬಲಬದಿಯ ಬೆಟ್ಟ ಭಾಗದಲ್ಲಿದೆ. ಇದೊಂದು ಗವಿ. ಗವಿಯ ಮುಖಭಾಗದಲ್ಲಿ ಚಿತ್ರರಚನೆಗೆ ಸೂಕ್ತವಾದ ಫಲಕದ ರಚನೆಯಾಗಿದೆ. ಈ ಫಲಕದಲ್ಲಿ ಮುಖಭಾಗ ಮತ್ತು ಬದಿಯ ಗೋಡೆಯಲ್ಲಿ ಕೆಂಪು ವರ್ಣದ ಚಿತ್ರಗಳಿವೆ. ಮುಖ ಭಾಗದಲ್ಲಿ ಎತ್ತು, ನಕ್ಷತ್ರ ಮತ್ತು ಎರಡು ಮನುಷ್ಯ ಚಿತ್ರಗಳಿವೆ. ಬದಿಯ ಗೋಡೆಯಲ್ಲಿ ಬಹುಖಾನೆಗಳ ಚಿತ್ರ ಮತ್ತು ನಾಲ್ಕು ದಳದ ಆಕೃತಿಯ ಚಿತ್ರಗಳಿವೆ.

ಎಮ್ಮೆ(೩೦.೨ ಸೆಂ.ಮೀ x ೧೭ ಸೆಂ.ಮೀ) ಪಾರ್ಶ್ವಬದಿಯ ರೇಖಾ ಚಿತ್ರವಿದೆ. ಮುಖ, ಕೋಡು, ಕಾಲು ಮತ್ತು ಬಾಲಗಳು ಸ್ಪಷ್ಟವಾಗಿವೆ. ಕೋಡುಗಳು ದೊಡ್ಡ ಪ್ರಮಾಣದಲ್ಲಿ ೩೦.ಸೆಂ.ಮೀ ಇವೆ. ಮುಖಭಾಗವನ್ನು ಸಂಪೂರ್ಣ ವರ್ಣದಿಂದ ತುಂಬಲಾಗಿದೆ. ಮೂತಿ ಸುಂದರವಾಗಿದೆ. ದೇಹಕ್ಕೆ ವರ್ಣವನ್ನು ತುಂಬಲಾಗಿಲ್ಲ. ಕೇವಲ ಬಾಹ್ಯರೇಖೆಯಲ್ಲಿ ದೇಹ ಕಾಲುಗಳನ್ನು ಬಿಡಿಸಲಾಗಿದೆ. ಕಾಲುಗಳು ಸಾಂಕೇತಿಕ ರಚನೆಗಳು, ಕೋಡುಗಳು ದೊಡ್ಡ ಪ್ರಮಾಣದಿಂದ ಗಮನ ಸೆಳೆಯುತ್ತವೆ.

ಮನುಷ್ಯನ ಚಿತ್ರವು(೧೫.೧.ಸೆಂ.ಮೀ. x ೩೦ ಸೆಂ.ಮೀ) ಎಮ್ಮೆ ಚಿತ್ರದ ಹಿಂಭಾಗದಲ್ಲಿ ನಕ್ಷತ್ರಾಕೃತಿಯ ಕೋನದ ಕೆಳಗೆ ಇದೆ. ಭುಜದಿಂದ ಸೊಂಟದವರೆಗಿನ ಭಾಗ ತ್ರಿಕೋನಾಕಾರದಲ್ಲಿದೆ. ಮೇಲೆ ಕತ್ತಿಗೆ ದುಂಡಾದ ಚಿಕ್ಕ ತಲೆ ಇದೆ. ತಲೆ ಸಂಪೂರ್ಣ ವರ್ಣದ ಒಂದು ವೃತ್ತ. ಕತ್ತು ಒಂದು ರೇಖೆ, ತಲೆಯಿಂದ ಎಳೆದ ಈ ರೇಖೆ ದೇಹದಲ್ಲಿ ಸೊಂಟದವರೆಗೆ ಇದೆ. ಭುಜ ರೇಖೆಯ ಕೆಳಗೆ ಅದರ ಸಮಾನಾಂತರದಲ್ಲಿ ಮತ್ತೊಂದು ರೇಖೆ ಎಳೆಯಲಾಗಿದೆ. ಕೈ ಮತ್ತು ಕಾಲುಗಳು ಕೇವಲ ಒಂಟಿ ರೇಖೆಗಳು, ಬೆರಳುಗಳಿಲ್ಲ. ಈ ಚಿತ್ರ ವ್ಯಕ್ತಿಯ ನಡಿಗೆಯ ಭಂಗಿಯನ್ನು ಸೂಚಿಸುತ್ತದೆ. ಕೈಗಳು ಮತ್ತು ಕಾಲುಗಳು ಚಲನಶೀಲ ಭಂಗಿಯಲ್ಲವೆ. ಒಂದು ಕೈ ಕಾಲು ಮುಂದಕ್ಕೆ ಚಾಚಿದ್ದಾರೆ, ಇನ್ನೊಂದು ಕೈ ಸಹಜವಾಗಿದೆ. ಮುದಿನ ಕಾಲು ಮುಂದಕ್ಕೆ ಊರಿದಂತೆ ಅದಕ್ಕೆ ತಕ್ಕಂತೆ ಹಿಂದಿನ ಕಾಲು ನೆಲದಿಂದ ಮೇಲಕ್ಕೆ ಎತ್ತಿದ ಭಂಗಿಯಲ್ಲಿದೆ.

ನಕ್ಷತ್ರ ಚಿತ್ರವು(ವ್ಯಾಸ ೫೨ ಸೆಂ.ಮೀ) ಅನುಕ್ರಮಣಿಕೆಯಲ್ಲಿ ಇದು ಎಮ್ಮೆ, ಮನುಷ್ಯ ಚಿತ್ರಗಳ ನಂತರ ಮೂರನೆಯ ಸ್ಥಾನದಲ್ಲಿದ್ದು, ಇಡೀ ಚಿತ್ರಗಳಲ್ಲೆ ದೊಡ್ಡ ಆಳತೆಯಲ್ಲಿದೆ. ಇದು ಕೋನಗಳ ನಕ್ಷತ್ರ ಚಿತ್ರವಾಗಿದೆ. ರೇಖೆಗಳನ್ನು ಅಂಕು ಡೊಂಕಾಗಿ ಎಳೆದು ನಕ್ಷತ್ರವನ್ನು ಬಿಡಿಸಲಾಗಿದೆ. ಹಾಗಾಗಿ ಐದು ಕೋನಾಕೃತಿಗಳು ಅಸಮವಾಗಿವೆ. ನಕ್ಷತ್ರದ ಮಧ್ಯದ ಪಂಚಕೋನಾಕಾರದ ಭಾಗದಲ್ಲಿ ಅದರ ಎಲ್ಲ ಬದಿಯ ರೇಖೆಗಳಿಗೆ ಸ್ಪರ್ಶಿಸಿದ ವೃತ್ತವನ್ನು ಹಾಕಲಾಗಿದೆ. ಪ್ರಾಯಶಃ ಮೊದಲೇ ವೃತ್ತವನ್ನು ಹಾಕಿಕೊಂಡು ಅದನ್ನು ಎಲ್ಲ ಬದಿಯ ಕೋನಗಳು ಸ್ಪರ್ಶಿಸುವಂತೆ ಮಾಡಿರುವ ಪ್ರಯತ್ನದ ಫಲವಾಗಿ ನಕ್ಷತ್ರದ ಹೊರ ಕೋನಗಳು ಅಸಮವಾಗಲು ಕಾರಣವಾಗಿರುವಂತೆ ತೋರುತ್ತದೆ.

ಮನುಷ್ಯ ಚಿತ್ರವು(೩೭ ಸೆಂ.ಮೀ. x ೧೨ ಸೆಂ.ಮೀ) ನಕ್ಷತ್ರ ಚಿತ್ರಕ್ಕೆ ಹೊಂದಿಕೊಂಡಂತೆ ಅದರ ಎಡಬದಿಯ ಎರಡು ಬಾಹ್ಯ ಕೋನಗಳ ಆವರಣದ ಹತ್ತಿರ ಈ ಚಿತ್ರವಿದೆ. ಮೊದಲಿನ ಮನುಷ್ಯ ಚಿತ್ರಕ್ಕಿಂತ ಇದು ಭಿನ್ನವಾಗಿದೆ. ಅದು ರೇಖಾ ರೂಪದ ಚಿತ್ರವಾಗಿದ್ದರೇ ಇದು ಛಾಯಾರೂಪದ ಚಿತ್ರ. ದೇಹದ ರಚನೆ ಪರಸ್ಪರ ಎದುರಾಗಿ ಎರಡು ತ್ರಿಕೋನಗಳನ್ನು ಇಟ್ಟಂತೆ ಕಾಣಿಸುತ್ತದೆ. ಭುಜದಿಂದ ಸೊಂಟದ ಭಾಗವನ್ನು ಮೇಲಿನ ತ್ರಿಕೋನ ಭಾಗ ಸಂಕೇತಿಸಿದರೆ ಅದಕ್ಕೆ ವಿರುದ್ಧವಾಗಿರುವ ತ್ರಿಕೋನ ಭಾಗ ಸೊಂಟದಿಂದ ಕೆಳಭಾಗವನ್ನು ಪ್ರಾಯಶಃ ಉಡುಪು ಸಹಿತ ನಿದರ್ಶಿಸುತ್ತದೆ. ಇಡೀ ಈ ಭಾಗವನ್ನು ಕೆಂಪು ವರ್ಣದಿಂದ ತುಂಬಲಾಗಿದೆ. ಕತ್ತು ಮತ್ತು ತಲೆ ಕೂಡ ಇದೇ ರೀತಿ ಪೂರ್ಣವರ್ಣದ ರಚನೆ. ಕೈಗಳು ಭುಜದಿಂದ ಎರಡು ಬದಿಗೆ ವಕ್ರವಾಗಿ ಕೆಳಗಿ ಇಳಿಬಿದ್ದಿದೆ. ಕಾಲುಗಳಲ್ಲಿ ಪಾದಗಳನ್ನು ಸ್ಪಷ್ಟವಾಗಿ ಬಿಡಿಸಲಾಗಿದೆ. ಅವು ಒಂದೇ ದಿಕ್ಕಿಗೆ ಮುಖ ಮಾಡಿದೆ. ಪಾದಗಳಲ್ಲಿ ಕೈಗಳಲ್ಲಿ ಬೆರಳುಗಳಂತಹ ಸೂಕ್ಷ್ಮ ಭಾಗಗಳಿಲ್ಲ.

ಬಲಭಾಗದ ಗೋಡೆ ಚಿತ್ರವು ಎರಡು ವಿಶಿಷ್ಟ ಆಕೃತಿಗಳ ಚಿತ್ರಗಳಿವೆ. ಅವು ಬಹು ಅಂಕಣಗಳ ಯಂತ್ರ ಮಂಡಲ ಮಾದರಿಯ ಚಿತ್ರ ಮತ್ತು ನಾಲ್ಕು ದಳದ ಹೂ ಮಾದರಿಯ ಚಿತ್ರ. ಇದೊಂದು ಬಹು ಅಂಕಣಗಳ(೧೫ ಸೆಂ.ಮೀ x ೩೦ ಸೆಂ.ಮೀ) ಚಿತ್ರ. ಲಂಬವಾಗಿ ೪ ಅಡ್ಡವಾಗಿ ೬ ರೇಖೆಗಳ ಮೂಲಕ ಒಟ್ಟು ೩೫ ಅಂಕಣಗಳ ಆಯಾತಾಕಾರದ ಚಿತ್ರ ಬಿಡಿಸಲಾಗಿದೆ. ಈ ರೇಖೆಗಳು ವಕ್ರವಾಗಿರುವುದರಿಂದ ಅಂಕಣಗಳು ಅಸಮಪ್ರಮಾಣದಲ್ಲಿವೆ. ಈ ಆಯತಾಕೃತಿಯ ಒಟ್ಟು ಅಂಕಣದ ಮೇಲ್ಭಾಗದಲ್ಲಿ ಅದರ ಬಲಬದಿಯ ಮೂರು ಅಂಕಣಗಳ ಮೇಲೆ, ಮತ್ತೆ ಮೂರು ಸಣ್ಣ ಅಂಕಣಗಳಿವೆ. ಇದರಿಂದ ಇಡೀ ಮಂಡಲ ಚಿತ್ರ ೩೭ ಅಂಕಣವನ್ನು ೩೦ ಸೆಂ.ಮೀ. x ೩೦ ಸೆಂ.ಮೀ ಹೊಂದಿದೆ. ಈ ಮೂಲ ಅಂಕಣಗಳಲ್ಲಿ ಮೊದಲನೆಯ ಕಿರು ಅಂಕಣದ ಮೇಲೆ ಅದರಷ್ಟೆ ಅಗಲದಿಂದ ಸ್ವಲ್ಪ ಮೇಲಕ್ಕೆ ದ್ವಿರೇಖೆಗಳನ್ನು ಮೇಲಕ್ಕೆ ವಾಲಿದಂತೆ ಎಳೆಯಲಾಗಿದೆ. ಅವು ಮೇಲಕ್ಕೆ ಸಂಪೂರ್ಣವಾಗಿದೆ. ಅದರ ಮೇಲ್ಭಾಗದಲ್ಲಿ ಮತ್ತು ಇಡೀ ಮಂಡಲಾಕೃತಿಯ ತೀರ ಕೆಳ ರೇಖೆಯಲ್ಲಿ ಅಡ್ಡವಾಗಿ(ಮಂಡಲದಿಂದ ಹೊರ ಚಾಚಿ) ೨ ರೇಖೆಗಳನ್ನು ಹಾಕಲಾಗಿದ್ದು, ಅವುಗಳ ಕೊನೆಗೆ ಹೂವಿನ ರೀತಿಯ ಅಲಂಕರಣಗಳಿವೆ.

ಚಿತ್ರ ಎರಡರಲ್ಲಿ(೩೦ ಸೆಂ.ಮೀ. x ೩೦ ಸೆಂ.ಮೀ) ನಾಲ್ಕು ದಳದ ಹೂವಿನಂತೆ ತೋರುವ ಚಿತ್ರ ಒಂದಕ್ಕೊಂದು ಸಮನಾಂತರದಲ್ಲಿ ಛೇದಿಸುವ ಉದ್ದ ಮತ್ತು ಅಡ್ಡ ರೇಖೆಯನ್ನೆಳೆದು ಸಂಕಲನ ಚಿನ್ಹೆಯನ್ನು ಹಾಕಲಾಗಿದೆ. ಆ ಚಿನ್ಹೆಯ ಸುತ್ತಲೂ ಅದೇ ಮಾದರಿಯಲ್ಲಿ ರೇಖೆಯನ್ನು ಎಳೆದು

ಹೂವಿನ ದಳದ ರೀತಿಯಲ್ಲಿ ಚಿತ್ರ ಮೂಡಿಸಲಾಗಿದೆ. ದಳದ ತುದಿಗಳು ಸಂಪೂರ್ಣವಾಗಿವೆ. ಇಡೀ ಚಿತ್ರವನ್ನು ದಪ್ಪವಾದ ರೇಖೆಯಲ್ಲಿ ಚಿತ್ರಿಸಲಾಗಿದೆ.

### ಕಲ್ಲಾಸರೆ : ಎರಡು

ದೊಡ್ಡ ಬಂಡೆಯೊಂದು ಪೂರ್ವಪಶ್ಚಿಮವಾಗಿ ಇದೆ. ಅದರ ಉತ್ತರ ಬದಿಯಲ್ಲಿ ಕಲ್ಲಾಸರೆ ಉಂಟಾಗಿದ್ದು, ಚಿತ್ರಗಳ ರಚನೆಗೆ ಫಲಕ ಪ್ರಶಸ್ಥವಾಗಿದೆ. ಆದರೆ ಆಸರೆ ಆಳವಾಗಿಲ್ಲದೇ ಇರುವುದರಿಂದ ಚಿತ್ರಿತ ಭಾಗ ಮಳೆಗೆ ಸಿಲುಕಿ ಮಾಸಿದೆ. ಪರಿಣಾಮವಾಗಿ ಇಲ್ಲಿದ್ದ ಅನೇಕ ಚಿತ್ರಗಳು ನಾಶವಾಗಿರುವಂತೆ ತೋರುತ್ತದೆ. ಸದ್ಯ ಇಡೀ ಫಲಕದ ಎರಡು ಕೊನೆಗೆ ಮಾತ್ರ ಚಿತ್ರಗಳು ಉಳಿದಿವೆ. ಅದರ ಬಲಮೂಲೆಯಲ್ಲಿ ದನ ಮತ್ತು ಎರಡು ಮಾನವಾಕೃತಿಗಳು ಹಾಗೂ ಎಡ ಮೂಲೆಯಲ್ಲಿ ದನದ ಚಿತ್ರವಿದೆ.

ಜಿಂಕೆ ಚಿತ್ರವು(೩೦ ಸೆಂ.ಮೀ x ೩೦ ಸೆಂ.ಮೀ) ಬಲ ಮೂಲೆಯಲ್ಲಿದ್ದು, ಸರಳವಾದ ರೇಖಾ ಚಿತ್ರವಾಗಿದೆ. ಮುಖ, ಕೋಡು, ಕುತ್ತಿಗೆ, ದೇಹ, ಕಾಲ ಮತ್ತು ಬಾಲಗಳು ಸ್ಪಷ್ಟವಾಗಿವೆ. ಜಿಂಕೆ ಮುಖವನ್ನು ಎತ್ತಿ ನಿಂತಿರುವ ಭಂಗಿಯಲ್ಲಿದೆ. ಮುಖ ತೆಳವಾಗಿದೆ, ಕೋಡು ಮತ್ತು ಮುಖದ ರಚನೆಗಾಗಿ ಒಂದೇ ರೇಖೆಯನ್ನು ಬಳಸಿರುವುದು ವಿಶೇಷ. ಕತ್ತು ಕುತ್ತಿಗೆ ಸಂಪೂರ್ಣವಾಗಿ ನೀಳವಾಗಿದೆ. ಮುಖದ ಕೆಳದವಡೆಯನ್ನು ಸಂಕೇತಿಸುವ ರೇಖೆ, ಕುತ್ತಿಗೆಯಾಗಿ, ಕಾಲಾಗಿ ರೂಪಿಸುವುದು ಕಲಾಕಾರರ ನೈಪುಣ್ಯತೆಗೆ ಸಾಕ್ಷಿಯಾಗಿದೆ. ನಾಲ್ಕು ಕಾಲುಗಳು ರೇಖೆಯಲ್ಲಿವೆ. ಬಾಲಗಳಿಲ್ಲ, ಮೈಮೇಲೆ ವಕ್ರವಾಗಿ ಮೇಲಿಂದ ಕೆಳಕ್ಕೆ ರೇಖೆಗಳನ್ನು ಎಳೆಯಲಾಗಿದೆ.

ಮನುಷ್ಯ ಚಿತ್ರವು ಜಿಂಕೆ ಚಿತ್ರದ ಕೆಳಭಾಗದಲ್ಲಿ ಎರಡು ಮನುಷ್ಯ ಚಿತ್ರಗಳಿವೆ. ಸರಳ ರೇಖಾ ಚಿತ್ರಗಳಾಗಿದ್ದು, ಎರಡು ತ್ರಿಕೋನಗಳನ್ನು ಎದುರಾಗಿಸಿದಂತೆ ತೋರುವ ರೇಖೆಯಲ್ಲಿ ದೇಹ, ಸೊಂಟ ಭಾಗವನ್ನು ರಚಿಸಲಾಗಿದೆ. ತಲೆ ಒಂದು ಚಿಕ್ಕ ವೃತ್ತ ಮಾತ್ರ. ಕೈಕಾಲುಗಳಿಗೆ ಸರಳ ರೇಖೆಗಳನ್ನೆಳೆಯಲಾಗಿದೆ.

ಚಿತ್ರ ಎರಡರಲ್ಲಿ(೪೫ ಸೆಂ.ಮೀ x ೩೦ ಸೆಂ.ಮೀ) ಮೊದಲು ಜಿಂಕೆಯ ರೀತಿ ಇದೆ. ಆದರೆ ಮುಖ, ಕೋಡು, ಕಾಲುಗಳ ರಚನೆ ಭಿನ್ನವಾಗಿದೆ. ಮುಖ ಸಹಜವಾಗಿದೆ. ಕೋಡು ರೋಮನ್ ಆಕಾರದಲ್ಲಿವೆ. ಮೊದಲ ಜಿಂಕೆಯಲ್ಲಿ ಕಾಲಿನ ರೇಖೆಗಳು ಸೇರ್ಪಡೆಗೊಳ್ಳದೇ ಇರುವುದರಿಂದ ನಾಲ್ಕು ಕಾಲುಗಳ ಕಲ್ಪನೆ ಉಂಟಾಗುತ್ತದೆ. ಆದರೆ ಇಲ್ಲಿ ಮುಂದಿನ ಮತ್ತು ಹಿಂದಿನ ಕಾಲಿನ ರೇಖೆಗಳು

ಕೆಳಗೆ ಬಂದಂತೆ ಸಂಪೂರ್ಣವಾಗಿ ಕೂಡಿವೆ. ಇದರಿಂದ ಅಲ್ಕು ಕಾಲುಗಳು ಎರಡು ದಪ್ಪ ಕಾಲಗಳಲ್ಲಿ ವ್ಯಕ್ತವಾಗುತ್ತವೆ. ಈ ಜಿಂಕೆಯ ಮೈಮೇಲೂ ಕೂಡ ವಕ್ರ ರೇಖೆಗಳಿವೆ.

**ಕಲ್ಲಾಸರೆ : ಮೂರು**

ಈ ಕಲ್ಲಾಸರೆಯು ಎರಡನೆಯ ಕಲ್ಲಾಸರೆಯ ಎದುರಿಗೆ ಇದೆ. ಈ ಚಿತ್ರಗಳ ಬದಿಯಲ್ಲಿ ಗವಿ ಇದೆ. ಇಲ್ಲಿ ಎತ್ತು, ಗಿಡಿದ ರೀತಿಯ ಚಿತ್ರ ಮತ್ತು ಒಬ್ಬ ವ್ಯಕ್ತಿಯ ಚಿತ್ರಗಳಿವೆ. ಇಡೀ ಚಿತ್ರ ದನಗಾಯಿಯನ್ನು ಸೂಚಿಸುತ್ತದೆ.

ಎತ್ತಿನ(೦.ಸೆಂ.ಮೀ x ೨೨.ಸೆಂ.ಮೀ) ಚಿತ್ರವು ಸೊಗಸಾಗಿದೆ. ನಿಂತ ಪಾರ್ಶ್ವಬದಿಯದು ದೇಹದ ದಪ್ಪದಷ್ಟೇ ಕತ್ತು ದಪ್ಪವಿದೆ. ಬದಿಯ ಚಿತ್ರವಾಗಿರುವುದರಿಂದ ಎರಡು ಕಾಲುಗಳನ್ನಷ್ಟೇ ತೋರಿಸಲಾಗಿದೆ. ಕೋಡುಗಳು ದಪ್ಪವಾಗಿ U ಆಕಾರದಲ್ಲಿದೆ. ಅವುಗಳು ತುದಿಯಲ್ಲಿ ಒಳಭಾಗಕ್ಕೆ ಸ್ವಲ್ಪ ಭಾಗಿವೆ. ಪ್ರಾಣಿಯ ದೇಹದ ತುಂಬ ವಕ್ರವಾಗಿ ಅಡ್ಡರೇಖೆಗಳನ್ನು ಹಾಕಲಾಗಿದೆ. ಶಿಶ್ನವನ್ನು ಬಿಡಿಸಲಾಗಿದೆ. ನಿಂತ ಭಂಗಿ ಅತ್ಯಂತ ಸಹಜವಾಗಿದೆ.

ಹೂಗಿಡ(೩೦ಸೆಂ.ಮೀ)ವು ಎತ್ತಿನ ಚಿತ್ರದ ಹಿಂದೆ ಇದೆ. ಒಂದು ಸರಳ ರೇಖೆಯನ್ನು ಲಂಬವಾಗಿ ಎಳೆದಿದ್ದು, ಅದರ ತುದಿಯಲ್ಲಿ ತ್ರಿಶೂಲ ರೀತಿಯ ಕವಲನ್ನು ಮಾಡಲಾಗಿದೆ. ಪ್ರಾಯಶಃ ಹೂವೆಂದು ತೋರುತ್ತದೆ. ಕೆಳಗೆ ರೇಖೆಯಲ್ಲಿ ಕಾಂಡ ಅಂತರದಲ್ಲಿ ಮೂರು ಅರಳೆ ಎಲೆಯಾಕಾರಗಳನ್ನು ತೋರಿಸಲಾಗಿದೆ. ವಿಶೇಷವೆಂದರೆ ಎಲೆಗಳನ್ನು ರೇಖೆಯ ಎರಡು ಬದಿಗೆ ಅರ್ಧ ಅರ್ಧ ಬರುವಂತೆ ಚಿತ್ರಿಸಲಾಗಿದೆ.

ಮನುಷ್ಯನ ಚಿತ್ರಾನ್ನ (೧೫ ಸೆಂ.ಮೀ x ೩೪ ಸೆಂ.ಮೀ) ಛಾಯ ರೂಪದಲ್ಲಿದ್ದು, ನಡೆಯುತ್ತಿರುವ ಭಂಗಿಯಲ್ಲಿದೆ. ಎರಡು ತ್ರಿಕೋನಗಳನ್ನು ಪರಸ್ಪರ ಎದುರಾಗಿ ಮೇಲೆ ಕೆಳಗೆ ಇರಿಸಿದಂತೆ ತೋರುವ ರೀತಿಯ ದೇಹದ ರಚನೆ ಇದೆ. ಮೇಲಿನ ಭಾಗ ಭುಜ ಹಾಗೂ ಸೊಂಟ ಭಾಗವನ್ನು ಸ್ಪಷ್ಟವಾಗಿ ನಿದರ್ಶಿಸುತ್ತಿದೆ. ಕೆಳಗಿನ ತ್ರಿಕೋನ ಭಾಗ ಪ್ರಾಯಶಃ ಉಡುಪಾಗಿರಬಹುದು. ಮೊಣಕಾಲ ಕೆಳಗಿನವರೆಗೆ ಉಡುಪು ಇದ್ದು, ಅದಕ್ಕೆ ಕೆಳಗೆ ಕಾಲುಗಳು ಇವೆ. ಪಾದಗಳನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಕೈಗಳು ಭುಜದಿಂದ ಕೆಳಕ್ಕೆ ಇಳಿಬಿದ್ದಿದ್ದು, ಮುಂಗೈಗಳು ಹಿಂದೆ ಮುಂದೆ ಹೊರಳಿವೆ. ಕೈಗಳಲ್ಲಿ ಬೆರಳುಗಳನ್ನು ಸ್ಪಷ್ಟವಾಗಿ ಬಿಡಿಸಲಾಗಿದೆ. ಒಟ್ಟು ಚಿತ್ರ ಮನುಷ್ಯನ ಚಲನಶೀಲತೆಯನ್ನು ಸೂಕ್ತವಾಗಿ ಅಭಿವ್ಯಕ್ತಿಸುತ್ತದೆ.

## ಕಲ್ಲಾಸರೆ : ನಾಲ್ಕು

ಈ ಕಲ್ಲಾಸರೆಯು ಮೂರನೆಯ ಕಲ್ಲಾಸರೆಯ ಬದಿಯಲ್ಲಿದೆ. ಇಲ್ಲಿ ಐದು ಎತ್ತುಗಳ, ಎರಡು ಹುಡಗಳ ಮತ್ತು ಒಂದು ಮನುಷ್ಯ ಚಿತ್ರವಿದೆ. ಮೇಲ್ಪದಿಯಲ್ಲಿ ಒಂದು ಚಿಕ್ಕ ಅಳತೆಯ ಮತ್ತು ದೊಡ್ಡದಾದ ಎತ್ತಿನ ಚಿತ್ರಗಳಿವೆ. ಅದರ ಕೆಳಭಾಗದಲ್ಲಿ ಭಾಗಶಃ ನಾಶವಾಗಿ ಅಸ್ಪಷ್ಟವಾಗಿ ಕಾಣುವ ಹಲ್ಲಿಯ ರೀತಿಯ ಪ್ರಾಣಿಯ ಚಿತ್ರಗಳಿವೆ. ಅದರ ಬದಿಗೆ ಸ್ವಲ್ಪ ಕೆಳಭಾಗದಲ್ಲಿ ಎತ್ತು ಮತ್ತು ಮನುಷ್ಯ ಚಿತ್ರಗಳಿವೆ. ಇಡೀ ಚಿತ್ರಗಳ ಕೆಳಭಾಗದಲ್ಲಿ ಎದುರಾಗಿ ನಿಂತ ಎತ್ತಿನ ಜೋಡಿ ಇದೆ.

ಎತ್ತಿನ ಎಲ್ಲ ಚಿತ್ರಗಳಲ್ಲಿ ದೊಡ್ಡ ಪ್ರಮಾಣದ ಚಿತ್ರ ಮುಖ್ಯವಾಗಿ ಗಮನ ಸೆಳೆಯುತ್ತದೆ. ಇದು ನಿಂತ ಭಂಗಿಯ ಪಾರ್ಶ್ವಬದಿಯ ಚಿತ್ರ. ದೊಡ್ಡ ಕೋಡುಗಳು, ಚಿಕ್ಕ ಇಣಿ, ಬಾಲ, ಮುಖ ಕಾಲುಗಳಿಂದ ಚಿತ್ರಪೂರ್ಣವಾಗಿದೆ. ಕೋಡುಗಳು U ಆಕಾರದಲ್ಲಿ ದೊಡ್ಡ ಆಳತೆ(೩೦ ಸೆಂ.ಮೀ) ಯಲ್ಲಿವೆ. ಮುಖದ ಭಾಗವನ್ನು ಪೂರ್ಣವರ್ಣದಿಂದ ತುಂಬಲಾಗಿದೆ. ಇಣಿ ಬಹಳ ಚಿಕ್ಕದಿದೆ. ಬೆನ್ನು ಸರಳ ರೇಖೆಯಲ್ಲಿದೆ. ಬಾಲದ ತುದಿಯಲ್ಲಿ ಮೂರು ರೇಖೆಗಳ ಕುಚ್ಚನ್ನು ತೋರಿಸುವುದು ಗಮನಾರ್ಹ. ಮೇಮೇಲೆ ವಕ್ರವಾಗಿ ಒಂದಕ್ಕೊಂದು ಛೇದಿಸುವ ಅನೇಕ ರೇಖೆಗಳಿವೆ. ಶಿಶ್ನವನ್ನು ಹೊಂದಿದೆ. ಉಳಿದ ನಾಲ್ಕು ಎತ್ತುಗಳ ರಚನೆ ಇದೇ ಎತ್ತಿನ ರೀತಿಯಲ್ಲಿದ್ದರೂ, ಅದರಷ್ಟು ಸ್ಪಷ್ಟವಾಗಿಲ್ಲ. ಮತ್ತು ಇವುಗಳಲ್ಲಿ ದೊಡ್ಡ ಎತ್ತಿನ ಹಿಂದಿನ ಎತ್ತಿನ ಮೈಮೇಲೆ ೩ ಅಡ್ಡ ರೇಖೆಗಳಿದ್ದರೇ ಉಳಿದ ಯಾವುದಕ್ಕೂ ರೇಖೆಗಳಿಲ್ಲ. ಅವುಗಳ ಕೋಡುಗಳು V ಆಕಾರದಲ್ಲಿವೆ.

ಕೆಳಗಿನ ಎತ್ತಿನ ಮುಂಭಾಗದಲ್ಲಿ ಮನುಷ್ಯಾಕೃತಿಯೊಂದಿದೆ. ದ್ವಿತ್ರಿಕೋನಾಕಾರದ ಮುಂಡ ಸರಳ ರೇಖೆಯ ಕೈ,ಕಾಲುಗಳು ಇವೆ. ಕತ್ತು ದುಂಡಾದ ತಲೆ ಇದ್ದು, ತಲೆಯ ಸುತ್ತಲೂ ಕಿರಣಗಳ ರೀತಿಯಲ್ಲಿ ರೇಖೆಗಳನ್ನು ಹಾಕಲಾಗಿದೆ. ಪ್ರಾಯಶಃ ಅವು ಕೊದಲುಗಳನ್ನು ನಿದರ್ಶಿಸುತ್ತಿರಬಹುದು. ಬಲಬದಿಯ ಎರಡು ಪ್ರಾಣಿ ಚಿತ್ರಗಳು ಮಾಸಿ ಅಸ್ಪಷ್ಟವಾಗಿ ಕಾಣಿಸುತ್ತವೆ. ಉಳಿದ ಭಾಗವನ್ನು ಗಮನಿಸಲಾಗಿ ಉಡಗಳೆಂದು ತೋರುತ್ತವೆ. ಉದ್ದವಾದ ಮೂತಿ, ಮುಂದಿನ ಕಾಲುಗಳು, ಅರೆ ದೇಹಗಳು ಕಾಣಿಸುತ್ತಿವೆ.

## ಕಲ್ಲಾಸರೆ : ಐದು

ಕರಡಿವಟ್ಲ ಗುಡ್ಡದ ದಕ್ಷಿಣ ತುದಿಯ ಸಾಲಿನಲ್ಲಿ ಈ ಕಲ್ಲಾಸರೆ ಇದೆ. ಇಲ್ಲಿ ಎರಡು ಎತ್ತು, ಮತ್ತು ಒಂದು ಮನುಷ್ಯ ಚಿತ್ರ ಮತ್ತು ನಾಯಿಯ ಚಿತ್ರಗಳು ಇವೆ. ಉಳಿದಂತೆ ಇತರ ಚಿತ್ರಗಳು ಮಾಸಿದ್ದು, ಸ್ಪಷ್ಟವಾಗುವುದಿಲ್ಲ. ಪ್ರಸ್ತುತ ಚಿತ್ರಗಳು ಕೂಡ ಮಾಸಿವೆ.

ಮನುಷ್ಯ ಚಿತ್ರ(೪೫ ಸೆಂ.ಮೀ. x ೨೨ ಸೆಂ.ಮೀ) ದ ರಚನೆ ವಿಶಿಷ್ಟವಾಗಿದೆ. ಸಾಮಾನ್ಯವಾದ ಮನುಷ್ಯ ಚಿತ್ರಕ್ಕಿಂತ ಇದು ಭಿನ್ನವಾಗಿದೆ. ದೇಹಕ್ಕೆ ಉದ್ದವಾದ ಅಂಗಿ ಮತ್ತು ಧೋತಿಯನ್ನು ಧರಿಸಿದಂತೆ ತೋರುತ್ತದೆ. ಅಂಗಿಯಲ್ಲಿ ಗುಂಡಿಗಳ ಭಾಗದಲ್ಲಿ ರೇಖೆ ಇದೆ. ಇದರಿಂದ ಉದ್ದವಾದ ಅಂಗಿ ಧರಿಸಿದಂತೆ ಕಾಣುತ್ತದೆ. ಕೈಗಳು ಭುಜದ ಎರಡೂ ಬದಿಗೆ ಇಳಿ ಬಿದ್ದಿದ್ದು, ಅದರ ಕೊನೆಗೆ ಎರಡೂ ಬದಿ ನಾಲ್ಕು ಗೆರೆಗಳನ್ನು ಎಳೆದು ಬೆರಳುಗಳನ್ನು ಸೂಚಿಸಲಾಗಿದೆ.

ಪಾರ್ಶ್ವ ಬದಿಯ ಎತ್ತಿನ(೩೭ ಸೆಂ.ಮೀ x ೩೦ ಸೆಂ.ಮೀ)ಚಿತ್ರವಿದ್ದು, ಕೋಡುಗಳು ವಜ್ರಾಕೃತಿಯಲ್ಲಿ ಭಾಗಿವೆ. ಮುಖ, ಕತ್ತು ಸಹಜವಾಗಿದೆ. ಬಾಲದ ತುದಿಯಲ್ಲಿ ೩ ರೇಖೆಗಳ ಕುಚ್ಚನ್ನು ಬಿಡಿಸಲಾಗಿದೆ. ಗುದಭಾಗದಿಂದ ಅಡ್ಡ ಗೆರೆಯನ್ನು ಎಳೆಯಲಾಗಿದ್ದು, ಅದೇ ಮುಂದೆ ಶಿಶ್ನವಾಗಿ ಸಂಕೇತಿಸುತ್ತದೆ.

ನಾಯಿಯ ಚಿತ್ರ(೧೫ ಸೆಂ.ಮೀ. x ೧೫ ಸೆಂ.ಮೀ) ರಚನೆ ಸರಳವಾಗಿದೆ. ದ್ವಿರೇಖೆಯ ಚಿತ್ರವಿದೆ. ಎತ್ತಿನ ಮುಖ, ಕತ್ತು ಮತ್ತು ಮುಂದಿನ ಕಾಲುಗಳನ್ನು ಒಂದು ದ್ವಿ ರೇಖೆಯಲ್ಲಿ, ದೇಹ ಹಾಗೂ ಹಿಂದಿನ ಕಾಲುಗಳನ್ನು ಮತ್ತೊಂದು ದ್ವಿ ರೇಖೆಯಲ್ಲಿ ಚಿತ್ರಿಸಲಾಗಿದೆ. ದೇಹ ಕಾಲುಗಳು ಸರಳ ರೇಖೆಯಲ್ಲಿವೆ. ಬಾಲವು ಚಿಕ್ಕದಿದ್ದು, ಮೇಲಕ್ಕೆ ಎತ್ತರಿಸಿದೆ. ಉಳಿದ ಚಿತ್ರಗಳು ಅಸ್ಪಷ್ಟವಾಗಿ ಗೋಚರಿಸುತ್ತಿದ್ದು, ನಿರ್ದಿಷ್ಟವಾಗಿ ಗುರುತಿಸಲು ಅಸಾಧ್ಯ.

### ಕಲ್ಲಾಸರೆ : ಆರು

ಈ ಕಲ್ಲಾಸರೆಯು ವಿಶಾಲವಾಗಿದೆ. ಮೂರು ಬೃಹತ್ತಾದ ಗುಂಡುಗಳು ಪರಸ್ಪರ ಎದುರು ಬದುರಿಗೆ ಇದ್ದು, ಮಧ್ಯದಲ್ಲಿ ವಿಶಾಲವಾದ ಅಂತರವಿದೆ. ಪೂರ್ವಬದಿಯ ಗುಂಡು ಒಳಭಾಗದಲ್ಲಿ ಭಾಗಿದ್ದು, ಸೊಗಸಾದ ಆಸರೆಯಾಗಿದೆ. ಈ ಆಸರೆಯಲ್ಲಿ ವರ್ಣಚಿತ್ರಗಳಿವೆ. ಇಲ್ಲಿ ಒಟ್ಟು ಪರಸ್ಪರ ಎದುರಾಗಿ ನಿಂತ ೩ ಜೋಡಿ ಎತ್ತುಗಳು, ಒಂದರ ಹಿಂದೆ ಒಂದು ಇರುವ ಎರಡು ಎತ್ತುಗಳು ಒಟ್ಟು ಎಂಟು ಎತ್ತುಗಳ ಚಿತ್ರಗಳು ಮತ್ತು ಎರಡು ಜಿಂಕೆಗಳ ಸಣ್ಣ ಚಿತ್ರಗಳಿವೆ.

ಒಂದು ಜೋಡಿ ಚಿತ್ರಗಳು ಇಡೀ ಚಿತ್ರಗಳಲ್ಲಿ ದೊಡ್ಡವು. ಸರಳವಾಗಿ ಚಿತ್ರಿಸಿದ ರೇಖಾ ಚಿತ್ರಗಳಿವು. ಕೋಡು ಇಣಿ, ಬಾಲಗಳನ್ನು ಬಿಡಿಸಲಾಗಿದೆ. ಕೋಡುಗಳಿಗೆ ಅಲಂಕರಣ ಮಾಡಲಾಗಿದೆ (ತುದಿಯಲ್ಲಿ). ಬಾಲ ಕಾಲಿನವರೆಗೆ ಇಳಿಬಿದ್ದಿದ್ದು, ೩ ಗೆರೆಗಳಿಂದ ಅವುಗಳ ಕುಚ್ಚನ್ನು ತೋರಿಸಲಾಗಿದೆ. ಬಲಬದಿಯ ಎತ್ತಿಗೆ ಶಿಶ್ನವನ್ನು ಬಿಡಿಸಲಾಗಿದೆ. ಶಿಶ್ನದ ಮೇಲ್ಭಾಗದಿಂದ ಮುಂದಿನ ಕಾಲಿಗೆ ಸೇರುವಂತೆ ದೇಹದ ಕೆಳಗೆ ಒಂದು ಸಮಾನಾಂತರ ರೇಖೆಯನ್ನು ಎಳೆದಿರುವುದು ವಿಶೇಷವಾಗಿದೆ.

ಅದರ ಮುಂದಿನ ಎತ್ತಿನ ಇಣೆ ಸಂಪೂರ್ಣ ಬಣ್ಣದಿಂದ ಬಳಿದಿದೆ. ೨ನೇ ಜೋಡಿಯವು ಅಳತೆಯಲ್ಲಿ ಚಿಕ್ಕವು. ಇವುಗಳಿಗೆ ಕೋಡಿನ ತುದಿಯಲ್ಲಿ ಅಲಂಕರಣವಿಲ್ಲ. ಇಲ್ಲೂ ಕೂಡ ಕೇವಲ ಒಂದೇ ಎತ್ತಿಗೆ (ಎಡ) ಶಿಶ್ನ ಬಿಡಿಸಲಾಗಿದೆ. ಅದರ ಇಣೆಯನ್ನು ಕೂಡ ಪೂರ್ಣ ವರ್ಣದಿಂದ ತುಂಬಲಾಗಿದೆ.

೩ನೆಯ ಜೋಡಿಯಲ್ಲಿ ಬಲಬದಿಯ ಎತ್ತು ಮಾತ್ರ ಸ್ಪಷ್ಟವಾಗಿದ್ದು, ಅದರ ಮುಂದಿನದು ಅಸ್ಪಷ್ಟವಿದೆ. ಮೊದಲಿಗೆ ಎತ್ತಿನ ಮುಖದಲ್ಲಿ ದೊಡ್ಡದಾಗಿ ಬಿಡಿಸಲಾಗಿದೆ. ಮುಖ ಮಾತ್ರ ಸಂಪೂರ್ಣ ವರ್ಣದಿಂದ ಕೂಡಿದೆ. ಮೇಲಿನ ೨ ಎತ್ತುಗಳು ಒಂದರ ಹಿಂದೆ ಒಂದಿದ್ದು, ಕೋಡು ಅಲಂಕರಣಗಳನ್ನಾಗಲಿ, ಶಿಶ್ನವನ್ನಾಗಲಿ ಹೊಂದಿರದ ರೇಖಾ ಚಿತ್ರಗಳಿವೆ. ತೀರ ಎಡಬದಿಗೆ ೨ ಜಿಂಕೆಗಳ ಸಣ್ಣ ಚಿತ್ರಗಳಿವೆ. ಇವು ರೇಖಾ ಚಿತ್ರಗಳು. ಮುಖವನ್ನು ಮೇಲಕ್ಕೆ ಎತ್ತಿ ನಿಂತಿವೆ. ಬಾಲ ಕೂಡ ಮೇಲಕ್ಕೆತ್ತಿವೆ. ಇವು ಚಿಕ್ಕವಾದರೂ ಜಿಂಕೆಯ ಪ್ರಬಲ ಪ್ರಾತಿನಿಧಿಕ ಚಿತ್ರಗಳಾಗಿವೆ.

ಕುದುರೆಯಂತೆ ತೋರುವ(೦.೫೭ ಮೀ. ಎತ್ತರ x ೦.೪೨ ಮೀ-೩೩ x ೩೦ ಮೀ.) ಎರಡು ಪ್ರಾಣಿಯ ಚಿತ್ರಗಳಿವೆ. ಮೇಲುನೋಟಕ್ಕೆ ಕುದುರೆಗಳಂತೆ ಕಾಣುತ್ತವಾದರೂ ಅವು ಕುದುರೆಗಳಲ್ಲ. ದೇಹ ಕುದುರೆಯಂತೆ ತೋರುವ ಸಿಂಹದ ದೇಹ ಶೈಲಿಯನ್ನು ಹೊಂದಿವೆ. ಕಾಲುಗಳು ಕುದುರೆಯ ಕಾಲುಗಳಂತೆ ಎತ್ತರವಿದ್ದು, ಗೊರಸಗಳಿವೆ. ಮುಂದಿನ ಪ್ರಾಣಿಯ ಬಾಲ ದನದ ಬಾಲದಂತೆ ಉದ್ದವಿದ್ದು, ಮೇಲಕ್ಕೆತ್ತಿದೆ. ಅದರ ತುದಿಯಲ್ಲಿ ದಪ್ಪ ರೋಮದ ಕುಚ್ಚು ಇದೆ. ಹಿಂದಿನ ಪ್ರಾಣಿಗೆ ಬಾಲ ಅಷ್ಟು ಉದ್ದವಿಲ್ಲ. ಈ ಪ್ರಾಣಿಗಳ ಮುಖಭಾಗ ಮಳೆ ನೀರಿನಿಂದ ಮಾಸಿ ಹೋಗಿ ಅಸ್ಪಷ್ಟವಾಗಿದೆ. ಮೊದಲನೆಯ ಪ್ರಾಣಿಯ ತಲೆಯಲ್ಲಿ ಎತ್ತರವಾದ ಪುಕ್ಕ ಅಥವಾ ರೋಮದಂತೆ ತೋರುವ ೩ ಗೆರೆಗಳಿವೆ. ಹಿಂದಿನ ಪ್ರಾಣಿಯ ಮುಖ ಸಿಂಹದಂತೆ ತೋರುತ್ತದೆ. ಹೀಗೆ ಇವು ವಿಚಿತ್ರ ಚಿತ್ರಗಳಾಗಿವೆ.

ಎದುರಿನಲ್ಲಿ ಸೂರ್ಯಕಾಂತಿ(೦.೭೦ ಮೀ ಎತ್ತರ x ೨.ಮೀ ಅಗಲ) ಹೂವಿನ ಗಿಡದ ಚಿತ್ರವಿದೆ. ಎತ್ತರವಾದ ಕಾಂಡ ಅದಕ್ಕೆ ಎರಡು ಬದಿ ಇಳಿಬಿದ್ದ ರೆಂಬೆಗಳಿವೆ. ಅವುಗಳ ತುದಿಯಲ್ಲಿ ಕೆಲವಕ್ಕೆ ಅರಳಿದ ಹೂ ಮತ್ತು ಕೆಲವಕ್ಕೆ ಮೊಗ್ಗುಗಳಿವೆ. ಗಿಡಿದ ತುಂಬ ಹೂ ಮೊಗ್ಗುಗಳಿವೆ. ಒಂದೂ ಎಲೆ ಇಲ್ಲ. ಮತ್ತೊಂದು ಗಿಡದಲ್ಲಿ ಒಂದು ಮೊಗ್ಗು ಇದ್ದು, ಎಲೆ ಹೂಗಳೆಲ್ಲ ಉದುರಿದಂತೆ ಬೋಳಾಗಿರುವ ರೆಂಬೆಗಳಿವೆ. ಇನ್ನೊಂದು ಗಿಡ ಇದೇ ರೀತಿ ಇದೆ. ಆನೆಯ(೦.೪೨ ಮೀ. ಉದ್ದ) ರೇಖಾಚಿತ್ರವು ಸಹಜವಾಗಿಲ್ಲ. ಮುಖ ಅಶ್ವಥ ಗಿಡದ ಎಲೆಯಾಕಾರದಲ್ಲಿ, ಸೊಂಡಿಲು ತೆಳವಾದ ರೇಖೆಯಲ್ಲಿ ಇದೆ. ಪುಷ್ಠಭಾಗ ಕಿರಿದಾಗಿದೆ. ಕಾಲುಗಳು ತೀರ ಸಂಪೂರವಾಗಿವೆ.

## ಕಲ್ಲಾಸರೆ : ಎಂಟು

ಈ ಕಲ್ಲಾಸರೆ ಪಶ್ಚಿಮಾಭಿಮುಖಿಯಾಗಿದೆ. ಬೃಹತ್ ಗುಂಡೊಂದರ ಹಿಂಬದಿಯ ಕಲ್ಲಿನಲ್ಲಿ ಆಸರೆ ಇದ್ದು, ಅದರಲ್ಲಿ ಚಿತ್ರಗಳನ್ನು ಬಿಡಿಸಲಾಗಿದೆ. ಪರಸ್ಪರ ಎದುರಾಗಿ ನಿಂತ ಎತ್ತುಗಳು, ಕೆಳಗೆ ಸವಾರ ಸಹಿತ ಆನೆ, ಆನೆಯ ಮುಂದೆ ೩ ಜನ ಮನುಷ್ಯರ, ಆನೆಯ ಹಿಂಭಾಗದಲ್ಲಿ ಎತ್ತಿನ ಹಾಗೂ ಅಲ್ಲಿಂದ ಕೆಳಗೆ ಮತ್ತೊಂದು ಎತ್ತಿನ ಚಿತ್ರಗಳಿವೆ. ಮೇಲಿನ ಎತ್ತಿನ ಚಿತ್ರಗಳ ನಂತರ ಕೆಲವು ಚಿತ್ರಗಳಿದ್ದು ಬಹಳಷ್ಟು ಮಾಸಿದೆ. ಮೇಲಿನ ಎತ್ತಿನ ಚಿತ್ರಗಳು ರೇಖಾ ಚಿತ್ರಗಳಾಗಿದ್ದು, ಪರಸ್ಪರ ಎದುರಾಗಿವೆ. ವಿಶೇಷವೆಂದರೆ ಎರಡು ಎತ್ತುಗಳ ಮುಖಗಳನ್ನು ಒಂದಕ್ಕೊಂದು ಸೇರಿದಂತೆ ತೋರಿಸಲಾಗಿದೆ. ಆನೆ ಚಿತ್ರ ಸಹಜವಾಗಿಲ್ಲ. ಕಾಲುಗಳು, ತೀರ ಚಿಕ್ಕದಾಗಿದೆ. ಮೇಲಿನ ಮನುಷ್ಯಾಕೃತಿಗಳು ಅಸ್ಪಷ್ಟವಾಗಿದೆ. ಕೊನೆಯಲ್ಲಿ ಒಂದು ಎತ್ತಿನ ಚಿತ್ರವಿದೆ.

## ಕಲ್ಲಾಸರೆ : ಒಂಭತ್ತು

ಪೂರ್ವಾಭಿಮುಖವಾಗಿರುವ ಚಿಕ್ಕ ಕಲ್ಲಾಸರೆ ಇದು. ಇಲ್ಲಿ ಕೆಂಪು ವರ್ಣದ ಮೂರು ಕಡ್ಡಿರೂಪದ ಮನುಷ್ಯಾಕೃತಿಗಳ (೧೫ ಸೆಂ.ಮೀ. ಎತ್ತರ) ಚಿತ್ರಗಳಿವೆ. ಮೂರು ಚಿತ್ರಗಳು ಮೂರು ಭಿನ್ನ ರೀತಿಯಲ್ಲಿವೆ. ಮೊದಲನೆಯ ಚಿತ್ರದಲ್ಲಿ ವೃತ್ತಾಕಾರದ ತಲೆ. ಅದಕ್ಕೆ ನಿದರ್ಶಿಸುವ ಉದ್ದವಾಗಿ ಎಳೆದ ರೇಖೆ, ಕತ್ತಿನ ಭಾಗವನ್ನು ಬಿಟ್ಟು ಅದಕ್ಕೆ ೨ ಕಡೆ ರೇಖೆಗಳು ಮತ್ತು ವಕ್ರವಾಗಿರುವ ೨ ಕಾಲಿನ ರೇಖೆಗಳು, ಕೈಗಳೂ ಅಸಮವಾಗಿ ೫ ಬೆರಳುಗಳನ್ನು ತೋರಿಸಿರುವುದು ವಿಶೇಷ.

ಎರಡನೆಯ ಚಿತ್ರದಲ್ಲಿ ವೃತ್ತಾಕಾರದ ತಲೆ, ಕಾಲು, ಕೈಗಳಿವೆ. ಇಲ್ಲಿ ತಲೆಯ ವೃತ್ತ ಪೂರ್ಣ ವರ್ಣದಿಂದ ತುಂಬಿದೆ. ಕೈಗಳನ್ನು ಕೇವಲ ಅಡ್ಡ ರೇಖೆಯನ್ನು ಎಳೆದು ಸೂಚಿಸಲಾಗಿದೆ. ಕಾಲುಗಳು ಕೂಡ ವಿಶೇಷವಾಗಿವೆ. ದೇಹ ರೇಖೆಯ ಕೊನೆಯಲ್ಲಿ ಅಡ್ಡರೇಖೆ ಎಳೆದು ಅದರ ಎರಡೂ ತುದಿಯನ್ನು ಅರೆ ವೃತ್ತಾಕಾರದಲ್ಲಿ ಕೆಳಕ್ಕೆ ಬಾಗಿಸಿ ಕಾಲುಗಳನ್ನು ರಚಿಸಲಾಗಿದೆ. ತಲೆಯಲ್ಲಿಎರಡೂ ಬದಿಗೆಎರಡೂ ರೇಖೆಗಳು ಕೆಳಗೆ ಇಳಿದಿವೆ. ಪ್ರಾಯಶಃ ಇವು ಜಡೆಗಳಾಗಿದ್ದು, ಚಿತ್ರ ಸ್ತ್ರೀಯದಾಗಿರಬೇಕು ಎನಿಸುತ್ತದೆ.

ಮೂರನೆಯ ಚಿತ್ರದಲ್ಲಿ ಮೊದಲನೆರಡಕ್ಕಿಂತ ಇದು ತೀರ ಸರಳ ಚಿತ್ರವಾಗಿದೆ. ಸಣ್ಣ ಬಿಂದುವಿನಕಾರದ ತಲೆ ಅದಕ್ಕೆ ಹೊಂದಿಕೊಂಡೆ ಕೈಗಳನ್ನು ಸೂಚಿಸುವ ಅಡ್ಡರೇಖೆ, ತಲೆಯಿಂದ ಕೆಳಕ್ಕೆ ನೇರವಾಗಿ ಎಳೆದ ರೇಖೆ ದೇಹವನ್ನು ಸೂಚಿಸುತ್ತದೆ. ವಕ್ರ ರೇಖೆಯಲ್ಲಿ ಎರಡು ಕಾಲುಗಳಿವೆ.

## ಕಲ್ಲಾಸರೆ : ಹತ್ತು

ವಾನಭದ್ರೇಶ್ವರ ದೇವಾಲಯದ ಕಾಲುದಾರಿಯ ಎದುರಿನಲ್ಲಿ ಪೂರ್ವಕ್ಕೆ ಬೆಟ್ಟದ ಮೇಲೆ ಕಲ್ಲಾಸರೆ ಇದೆ. ಇಲ್ಲಿಯ ಚಿತ್ರಗಳು ತೀರ ಮಾಸಿದ್ದು, ಆನೆಯ ಚಿತ್ರವನ್ನು ಗುರುತಿಸಬಹುದು. ಅದು ಹಿಂದಿನ ೭ ಮತ್ತು ೮ನೇ ಕಲ್ಲಾಸರೆಗಳ ಆನೆ ಚಿತ್ರದಂತಿದೆ.

## ಗೂಗಿಬಂಡೆ

ಗಂಗಾವತಿ ಆನೆಗುಂದಿ ರಸ್ತೆಯ ಬಸವದುರ್ಗದಿಂದ ಆಗ್ನೇಯಕ್ಕೆ ಸುಮಾರು ೧ ಕಿ.ಮೀ ದೂರದಲ್ಲಿ ಈ ಗ್ರಾಮವಿದೆ. ಇಲ್ಲಿ ಒಂದು ಗವಿ ಇದೆ.

ಶಾಲೆಯ ಪಕ್ಕ ಈ ವಿಶಾಲವಾದ ಗವಿ ಇದೆ. ಗವಿಯ ಮುಂಭಾಗದ ಛತ್ತಿನಲ್ಲಿ ವರ್ಣಚಿತ್ರಗಳಿವೆ. ಇಲ್ಲಿ ಮೂಲತಃ ಪ್ರಾಚೀನ ಚಿತ್ರಗಳಿದ್ದು, ಮುಸುಕಾಗಿದೆ. ದುರದೃಷ್ಟವಶಾತ್ ಈ ಚಿತ್ರಗಳ ಮೇಲೆ ಇತ್ತೀಚೆಗೆ ದೇವಿ, ಆಂಜನೇಯ ಮುಂತಾದ ಚಿತ್ರಗಳನ್ನು ಬರೆಯಲಾಗಿದ್ದು, ಹಳೆ ಚಿತ್ರಗಳು ಬಹುಮಟ್ಟಿಗೆ ನಾಶವಾಗಿದೆ. ಉಳಿದ ಕೆಲವು ಚಿತ್ರಗಳಲ್ಲಿ ಮೂರು ಎತ್ತಿನ ಚಿತ್ರಗಳು ಪ್ರಮುಖವಾಗಿವೆ. ೨ ಕಾಲು, ಇಣಿ ಮತ್ತು ೨ ಕೊಂಬುಗಳು ಮತ್ತು ಬಾಲಗಳನ್ನು ಇವು ಹೊಂದಿವೆ. ಎಡಭಾಗದಲ್ಲಿಯ ಕೆಳಗಿನ ಎತ್ತಿಗೆ ೪ ಕಾಲುಗಳಿವೆ. ಈ ಎತ್ತಿನ ಮೇಲೆ ವ್ಯಕ್ತಿಯೋರ್ವನು ಕುಳಿತಂತಿದೆ. ಇಲ್ಲಿಯೇ ಕೆಲವು ಬಿಳಿ ಬಣ್ಣದ(ಸುಣ್ಣ) ಮಂಗಗಳ (ಆಂಜನೇಯ?) ರೇಖಾಚಿತ್ರಗಳು ಇವೆ.

## ರಾಂಪುರ

ಈ ಗ್ರಾಮವು ಮಲ್ಲಾಪುರದಿಂದ ದಕ್ಷಿಣಕ್ಕೆ ಸು.೨ ಕಿ.ಮಿ. ದೂರದಲ್ಲಿದೆ. ಇಲ್ಲಿ ೨ ಕಲ್ಲಾಸರೆಗಳಿವೆ. ಇದು ರಾಂಪುರ ಆನೆಗುಂದಿ ರಸ್ತೆಯ ಬಲಕ್ಕೆ ಕಾಲುವೆ ದಾರಿಯಲ್ಲಿ ಕಲ್ಲಾಸರೆ:ಒಂದು ತಳವಾರ ಕರೆಪ್ಪನ ಹೊಲದ ಪಕ್ಕದ ತಾಯಮ್ಮನ ಗುಡ್ಡದಲ್ಲಿದೆ.

ಇಲ್ಲಿ ಕೆಂಪುವರ್ಣದ ಎರಡು ಮಾನವಾಕೃತಿಗಳ ಮತ್ತು ಒಂದು ನವಿಲಿನ ಚಿತ್ರವಿದೆ. ೦.೯೮ ಮೀ. ಎತ್ತವಿರುವ ಮಧ್ಯದ ಮನುಷ್ಯಾಕೃತಿಯು ಆಕರ್ಷಕವಾಗಿದೆ. ನಿಂತ ಭಂಗಿಯಲ್ಲಿದ್ದು, ಬಲಗೈ ಭುಜದ ಸಮಾನಾಂತರದಲ್ಲಿ ಉದ್ದಕ್ಕೆ ಚಾಚಿದ್ದು, ತೋರು ಭಂಗಿಯನ್ನು ನಿದರ್ಶಿಸುತ್ತದೆ. ಎಡಗೈ ಸ್ವಲ್ಪ ಮಡಚಿ ಮೇಲಕ್ಕೆತ್ತಿದೆ. ಎರಡೂ ಕೈಗಳ ಹಸ್ತ ಮತ್ತು ಬೆರಳುಗಳನ್ನು ಅತ್ಯಂತ ಸ್ಪಷ್ಟವಾಗಿ ತೋರಿಸಲಾಗಿದೆ. ಮುಖ ಬಲಕ್ಕೆ ವಾಲಿದೆ. ಮುಖ(ತಲೆ) ಕತ್ತು, ಕೊರಳ ಹಾರ ಮತ್ತು ದೇಹಗಳ ಸಂಬಂಧಗಳನ್ನು ಒಟ್ಟಾರೆ ತೋರಿಸದೆ ಅವುಗಳ ನಡುವೆ ಸ್ವಲ್ಪ ಅಂತರ ಬಿಟ್ಟು ಬಿಡಿ, ಬಿಡಿಯಾಗಿ

ತೋರಿಸಿರುವುದು ವಿಶೇಷ. ಹಾಗೆ ಎಡ ಕೈಯಲ್ಲಿ ಮೊಣಕೈಯಿಂದ ಉಳಿದ ಭಾಗವನ್ನು ಇಡಿಯಾಗಿ ತೋರಿಸದೇ ಪ್ರತ್ಯೇಕವಾಗಿ ಬಿಡಿಸಲಾಗಿದೆ. ಅಗಲ ಭುಜ, ತೆಳುವಾದ ಸೊಂಟ, ದಪ್ಪ ಪುಷ್ಠ ಹಾಗೂ ಸೂಕ್ತ ಅಳತೆಯ ಕಾಲುಗಳಿಂದ ಇಡೀ ದೇಹ ಪ್ರಮಾಣಬದ್ಧವಾಗಿ ಗೋಚರಿಸುತ್ತದೆ. ಕೊರಳಲ್ಲಿಯ ೬ ತ್ರಿಕೋನಾಕಾರಗಳ ಸರದ ಅಲಂಕರಣೆ ಅಪರೂಪದ್ದಾಗಿದೆ.

ದೊಡ್ಡ ಮನುಷ್ಯಾಕೃತಿಯ ಬಲಗಾಲಿನ ಪಕ್ಕದಲ್ಲಿ ಮತ್ತೊಂದು ಅಸ್ಪಷ್ಟ ಮನುಷ್ಯಾಕೃತಿ ಇದೆ. ಅದರ ಎತ್ತರ ೦.೫೨ ಮೀ. ನೀಳವಾದ ಕಾಲುಗಳಿವೆ. ಬಲಗೈ ಕೆಳಕ್ಕೂ ಎಡಗೈಯನ್ನು ಮೇಲಕ್ಕೂ ಎತ್ತಿದೆ. ಕೈ ಬೆರಳುಗಳೂ ಇಲ್ಲಿ ಕೂಡ ಸ್ಪಷ್ಟವಾಗಿವೆ. ಇನ್ನೊಂದು ಕಾಲಿನ(ಎಡಗಾಲು) ಹತ್ತಿರ ನವಿಲಿನ ಚಿಕ್ಕ ಚಿತ್ರವಿದೆ. ಮೈಮೇಲೆ ಪರಸ್ಪರ ವಕ್ರವಾಗಿ ಛೇದಿಸಿದ ರೇಖೆಗಳು, ತಲೆಯ ಮೇಲೆತುರಾಯಿಯು ಇದೆ.

### ಕಲ್ಲಾಸರೆ : ಎರಡು

ಮಲ್ಲಾಪುರ ಜಲವಿದ್ಯುದಾಗರದ ದಕ್ಷಿಣಕ್ಕೆ ೨ ಕಿ.ಮೀ ದೂರದಲ್ಲಿ ಇರುವ ನಮನಕಲ್ ಗುಡ್ಡದ ಮೇಗಲ ಬಂಡೆಯ ಮೇಲೆ ಈ(ಕಳ್ಳರ)ಗವಿ ಇದೆ. ಇದೊಂದು ನೈಸರ್ಗಿಕ ಗವಿ. ದೊಡ್ಡ ಗುಂಡೊಂದರ ಕೆಳಭಾಗ ಪೊಳ್ಳಾಗಿ ಗವಿ ಸೃಷ್ಟಿಯಾಗಿದೆ. ಗವಿಯ ಮೇಲ್ಛಾವಣಿ ಬಹಳ ಎತ್ತರದಲ್ಲಿದೆ.

ಈ ಗವಿಯ ಮುಖಭಾಗದ ಗೋಡೆಯಲ್ಲಿ ಅಧಿಕವಾಗಿ ಮತ್ತು ಒಳಭಾಗದ ಗೋಡೆಗಳಲ್ಲಿ ಅಲ್ಲಲ್ಲಿ ಚಿತ್ರಗಳಿವೆ. ಆದರೆ ಚಿತ್ರಗಳು ಬಹಳಷ್ಟು ಮೂಸಿವೆ. ಅವುಗಳನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟ. ಆದರೂ ತಕ್ಕಮಟ್ಟಿಗೆ ಗುರುತಿಸಬಹುದಾದ ಚಿತ್ರಗಳು ಇಂತಿವೆ.

ಇಲ್ಲಿ ಅನೇಕ ಚಿತ್ರಗಳಿದ್ದ ಬಗ್ಗೆ ತಿಳಿಯುತ್ತವಾದರೂ ೩ ಮನುಷ್ಯಾಕೃತಿಗಳನ್ನು ಮಾತ್ರ ಗುರುತಿಸಬಹುದು. ಮೊದಲ ವ್ಯಕ್ತಿಯ ಚಿತ್ರವು ೦.೫೫ ಮೀ. ಎತ್ತರವಾಗಿದೆ. ತಲೆ ದುಂಡಾಗಿದೆ, ಎರಡೂ ಕೈಗಳು ಮೇಲಕ್ಕೆತ್ತಿವೆ. ದೇಹದ ಕನಿಷ್ಠ ಪ್ರಮಾಣಬದ್ಧತೆಯಲ್ಲಿ ಇರದೇ ಮೇಲಿನಿಂದ ಕೆಳಗಿನವರೆಗೆ ಒಂದೇ ಆಳತೆಯಲ್ಲಿ ನೀಳವಾಗಿದೆ. ಕಾಲುಗಳು ಎರಡು ಬದಿಗೆ ಅಗಲಿಸಿವೆ. ಇದೊಂದು ನಗ್ನ ಚಿತ್ರವೆಂಬುದು ಎರಡೂ ಕಾಲುಗಳ ಮಧ್ಯ ಚಿತ್ರಿಸಿರುವ ಶಿಶ್ನದಿಂದ ತಿಳಿಯುತ್ತದೆ. ಶಿಶ್ನವು ನೀಳವಾಗಿದ್ದು, ಮುಂಭಾಗದಲ್ಲಿ ಶಿಶ್ನ ಮಣಿ ಇದೆ. ಪಾದ ಮತ್ತು ಹಸ್ತಗಳು ಇಲ್ಲ.

ಮಧ್ಯದಲ್ಲಿ ಮತ್ತೊಂದು ಮನುಷ್ಯಾಕೃತಿ ಗೋಚರಿಸುತ್ತದೆಯಾದರೂ ಸ್ಪಷ್ಟವಾಗಿಲ್ಲ. ಕೇವಲ ದುಂಡಾದ ತಲೆ ಮತ್ತು ಭುಜ ಮಾತ್ರ ಗುರುತಿಸಬಹುದು. ಹಾಗೆ ಕೊನೆಯಲ್ಲಿ ಮನುಷ್ಯನೆಂದು

ತೋರುವ ಒಂದು ವಿಶಿಷ್ಟ ಆಕೃತಿ ಇದೆ. ದುಂಡಾದ ತಲೆಯಲ್ಲಿ ಕೋಡಿನಂತೆ ೨ ರೇಖೆಗಳಿವೆ. ಬಲಗೈಯನ್ನು ಭುಜದ ಸಮಾನಾಂತರದಲ್ಲಿ ಮುಂದಕ್ಕೆ ಚಾಚಲಾಗಿದೆ. ಎಡಭುಜಕ್ಕೆ ಹೊಂದಿಕೊಂಡು ಮೂರು ರೇಖೆಗಳಿವೆ. ಮೈಮೇಲೆ ಉದ್ದವಾದ ಮೈಪೂರ್ತಿ ಹೊದ್ದಂತೆ ಉಡುಪು ಇದೆ. ಅಲ್ಲಿ ಕೆಲವು ರೇಖೆಗಳಿವೆ. ಗವಿಯ ಒಳಭಾಗದ ಗೋಡೆಗಳಲ್ಲಿ ಒಂದು ಮೀನಿನಾಕಾರದ ವಿಶಿಷ್ಟ ಚಿತ್ರ. ಮನುಷ್ಯ, ಆಕಳು ಮತ್ತು ಚಿರತೆಯದೆಂದು ತೋರುವ ಒಂದು ಅಪೂರ್ಣ ಚಿತ್ರಗಳಿವೆ.

ಮೀನಿನಂತೆ ತೋರುವ ಚಿತ್ರವು ಲಂಭವಾಗಿದ್ದು, ೧.೧೮ ಮೀ. ಎತ್ತರವಾಗಿದೆ. ಮೇಲೆ ಮಧ್ಯದಲ್ಲಿ ಅರೆವೃತ್ತಾಕಾರವಾಗಿ ಬಾಗಿದ ಒಂದು ರೇಖೆಯಿದ್ದು, ಅದರ ಮಧ್ಯಭಾಗದಲ್ಲಿ ಸ್ವಲ್ಪ ಅಂತರವನ್ನು ಬಿಟ್ಟು ಎರಡು ರೇಖೆಗಳು ಕೆಳಕ್ಕೆ ಹೊರಟಿವೆ. ಅವು ಕೆಳಕ್ಕಿಳಿಯದಂತೆ, ಅಗಲವಾಗುತ್ತಾ ಹೋಗುತ್ತವೆ. ಪುನಃ ಕಿರಿದಾಗಿ ನಂತರ ಸ್ವಲ್ಪ ಅಗಲವಾಗಿ ಕೊನೆಗೊಂಡಿವೆ. ಈ ರೇಖೆಗಳ ತುದಿಯನ್ನು ಬೇರೊಂದು ಅಡ್ಡರೇಖೆಯಿಂದ ಕೂಡಿಸಲಾಗಿದೆ. ಈ ವಿನ್ಯಾಸದಲ್ಲಿ ಇದು ಗುಬ್ಬಚ್ಚಿ ಗೂಡಿನಂತೆ ಗೋಚರಿಸುತ್ತದೆ. ಬಲಬದಿಯ ರೇಖೆಯ ಮೇಲ್ಭಾಗದಲ್ಲಿ ಒಂದು ಚೌಕದ ಪಟ್ಟಿಯನ್ನು ಹಾಕಲಾಗಿದೆ. ಇದೊಂದು ಸಂಪೂರ್ಣ ರೇಖಾಚಿತ್ರವಾಗಿದ್ದು, ಗುರುತಿಸುವುದು ಕಠಿಣ.

ಚಿರತೆ ಎಂದು ತೋರುವ ಅಪೂರ್ಣ ಚಿತ್ರವು ಗವಿಯ ಇದೇ ಗೋಡೆಯ ಮೇಲೆ ಇದೆ. ಮುಖ ಎತ್ತರಿಸಿದ್ದು, ಚಿರತೆಯನ್ನು ಹೋಲುತ್ತದೆ. ಮುಂದೆ ಎರಡು ಕಾಲುಗಳಿವೆ. ಅರ್ಧಭಾಗದವರೆಗೆ ಮಾತ್ರ ಚಿತ್ರವಿದೆ. ಬೆನ್ನಿನ ರೇಖೆಯನ್ನು ಮಾತ್ರ ದೀರ್ಘವಾಗಿ ಎಳೆಯಲಾಗಿದೆ. ಇದೊಂದು ಸಂಪೂರ್ಣ ಛಾಯಾರೂಪದ ಚಿತ್ರವಾಗಿದೆ.

ಗವಿಯ ಎದುರು ಗೋಡೆಯಲ್ಲಿ ಮನುಷ್ಯ ಮತ್ತು ಒಂದು ಆಕಳಿನ ಚಿತ್ರಗಳಿವೆ. ಮನುಷ್ಯನ ಚಿತ್ರದಲ್ಲಿ ತಲೆಯು ಗುಂಡಾಗಿದೆ. ಎರಡು ಕೈಗಳನ್ನು ಅರ್ಧ ಮೇಲಕ್ಕೆತ್ತಿದೆ. ದೇಹವು ದೀರ್ಘವಾಗಿದ್ದು, ಏಕ ಪ್ರಕಾರದಲ್ಲಿದೆ. ದೇಹದಲ್ಲಿ ಲಂಬವಾಗಿ ರೇಖೆಗಳಿವೆ. ಒಂದು ಕಾಲು ಮಾತ್ರ ಸ್ಪಷ್ಟವಾಗಿದೆ. ಆದರೆ ಇನ್ನೊಂದು ಕಾಲಿರಬೇಕಾದ ಸ್ಥಳದಲ್ಲಿ ದಪ್ಪ ಬಾಲದಂತಹ ರಚನೆ ಇದೆ. ಮನುಷ್ಯಾಕೃತಿಯ ಮುಂಭಾಗದಲ್ಲಿ ಆಕಳಿನ ಚಿತ್ರವಿದೆ. ೨ ಕೋಡು, ೪ ಕಾಲು ಮತ್ತು ಕೆಚ್ಚಲನ್ನು ಚಿತ್ರಿಸಲಾಗಿದೆ.

ಕಲ್ಲಾಸರೆ : ಮೂರು

ರಾಂಪುರ ಆನೆಗುಂದಿ ರಸ್ತೆಯಲ್ಲಿ ಚಿನ್ನಾಪುರ ಗುಡಿ ಪಕ್ಕದಲ್ಲಿಯ ಬೆಟ್ಟದಲ್ಲಿ ಒಂದು ಶಿಲಾಶ್ರಯದಲ್ಲಿ ಚಿತ್ರಗಳಿವೆ. ಕಲ್ಲಾಸರೆಯ ಛಾವಣಿಯಲ್ಲಿ ಕೆಂಪು ವರ್ಣದ ಮನುಷ್ಯ ಚಿತ್ರಗಳು

ಮತ್ತು ಒಂದು ಪ್ರಾಣಿಯ ರೇಖಾ ಚಿತ್ರವಿದೆ. ಮನುಷ್ಯರ ಮೂರು ಚಿತ್ರಗಳಲ್ಲಿ ಮಧ್ಯದಲ್ಲಿಯದು ದೊಡ್ಡ ಪ್ರಮಾಣದಲ್ಲಿದೆ. ನಿಂತ ಭಂಗಿಯಲ್ಲಿಯ ಇದು ಎರಡು ಕೈಗಳನ್ನು ಭುಜದ ಸಮಾನಾಂತರದಲ್ಲಿ ಚಾಚಿದೆ. ಈ ಚಿತ್ರವು ಬಹಳಷ್ಟು ಮಸುಕಾಗಿದೆ. ಬಲಬದಿಯಲ್ಲಿ ಚಿಕ್ಕ ಮನುಷ್ಯ ಚಿತ್ರವೂ ಎಡಬದಿಯಲ್ಲಿ ಇನ್ನೊಂದು ರೇಖಾಕೃತಿಯ ಮನುಷ್ಯ ಚಿತ್ರಗಳಿವೆ. ಇವುಗಳ ಕೆಳಗೆ ಪ್ರಾಣಿಯ(ನಾಯಿ?) ರೇಖಾಚಿತ್ರವಿದೆ.

## ಹೊಸಪೇಟೆ ತಾಲೂಕ

### ಹಂಪಿ

#### ಕಲ್ಲಾಸರೆ : ಒಂದು

ಇದು ತುಂಗಭದ್ರಾ ನದಿ ಹತ್ತಿರದಲ್ಲಿ ಮೊಸಳಯ್ಯನ ಗುಡ್ಡದ ಸಮೀಪ ಸುಗ್ರೀವ ಗುಹೆಯ ಹಿಂದೆ ಇದೆ. ಇಲ್ಲಿ ಕ್ರಮವಾಗಿ ಬಾಣದ ಮೋನೆಯಂತಿರುವ ರೇಖಾ ಚಿತ್ರ, ಅನೇಕ ಉದ್ದ ರೇಖೆಗಳು, ಭಾಗಶಃ ನಾಶವಾಗಿರುವ ಮನುಷ್ಯ ಚಿತ್ರ, ಮೊಸಳೆ, ಹಡಗಿನ ಭಾಗ, ಜೋಡಿ ಕಣ್ಣುಗಳು ಇಷ್ಟು ಚಿತ್ರಗಳಿದ್ದು, ಚಿತ್ರಿತ ಭಾಗ ೪ ಮೀ ಮತ್ತು ೩ ಮೀ. ಅಳತೆಯಲ್ಲಿದೆ. ಇವುಗಳಲ್ಲಿ ಮನುಷ್ಯ ಚಿತ್ರ ಗಮನಾರ್ಹವಾಗಿದೆ.

ಮನುಷ್ಯ ಚಿತ್ರವು ದೊಡ್ಡ ಅಳತೆಯಲ್ಲಿದೆ. ಪಾರ್ಶ್ವಬದಿಯಲ್ಲಿದೆ. ತಲೆ ತೀರಾ ಸಣ್ಣಾಗಿದೆ. ಬಲಗೈಯನ್ನು ಮೇಲಕ್ಕೆತ್ತಿದೆ. ಮತ್ತೊಂದು ಕೈ ಕಾಣಿಸುವುದಿಲ್ಲ. ಮೈಮೇಲೆ ಅನೇಕ ರೇಖೆಗಳಿವೆ. ಕಾಲುಗಳನ್ನು ಮುಂದಕ್ಕೆ ಬಾಗಿಸಿ ನಿಂತಂತಿದೆ. ನಂತರ ಮೊಸಳೆಯ ರೇಖಾ ಚಿತ್ರ, ಕಟ್ಟಿಗೆಯ ಹಡಗಿನ ಅರ್ಧ ಭಾಗದಂತಹ ಮತ್ತು ಎರಡು ಕಣ್ಣುಗಳ ಚಿತ್ರಗಳಿವೆ.

#### ಕಲ್ಲಾಸರೆ : ಎರಡು

ಈ ಚಿತ್ರ ನೆಲೆಯು ವಿಜಯ ವಿಠ್ಠಲ ದೇವಾಲಯಕ್ಕೆ ಆಗ್ನೇಯಕ್ಕೆ ಇರುವ ಮೊಸಳಯ್ಯನ ಗುಡ್ಡದಲ್ಲಿದೆ. ಗುಂಡಿನ ಆಸರೆಗಳಲ್ಲಿ ಬಿಡಿ ಚಿತ್ರಗಳಿವೆ. ಅವು ಗೂಳಿ, ಹುಲಿ ಮತ್ತು ಮನುಷ್ಯ, ಕಾಡುಕೋಣ, ಚಿಗರೆ ಚಿತ್ರಗಳಿವೆ.

ಗೂಳಿಯ ಚಿತ್ರವು ಸಂಪೂರ್ಣ ರೇಖೆಗಳಿಂದ ರಚಿಸಲಾಗಿರುವುದು ವಿಶೇಷ. ಕೋಡುಗಳು V ಆಕಾರದಲ್ಲಿವೆ. ಕತ್ತು, ಮುಂಡ ಬಲಿಷ್ಠತೆಯನ್ನು ಸೂಚಿಸುತ್ತವೆ. ಬಾಲ ಮೇಲಕ್ಕೆತ್ತಿದೆ. ಹಿಂದಿನ ಕಾಲುಗಳನ್ನು ಊರಿ ಮುಂದಿನ ಕಾಲುಗಳನ್ನು ಮೇಲಕ್ಕೆತ್ತಿದಂತಿದೆ. ಹುಲಿಯ ಚಿತ್ರವು ಬಾಹ್ಯ

ರೇಖಾಕೃತಿಯದು. ದೇಹದ ಮೇಲೆ ಗೆರೆಗಳಿಂದ ಪಟ್ಟೆಗಳನ್ನು ಸೂಚಿಸಲಾಗಿದೆ. ಬಾಲ ಅರೆ ವೃತ್ತಾಕಾರದಲ್ಲಿ ಮಡಿಕೆ ಹಾಕಿಕೊಂಡು ಮೇಲಕ್ಕೆತ್ತಿದೆ. ಹುಲಿಯ ಚಿತ್ರ ತುಂಬ ಸಹಜವಾಗಿದೆ. ಮತ್ತೊಂದು ಫಲಕದಲ್ಲಿ ನೃತ್ಯ ಮಾಡುತ್ತಿರುವ ಭಂಗಿಯ ಮನುಷ್ಯ ಚಿತ್ರಗಳಿವೆ.

ಕಲ್ಲಾಸರೆ : ಮೂರು

ಹೇಮಕೂಟದ ದೇವಾಲಯಗಳ ಗುಂಪಿನಿಂದ ಪಶ್ಚಿಮಕ್ಕೆ ಆವರಣ ಹೊರಗೆ ಈ ಚಿತ್ರ ನೆಲೆ ಇದೆ. ಇಲ್ಲಿ ಎರಡು ಕಡೆ ಮೀನುಗಳ ಬಾಹ್ಯ ರೇಖಾ ಚಿತ್ರಗಳಿವೆ. ಮೊದಲ ಮೀನು ದೊಡ್ಡದಿದ್ದು, ಉದ್ದವಾಗಿದೆ. ದೇಹ ೩ ಭಾಗದಲ್ಲಿದೆ. ಬಾಲದ ತುದಿ V ಆಕಾರದಲ್ಲಿದೆ. ದೇಹದಲ್ಲಿ ರೋಮನ್ X ಅಕ್ಷರದಂತೆ ಅಲಂಕರಣವಿದೆ. ಇದೊಂದು ವಿಶೇಷ ಜಾತಿಯ ಮೀನಾಗಿರಬೇಕು. ಸಮೀಪದಲ್ಲಿ ಮತ್ತೊಂದು ಚಿಕ್ಕ ಮೀನಿನ ಚಿತ್ರವಿದೆ.

ಕಲ್ಲಾಸರೆ : ನಾಲ್ಕು

ವಿರೂಪಾಕ್ಷ ದೇವಾಲಯದ ಹಿಂದೆ ಈ ಕಲ್ಲಾಸರೆ ಇದೆ. ಇಲ್ಲಿ ಆರು ಮನುಷ್ಯ ಚಿತ್ರಗಳು, ಮತ್ತು ಸುಮಾರು ಹತ್ತು ಜಿಂಕೆ ಚಿತ್ರಗಳಿವೆ. ಮನುಷ್ಯ ಚಿತ್ರಗಳು ರೇಖಾಕೃತಿಯವು. ಎಲ್ಲೂ X ರೂಪದ ದೇಹವನ್ನು ಹೊಂದಿವೆ. ಮೇಲಿನ ಎರಡು ಮನುಷ್ಯ ಚಿತ್ರಗಳು ವಕ್ಷ ಸ್ಥಾನವನ್ನು ಗೆರೆಯ ಮೂಲಕ ಜೋಡಿಸಲಾಗಿದೆ. ಪ್ರಾಯಶಃ ಸಂಭೋಗ ಕ್ರಿಯೆಯನ್ನು ನಿದರ್ಶಿಸುತ್ತಿರಬೇಕು. ಈ ಎಲ್ಲಾ ಮನುಷ್ಯ ಚಿತ್ರಗಳ ತಲೆ ಪೂರ್ಣವರ್ಣದಲ್ಲಿದ್ದರೇ ಪ್ರಾಣಿಗಳ ಗುಂಪಿನ ನಡುವೆ ಇರುವ ಮನುಷ್ಯ ಚಿತ್ರದಲ್ಲಿ ತಲೆ ಬಾಹ್ಯ ರೇಖಾವೃತ್ತದಲ್ಲಿದೆ. ಕೈಯಲ್ಲಿ ಬೆರಳುಗಳನ್ನು ತೋರಿಸಲಾಗಿದೆ. ಸಾಮಾನ್ಯವಾಗಿ ದೊಡ್ಡ ಕೋಡುಗಳನ್ನು ಹೊಂದಿರುವ ಜಿಂಕೆಗಳು ಛಾಯಾರೂಪದಲ್ಲಿವೆ. ಇನ್ನೊಂದು ಗುಂಪಿನಲ್ಲಿ ಕೂಡ ನಾಲ್ಕು ಜಿಂಕೆಗಳ, ಮೂರು ಮನುಷ್ಯರ ಮತ್ತು ಒಂದು ನಾಯಿಯ ಚಿತ್ರಗಳಿವೆ.

ಕಲ್ಲಾಸರೆ : ಐದು

ವಿರೂಪಾಕ್ಷ ದೇವಾಲಯದ ಹಿಂದೆ ಸುಮಾರು ೨, ೧/೨ ಕಿ.ಮೀ ದೂರದಲ್ಲಿ ಈ ಕಲ್ಲಾಸರೆ ಇದೆ. ಬರಮ ದೇವರ ಗುಂಡಿನಲ್ಲಿ ಈ ಚಿತ್ರಗಳಿವೆ. ಕಲ್ಲಾಸರೆಯು ಸ್ವಲ್ಪವೇ ಹಿಂದೆ ಸರಿದ ಅರ್ಧ ಗೋಲಾಕೃತಿಯ ಚಿತ್ರ ಪಟದಂತಿದೆ. ಇದರ ಮೇಲೆ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಕುಣಿತದಲ್ಲಿ ತೊಡಗಿದ ನಾಲ್ಕು ಸ್ವಲ್ಪ ದೊಡ್ಡ ದೊಡ್ಡ ಮನುಷ್ಯಾಕೃತಿಗಳಿವೆ. ಎಡಗಡೆಯಿಂದ ಮೊದಲನೇ ಮೂರು ಬಲಬದಿ ನೋಟದಲ್ಲಿದೆ. ಕೊನೆಯದು ಮುಂಬದಿ ನೋಟದಲ್ಲಿದೆ.

ಮೊದಲನೇ ಎರಡು ಚಿತ್ರಗಳಲ್ಲಿ ಸ್ಪಷ್ಟವಾಗಿ ಉಬ್ಬಿದ ಸ್ತನವೂ ಕಾಣಿಸುವುದರಿಂದ ಅವು ಸ್ತ್ರೀ ಆಕೃತಿಗಳು. ಮೊದಲನೆಯದು ಪುರುಷ ಸಣ್ಣಾಕೃತಿ. ಬಹುಶಃ ಹುಡುಗನಿರಬೇಕು. ತಲೆಯ ಭಾಗವು ಅಳಿಸಿ ಹೋಗಿರಬಹುದು. ಈ ಮೂರು ಸ್ವಲ್ಪ ಕುಗ್ಗಿ ನಿಂತ ಭಂಗಿಯಲ್ಲಿವೆ. ಮುಂಡದ ಭಾಗವು ಸ್ವಲ್ಪ ಮುಂದೆ ಬಾಗಿದೆ. ಕೈಗಳನ್ನು ನೆಟ್ಟಗೆ ಮುಂಚಾಚಿದೆ ಬೆರಳುಗಳನ್ನು ಬಿಡಿಸಲಾಗಿದೆ. ಮುಖವನ್ನು ಬಲಕ್ಕೆ ಅಂದರೆ ಮುಂಬದಿಗೆ ತಿರುಗಿದೆ. ಮೊದಲನೆಯದಕ್ಕೆ ಬಾಲವಿದ್ದಂತಿದ್ದು, ಮೇಲಕ್ಕೆತ್ತಲ್ಪಟ್ಟಿದೆ. ತಲೆಯಿಂದ ಹಿಡಿದು ಕಾಲಿನವರೆಗೂ ಇಡೀ ಮೈಯೆಲ್ಲ ರೇಖಾಚಿತ್ರಗಳಿಂದ ತುಂಬಿ ಹೋಗಿದೆ. ಮುಖದ ಮೇಲೆ ಗುಣಕಾರ ಆಕೃತಿಯಿದ್ದು, ಪ್ರತಿಯೊಂದು ಕವಲಿನಲ್ಲಿಯೂ ಒಂದೊಂದು ಆರ್ಧ ಕಂಸವಿದೆ. ಕೈಗಳ ಮೇಲೆ ಉದ್ದಕ್ಕೂ ನೀಳ ರೇಖೆಗಳಿವೆ. ಮುಂಡದ ಭಾಗದ ಮೇಲೆ ದ್ವಿರೇಖೆಯ ಗುಣಾಕಾರ ಆಕೃತಿಯಿದ್ದು, ರೇಖೆಗಳ ಮಧ್ಯದಲ್ಲಿ ಅಡ್ಡ ರೇಖೆಗಳಿವೆ.

ನಾಲ್ಕನೆಯ ವ್ಯಕ್ತಿಯ ಎರಡೂ ಕೈಗಳು ಆ ಕಡೆ ಈ ಕಡೆ ಮುಂಚಾಚಿವೆ. ಇದರ ತಲೆಯ ಭಾಗ ಅಷ್ಟಾಗಿ ಸ್ಪಷ್ಟವಾಗಿಲ್ಲ. ಎದೆಯ ಭಾಗ ತೀರ ಸಣ್ಣಗಿದ್ದು, ಹೊಟ್ಟೆಯ ಭಾಗ ಅತಿರೇಕವಾಗಿ ಉಬ್ಬಿದೆ. ಕಾಲುಗಳು ಅಗಲಿಸಿದ್ದು, ಕೈಗಳಂತೆ ತೆಳ್ಳಗಿವೆ. ಇದು ಗರ್ಭಿಣಿ ಸ್ತ್ರೀ ಚಿತ್ರವಾಗಿರಬಹುದು.

### ಕಲ್ಲಾಸರೆ : ಆರು

ತುಂಗಭದ್ರಾ ನದಿಯ ತೀರದಲ್ಲಿ ಚಕ್ರ ತೀರ್ಥದ ಹತ್ತಿರ ಈ ಕಲ್ಲಾಸರೆ ಇದೆ. ಇಲ್ಲಿ ದೊಡ್ಡ ಪಕ್ಷಿ ಮತ್ತು ಮನುಷ್ಯ ಚಿತ್ರಗಳಿವೆ. ಮನುಷ್ಯನು ಕೈಯಲ್ಲಿ ಆಯುಧವನ್ನು ಹಿಡಿದಿದ್ದಾನೆ. ಪಕ್ಷಿ ಮತ್ತು ಮನುಷ್ಯನ ದೇಹದ ಮೇಲೆ ರೇಖೆಗಳ ಅಲಂಕರಣಗಳಿವೆ. ಇಲ್ಲಿಯೇ ಹಿಡಿಕೆಯುಳ್ಳ ಖಡ್ಗದ ಚಿತ್ರವಿದೆ.

### ಕಲ್ಲಾಸರೆ : ಏಳು

ಬಾಲಕೃಷ್ಣ ದೇವಾಲಯದ ಎದುರಿಗೆ ಈ ಕಲ್ಲಾಸರೆ ಇದೆ. ಇಲ್ಲಿ ಉದ್ದ ಕತ್ತಿನ ಕಡವೆಯ ಚಿತ್ರ ಮತ್ತು ಮನುಷ್ಯ ಚಿತ್ರಗಳಿವೆ. ಕಡವೆಯದು ಬಾಹ್ಯ ರೇಖಾ ಚಿತ್ರ ಕೇವಲ ಕತ್ತು ಮತ್ತು ಮುಖ ಮಾತ್ರ ಇದೆ. ಕೆಳಗೆ ಪಾರ್ಶ್ವಬದಿಯ ಮನುಷ್ಯನ ಚಿತ್ರವಿದೆ. ಕಾಲುಗಳನ್ನು ಸ್ವಲ್ಪ ಬಗ್ಗಿಸಿ ನಿಂತಿದ್ದು ಕೈಗಳಲ್ಲಿ, ಮುಖ ಮಾಸಿ ಹೋಗಿದೆ. ಮುಂಡದಲ್ಲಿ ಸೊಂಟದವರೆಗೆ ಉದ್ದ ಚುಕ್ಕಿಗಳ ಸೊಂಟದಿಂದ ಕೆಳಗೆ ಕಾಲಿನಲ್ಲಿ ಚುಕ್ಕೆ ಸಾಲುಗಳ ಅಲಂಕಾರಗಳಿವೆ. ಮೇಲ್ಬದಿ ನಕ್ಷತ್ರಾಕಾರದ ಅಸ್ಪಷ್ಟ ಚಿತ್ರವಿದೆ.

## ಕಮಲಾಪುರ

### ಕಲ್ಲಾಸರೆ : ಒಂದು

ಕನ್ನಡ ವಿಶ್ವವಿದ್ಯಾಲಯದ ಬಲ ಬದಿಯಲ್ಲಿರುವ ಒಂಟಿಕಲ್ಲುಗುಂಡಿನಲ್ಲಿ ಒಂದು ಕೆಂಪು ವರ್ಣದ ಕಡವೆಯ ಚಿತ್ರವಿದೆ (೦.೨೮.ಮೀ ೦.೩೩ಮೀ) ಚಿತ್ರ ಬಾಹ್ಯರೇಖಾ ರೂಪದ್ದು, ಚಿಕ್ಕ ಕೋಡು, ದೊಡ್ಡ ದೇಹವಿದೆ. ಮುಂದಿನ ಕಾಲುಗಳು ಮಾತ್ರ ಇವೆ. ಪುಷ್ಠಭಾಗ ಮತ್ತು ಹಿಂದಿನ ಕಾಲುಗಳು ಮಾಸಿವೆ.

## ವೆಂಕಟಾಪುರ

ಕಂಪ್ಲಿ ಹೋಸಪೇಟೆ ರಸ್ತೆಯಲ್ಲಿದೆ. ಇದು ಎರಡು ಕಲ್ಲಾಸರೆಗಳನ್ನು ಹೊಂದಿದೆ.

### ಕಲ್ಲಾಸರೆ : ಒಂದು

ವಾಲಿ ದಿಬ್ಬದ ಹತ್ತಿರ ಈ ಕಲ್ಲಾಸರೆ ಇದೆ. ಇಲ್ಲಿ ಮನುಷ್ಯ ಚಿತ್ರಗಳು, ಹುಲಿ ಮುಂತಾದ ಪ್ರಾಣಿಗಳ ಚಿತ್ರಗಳು ಹಾಗೂ ಕೆಲವು ವಿಶಿಷ್ಠ ಚಿನ್ಹೆಗಳು ಕೆಂಪು ವರ್ಣದಲ್ಲಿವೆ. ಮನುಷ್ಯ ಚಿತ್ರಗಳು ಕಡ್ಡಿಯಂತಹ ರೂಪದವು ಕೈಗಳನ್ನು ಮೇಲಕ್ಕೆತ್ತಿವೆ. ಹುಲಿಯ ಚಿತ್ರ ಸಹಜವಾಗಿದೆ. ಕೆಲವು ಪ್ರಾಣಿಗಳು ಕುದುರೆಗಳಂತೆ ತೋರುತ್ತವೆ. ಚಿಹ್ನೆಗಳಲ್ಲಿ ಹರಪ್ಪ ನಾಗರಿಕತೆಯ ಲಿಪಿ ಮುದ್ರಿಕೆಗಳಲ್ಲಿ ಬಾರಿ ಬಾರಿಗೂ ಕಾಣಿಸಿಕೊಳ್ಳುವ ಎರಡು ಕಡೆಗಳಲ್ಲಿ ಒಂದೊಂದು ಬಾಹ್ಯ ಅಡ್ಡ ರೇಖೆಯುಳ್ಳ ರೋಮನ್ ಲಿಪಿಯ 'ಯು' ಮತ್ತು ಅಶೋಕನ ಕಾಲದ ಬ್ರಾಹ್ಮಿ ಲಿಪಿಯ 'ಮ' ಅಕ್ಷರವನ್ನು ಹೋಲುವ ಎರಡು ಅಕ್ಷರವನ್ನು ಹೋಲುವ ಚಿನ್ಹೆಯುಮೂರು ನಾಲ್ಕು ಎಡೆಗಳಲ್ಲಿವೆ. ಈ ಎಲ್ಲಾ ಚಿನ್ಹೆಗಳು ಚಲ್ಲಾಪಿಲ್ಲಿಯಾಗಿವೆ.

### ಕಲ್ಲಾಸರೆ : ಎರಡು

ಇಲ್ಲಿ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳಿವೆ. ಕೈ-ಕೈ ಹಿಡಿದು ನೃತ್ಯ ನಿರತ ಮನುಷ್ಯ ಚಿತ್ರಗಳ ಎರಡು ಸಾಲು ಇಲ್ಲಿದೆ. ಮೇಲಿನದು ಛಾಯಾರೂಪದ್ದು, ಕೆಳಗಿನದು ಬಾಹ್ಯ ರೇಖಾ ರೂಪದ್ದು, ಮೇಲಿನ ಮನುಷ್ಯ ಚಿತ್ರಗಳು ತ್ರಿಕೋನಾಕಾರದವು. ಕೆಳಗಿನವು ಗುಣಾಕರ ಚಿನ್ಹೆಯ ಮುಂಡವನ್ನು ಹೊಂದಿದವು. ಮೇಲಿನ ಕೆಲವು ಚಿತ್ರಗಳಲ್ಲಿ ತಲೆಯ ಸುತ್ತ ಗೆರೆಗಳಿದ್ದು, ಕೂದಲನ್ನು ನಿದರ್ಶಿಸುತ್ತವೆ.

### ನಾಗೇನಹಳ್ಳಿ

ಹೊಸಪೇಟೆ ರಸ್ತೆಯಲ್ಲಿ ಅನಂತಶಯನ ಗುಡಿಯಿಂದ ಉತ್ತರಕ್ಕೆ ಸುಮಾರು ೪ ಕಿ.ಮೀ. ದೂರದಲ್ಲಿ ನಾಗನಹಳ್ಳಿ ಗ್ರಾಮವಿದೆ. ಗ್ರಾಮದಿಂದ ಉತ್ತರಕ್ಕೆ ೧ ಕಿ.ಮೀ.ದೂರದಲ್ಲಿ 'ಧರಮರ ಗುಡ್ಡ' ವಿದ್ದು ಗುಡ್ಡದಲ್ಲಿಯ ದೇವಾಲಯದ ಹಿಂಭಾಗದಲ್ಲಿ ಈ ಚಿತ್ರಿತ ಕಲ್ಲಾಸರೆ ಇದೆ. ಸುಮಾರು ಅದರ ಉತ್ತರ ಮುಖದಲ್ಲಿ ಕೆಂಪು ಬಣ್ಣದ ಚಿತ್ರಗಳಿವೆ. ಇಲ್ಲಿ ಹಿಂದಿನ ಮತ್ತು ನಂತರ ಕಾಲದ ಚಿತ್ರಗಳಿವೆ.

ಕೆಳಭಾಗದಲ್ಲಿ ೩ ಎತ್ತಿನ ಸಣ್ಣ ಛಾಯಾರೂಪದ ಚಿತ್ರಗಳಿವೆ. ಶೈಲಿಯಿಂದ ಅವು ಶಿಲಾಯುಗದ ಚಿತ್ರಗಳೆಂದು ಹೇಳಬಹುದು. ಉಳಿದಂತೆ ಗೂಳಿ, ಕಡ್ಡಿಯಾಕಾರದ ಮನುಷ್ಯರು ಎತ್ತಿನ ಸವಾರ, ಕಡ್ಡಿಯಾಕಾರದ ಎತ್ತಿನ ಚಿತ್ರಗಳಿವೆ. ಇವೆಲ್ಲ ನಂತರ ಕಾಲದವು. ಕಲ್ಲಾಸರೆಯಿಂದ ಬಲಕ್ಕೆ ಸುಮಾರು ೫ ಫೀಟ್ ಅಂತರದಲ್ಲಿ ನೂತನ ಶಿಲಾಯುಗದ ಎರಡು ಆಯುಧಗಳು ದೊರೆತಿವೆ.

## ೪.೨. ಬಯಲು ಬಂಡೆ ಕೊರೆದ/ಕುಟ್ಟಿದ ಚಿತ್ರಗಳು

### ಮಲ್ಲಾಪುರ

#### ನೆಲೆ : ಒಂದು

ಬೆಟ್ಟದ ದಕ್ಷಿಣ ತುದಿಯಲ್ಲಿ ಕರೆಕಲ್ಲುಗಳ ಶ್ರೇಣಿ ಇದ್ದು, ಅಲ್ಲಿಯ ಕರಿಯ ಕಲ್ಲುಗಳ ಬಂಡೆಗಳಲ್ಲಿ ಚಿತ್ರಗಳನ್ನು ಕೊರೆಯಲಾಗಿದೆ. ಈ ನೆಲೆಯಲ್ಲಿ ೫ ಬಂಡೆಗಳ ಮೇಲೆ ಕೊರೆದ ಚಿತ್ರಗಳು ಮುಖ್ಯವಾಗಿವೆ. ಅವು ಇಂತಿವೆ.

ಒಂದನೆಯದು ಎತ್ತಿನ ಚಿತ್ರ. ಬಾಯಿ, ಮುಖ ತ್ರಿಕೋನಾಕಾರದಲ್ಲಿದೆ. ಕೋಡುಗಳನ್ನು ಸರಳ ರೇಖೆಯಲ್ಲಿ ತೋರಿಸಲಾಗಿದೆ. ಇಣಿ, ಬಾಲವಿದ್ದು, ಶಿಶ್ನವನ್ನು ಬಿಡಿಸಲಾಗಿದೆ. ಎರಡನೇ ಚಿತ್ರದಲ್ಲಿ ಬಂಡೆಯಲ್ಲಿ ಮೂರು ಪ್ರಾಣಿ ಚಿತ್ರಗಳಿವೆ. ಪರಸ್ಪರ ಎದುರಾಗಿ ನಿಂತಿರುವ ಎರಡು ಎತ್ತುಗಳ ಮತ್ತು ಒಂದು ಏಕ ರೇಖೆಯ ದನದ ಚಿತ್ರವಿದೆ. ಈ ಪ್ರಾಣಿಗಳಿಗೆ ಇಣಿ ಇಲ್ಲದಿರುವುದರಿಂದ ಜಿಂಕೆಯಂತೆ ತೋರುತ್ತವೆ.

ಮೂರನೇ ಚಿತ್ರವು ಅಶ್ವಸವಾರನ ಚಿತ್ರ. ಕುದುರೆಯ ಮೇಲೆ ವ್ಯಕ್ತಿಯೋರ್ವ ಕುಳಿತಿದ್ದಾನೆ. ಅವನ ಕೈ ಕುದುರೆಯ ಲಗಾಮವನ್ನು ಹಿಡಿದಂತೆ ತೋರುತ್ತಿದೆ. ಚಿತ್ರದಲ್ಲಿ ಸ್ಪಷ್ಟತೆ ಇಲ್ಲ. ನಾಲ್ಕನೆಯದು

ಬಲಿಷ್ಟ ಗೂಳಿಯ ಚಿತ್ರವಾಗಿದೆ. ಕೋಡುಗಳು ನೇರವಾಗಿವೆ. ಕಣ್ಣನ್ನು ಸಣ್ಣ ವೃತ್ತದಲ್ಲಿ ಸ್ಪಷ್ಟವಾಗಿ ಬಿಡಿಸಲಾಗಿದೆ. ಇಣಿ ದೊಡ್ಡದಿದ್ದು, ಬಾಲ ಕಾಲುಗಳು ಸಹಜವಾಗಿವೆ. ಐದನೆಯ ಚಿತ್ರಗಳು ದೊಡ್ಡ ಬಂಡೆ ಮೇಲೆ ಇವೆ. ಸಮಕಾಲೀನ ಬಾಸಿಂಗ, ಎತ್ತಿನ ಚಿತ್ರಗಳು ಇವೆ. ಆದರೆ ಪ್ರಾಚೀನವಾಗಿ ಒಂದು ದನ ಮತ್ತು ವೃತ್ತದ ಚಿತ್ರಗಳು ಮಹತ್ವದ್ದಾಗಿವೆ. ಎತ್ತಿನ ಚಿತ್ರದಲ್ಲಿ ಅದರ ದೇಹ ಕಾಲುಗಳನ್ನು ಸೂಚಿಸುವ ರೇಖೆಗಳು ಅಂಕು ಡೊಂಕಿಲ್ಲದೇ ಅತ್ಯಂತ ಸ್ಪಷ್ಟವಾಗಿವೆ. ಮುಖಭಾಗ ನಾಶವಾಗಿದೆ. ಕೋಡುಗಳು ರೋಮನ್ U ಲಿಪಿ ಆಕಾರದಲ್ಲಿ ಇವೆ. ಎತ್ತಿನ ಮೇಲ್ಭಾಗದಲ್ಲಿ ಒಂದರ ಒಳಗೆ ಒಂದಿರುವ ಎರಡು ವೃತ್ತಗಳ ಚಿತ್ರ ಗಮನ ಸೆಳೆಯುತ್ತದೆ ವೃತ್ತದ ಮಧ್ಯಭಾಗದಲ್ಲಿ ಚಿಕ್ಕ ಕುಳಿ ಇದೆ.

### ನೆಲೆ : ಎರಡು

ಕರೆಕಲ್ ಗುಡ್ಡದ ಉತ್ತರ ಬದಿಯ ಕಪ್ಪುಕಲ್ಲಿನ ಶ್ರೇಣಿಯಲ್ಲಿ ಅನೇಕ ಬಂಡೆಗಳ ಮೇಲೆ ಕುಟ್ಟಿದ ಮತ್ತು ಕೊರೆದ ಚಿತ್ರಗಳಿವೆ. ಅವುಗಳ ವಿವರ ಇಂತಿದೆ.

ಬಂಡೆ ೧ : ಕಪಟಕಲ್ಲಿನ ಶ್ರೇಣಿಯ ಕೆಳಗಿನ ಕಲ್ಲಿನಲ್ಲಿ ಎತ್ತಿನ ಚಿತ್ರವಿದೆ. ಮೂತಿ ಚೂಪಾಗಿದ್ದು V ಆಕಾರದಲ್ಲಿ ಕೋಡುಗಳಿವೆ. ಇಣಿ ಬಾಲಗಳಿವೆ.

ಬಂಡೆ ೨ : ಇಲ್ಲಿ ಎತ್ತಿನ ಚಿತ್ರ ಭಿನ್ನವಾಗಿದೆ. ಕಾಲು ಮತ್ತು ಮುಂಡವನ್ನು ೨ ರೇಖೆಗಳಲ್ಲಿ ತೋರಿಸಲಾಗಿದೆ. ಮುಖ, ಇಣಿ, ಕೋಡು ಪ್ರತ್ಯೇಕವಾಗಿದೆ.

ಬಂಡೆ ೩ : ಮೂರು ಎತ್ತಿನ ಚಿತ್ರಗಳಿವೆ. ಎರಡು ಒಂದರ ಹಿಂದೆ ಒಂದರಂತೆ ಎತ್ತುಗಳಿದ್ದು, ಅವಕ್ಕೆ ಎದುರಾಗಿ ಮತ್ತೊಂದು ಎತ್ತಿನ ಚಿತ್ರವಿದೆ.

ಬಂಡೆ ೪ : ಎತ್ತಿನ ಸವಾರನ ಚಿತ್ರವಿದೆ. ಸವಾರನು ಎತ್ತಿನ ಮೇಲೆ ನಿಂತಿದ್ದೂ, ಕೈಯಲ್ಲಿ ಕೋಲನ್ನೋ, ಖಡ್ಗವನ್ನೋ ಹಿಡಿದಿದ್ದಾನೆ. ಎತ್ತಿನ ರಚನೆಯು ವಿಶೇಷವಾಗಿದೆ. ಇದೇ ಕಲ್ಲಿನ ಇನ್ನೊಂದು ಮಗ್ಗುಲಲ್ಲಿ ಎತ್ತಿನ ಚಿತ್ರವಿದೆ.

ಬಂಡೆ ೫ : ಇದರಲ್ಲಿ ೦೫. ಒಂದರ ಒಳಗೆ ಒಂದರಂತೆ ಕೊರೆದ ೩ ವೃತ್ತಗಳ ಚಿತ್ರವಿದೆ. ಮೊದಲನೆಯ ನೆಲೆಯಲ್ಲಿದ್ದಂತೆ ವೃತ್ತದ ಮಧ್ಯದಲ್ಲಿ ಚಿಕ್ಕ ಕುಳಿ ಕೊರೆಯಲಾಗಿದೆ.

ಬಂಡೆ ೬ : ಇಲ್ಲಿ ಎತ್ತಿನ ಸವಾರನ ಚಿತ್ರವಿದೆ. ದನದ ಮೇಲೆ ವ್ಯಕ್ತಿಯೊಬ್ಬ ಕುಳಿತಿದ್ದು, ಮುಂದಿನ ಕೈಯಿಂದ ದನದ ಭಾಗವನ್ನು ಹಿಡಿದಂತಿದೆ.

ಬಂಡೆ ೭ : ಇಲ್ಲಿ ಎತ್ತಿನ ಚಿತ್ರವಿದೆ. ಮುಖ, ಕೋಡು, ಇಣಿ, ಬಾಲ,ದೇಹ, ಕಾಲುಗಳು ಸ್ಪಷ್ಟವಿದ್ದು, ಚಿತ್ರಶೈಲಿಯಿಂದ ಸೊಗಸಾಗಿದೆ.

ಬಂಡೆ ೮ : ಇದು ಎತ್ತಿನ ಚಿತ್ರ. ತ್ರಿಕೋನಾಕಾರದ ಮುಖ, ಮೇಲೆ ವಕ್ರವಾಗಿ ಸರಳ ರೇಖೆಯ ಕೋಡುಗಳು, ಇಣಿ, ಬಾಲ ಶಿಶ್ನಗಳಿವೆ. ಮುಖ ಬದಿಗೆ ನೋಡುತ್ತಿರುವಂತಿದೆ.

ಬಂಡೆ ೯ : ಇಲ್ಲಿ ಎರಡು ಎತ್ತುಗಳು ಪರಸ್ಪರ ಎದುರಾಗಿ ನಿಂತಿವೆ. ಎಡಗಡೆಯ ಎತ್ತಿನ ಚಿತ್ರ ಕೇವಲ ಏಕ ರೇಖೆಯದು. ಬಲಗಡೆಯ ಚಿತ್ರದಲ್ಲಿ ಇಣಿ ಇಲ್ಲದಿರುವುದರಿಂದ ಬೇರೆ ಪ್ರಾಣಿ ರೀತಿ ಕಾಣುತ್ತದೆ.

ಬಂಡೆ ೧೦ : ಇದೊಂದು ದೊಡ್ಡ ಬಂಡೆ. ಇದರಲ್ಲಿ ತ್ರಿಶೂಲ ಹಿಡಿದು ನಿಂತಿರುವ ವ್ಯಕ್ತಿ, ನಾಲ್ಕು ಎತ್ತು ಮತ್ತು ಅಶ್ವಸವಾರರ ಕುಟ್ಟು ಚಿತ್ರಗಳಿವೆ. ತ್ರಿಶೂಲ ಹಿಡಿದು ನಿಂತ ವ್ಯಕ್ತಿಯದು. ದಪ್ಪ ರೇಖೆಯ ಚಿತ್ರ ಬಲಗೈಯಲ್ಲಿ ತ್ರಿಶೂಲವಿದೆ. ಎಡಗೈಯನ್ನು ಸೊಂಟದ ಮೇಲೆ ಇರಿಸಿದ್ದಾನೆ. ತ್ರಿಶೂಲ ವ್ಯಕ್ತಿಗಿಂತ ಎತ್ತರವಾಗಿದೆ. ಅದರ ಮೇಲ್ಬದಿಯ ಇಕ್ಕೆಲಗಳಲ್ಲಿ ಸೂರ್ಯ ಚಂದ್ರರ ಚಿತ್ರಗಳಿವೆ. ತ್ರಿಶೂಲದ ಮುಂದೆ ಒಂದು ಎತ್ತಿನ ಚಿತ್ರವಿದೆ. ನಂತರ ಎರಡು ಎತ್ತುಗಳ, ಅಶ್ವಸವಾರರ ಕುಟ್ಟು ಚಿತ್ರಗಳಿವೆ. ಈ ಎತ್ತುಗಳಿಗೆ ವಿರುದ್ಧಮುಖವಾಗಿ ನಿಂತಿರುವ ಎತ್ತಿನ ಇಣಿ ದೊಡ್ಡದಾಗಿ ಬಾಗಿದ್ದು ವಿಶೇಷವೆನಿಸುತ್ತದೆ. ಈ ಶಿಲೆಯ ಕೆಳಬದಿಯಲ್ಲಿ ಎತ್ತಿನ ಕೊರೆದ ಚಿತ್ರವಿದೆ.

ಬಂಡೆ ೧೧ : ಇದರಲ್ಲಿ ಎತ್ತಿನ ಕೊರೆದ ಚಿತ್ರವಿದೆ. ಮುಖ ಎತ್ತಿ ನೋಡುತ್ತಿದೆ. ಹಾಗಾಗಿ ಕೋಡುಗಳು ಹಿಂದಕ್ಕೆ ಬಾಗಿವೆ. ಈ ಸನ್ನಿವೇಶಕ್ಕೆ ತಕ್ಕಂತೆ ಮುಂದಿನ ಕಾಲು ಹಾಗೂ ದೇಹದ ಭಾಗವನ್ನು ಮೇಲಕ್ಕೆತ್ತಿದ್ದಂತೆ ಹಿಂದಿನ ಭಾಗ ಚಿಕ್ಕವಾಗಿ ಚಿತ್ರಿತವಾಗಿದೆ.

ಬಂಡೆ ೧೨ : ಇಲ್ಲಿ ಎತ್ತಿನ ಚಿತ್ರವಿದೆ ಇಣಿ ಇರುವುದಿಲ್ಲ. ವಿಶೇಷವೆಂದರೆ ಮೇಲ್ಭಾಗದಲ್ಲಿ ವೃತ್ತಕಾರಾದ ಮಂಡಲ ರೀತಿಯ ಚಿತ್ರವಿದೆ. ಅದರಲ್ಲಿ ಮೂರು ರೇಖೆಗಳು ಪರಸ್ಪರ ಛೇದಿಸಿದ್ದು, ವೃತ್ತದಲ್ಲಿ ಆರು ಭಾಗಗಳಿವೆ. ವೃತ್ತದ ಒಂದು ಬದಿಗೆ ಅಡ್ಡಗೆರೆಯನ್ನು ಹಾಕಿದ್ದು, ಅದರ ಮೇಲೆ ತ್ರಿಕೋನಾಕಾರದ ಆಕೃತಿ ಬಿಡಿಸಲಾಗಿದೆ.

ಬಂಡೆ ೧೩ : ದೊಡ್ಡ ಶಿಲೆಯ ಬದಿಯ ಭಾಗದಲ್ಲಿ ಎರಡು ಆಡುಗಳ ಚಿತ್ರಗಳಿವೆ. ಅವುಗಳ ಕಿವಿ ಕೋಡುಗಳಂತಿದ್ದರೂ, ರಚನೆಯಿಂದ ಆಡುಗಳೆಂದು ಹೇಳಬಹುದು.

## ಬಸಾಪಟ್ಟಣ

### ನೆಲೆ : ಒಂದು

ತುಂಗಭದ್ರಾ ಎಡದಂಡೆ ಕಾಲುವೆಯ ಬದಿಯ ಅನ್ಸಾರಿ ಫಾರಂನ ಹಿಂದಿನ ಕೆರೆಯಲ್ಲಿ ಈ ನೆಲೆಯಿಂದ ಇಲ್ಲಿ ಬಂಡೆಗಳ ಮೇಲೆ ಕೊರೆದ ಚಿತ್ರಗಳು ಇಂತಿವೆ.

**ಬಂಡೆ ೧ :** ಎತ್ತಿನ ಚಿತ್ರದ ಮೇಲೆ ವ್ಯಕ್ತಿಯೊಬ್ಬ ಕುಳಿತಿದ್ದಾನೆ. ಎತ್ತಿನ ಮುಖ ಮುಂದಕ್ಕೆ ಬಾಗಿದೆ. ಕೋಡುಗಳು ಸರಳ ರೇಖೆಯಂತೆ ನೇರವಾಗಿವೆ. ಇಣಿ ಎತ್ತರವಾಗಿದೆ. ಬಾಲ ಎತ್ತಿ ಹಿಂದಕ್ಕೆ ಇಳಿದಿದ್ದು ಅದಕ್ಕೆ ಕುಚ್ಚು ತೋರಿಸಿರುವುದು ಗಮನಾರ್ಹ. ಮೇಲೆ ಕುಳಿತ ವ್ಯಕ್ತಿ ಎರಡು ಕೈಗಳನ್ನು ಮೇಲಕ್ಕೆತ್ತಿದ್ದಾನೆ(೨೯ ಸೆಂ.ಮೀ. x ೨೨ ಸೆಂ.ಮೀ.).

**ಬಂಡೆ ೨ :** ಒಂದೇ ಕೊಡನ್ನು ದಪ್ಪವಾಗಿ ತೋರಿಸಿದ್ದು, ಮುಂದಕ್ಕೆ ಬಾಗಿದೆ. ಇಣಿ ದೊಡ್ಡದಿದ್ದು, ಹಿಂದಕ್ಕೆ ಬಾಗಿದೆ. ಬಾಲ ಅರೆ ನಿಮರಿ ನಿಂತಿದೆ(೨೪ x ೧೮ ಸೆಂ.ಮೀ.).

**ಬಂಡೆ ೩ :** ಇಣಿ ಮತ್ತು ಮುಂದಿನ ಕಾಲುಗಳನ್ನು ಸಮನಾಂತರದಲ್ಲಿ ತೋರಿಸಲಾಗಿದೆ. ಕತ್ತು ಹಾಗೂ ಮುಖವನ್ನು ಪ್ರತ್ಯೇಕವಾಗಿ ಸೇರಿಸಿದಂತಿರುವಂತಿದೆ. ಕೋಡಿನ ತುದಿ ಭಾಗ ಜೋಡಿಸಿಲ್ಲ(೨೯ ಸೆಂ.ಮೀ x ೧೮ ಸೆಂ.ಮೀ.).

**ಬಂಡೆ ೪ :** ಶಿಲೆ ತುಂಡಾಗಿದ್ದು, ಎತ್ತಿನ ಮೇಲ್ಭಾಗ ಹಾಳಾಗಿದೆ(೩೭ x ೧೫ ಸೆಂ.ಮೀ.).

**ಬಂಡೆ ೫ :** ಇದೊಂದು ವಿಶಿಷ್ಟವಾದ ಚಿತ್ರವಾಗಿದೆ. ಮೊದಲು ಎತ್ತಿನ ಆಕಾರದಲ್ಲಿ ಚಿಕ್ಕ, ಚಿಕ್ಕ ಕುಳಿಗಳನ್ನು ಹಾಕಿಕೊಂಡು ಅನಂತರ ಆ ಕುಳಿಗಳನ್ನು ಒಂದಕ್ಕೊಂದು ಸೇರಿಸುವಂತೆ ಗೆರೆ ಹಾಕಲಾಗಿದೆ. ಇಡೀ ಕೊರೆದ ಚಿತ್ರದಲ್ಲಿ ಕುಳಿಗಳು ಕಾಣಿಸುತ್ತವೆ(೨೭ಸೆಂ.ಮೀ. x ೧೫ ಸೆಂ.ಮೀ.).

**ಬಂಡೆ ೬ :** ಇಣಿ ಹಿಂದಕ್ಕೆ ವಾಲಿದೆ. ಬಾಲ ಅರೆ ನಿಮಿರಿ ನಿಂತಿದೆ(೨೨ ಸೆಂ.ಮೀ. x ೧೧ ಸೆಂ.ಮೀ).

**ಬಂಡೆ ೭ :** ಪಶ್ಚಿಮದ ದಾರಿಯಲ್ಲಿ ಈ ಚಿತ್ರವಿದೆ. ಮನುಷ್ಯನ ಬಲಗೈಯಲ್ಲಿ ಗುಂಡಾದ ವಸ್ತುವನ್ನು, ಎಡಕೈಯಲ್ಲಿ ಖಡ್ಗವನ್ನು ಹಿಡಿದಂತಿದೆ. ಇದು ಕಡ್ಡಿ ರೀತಿಯ ಏಕ ರೇಖೆಯ ಚಿತ್ರವಾಗಿದೆ(೫ ಸೆಂ.ಮೀ x ೭ ಸೆಂ.ಮೀ.).

## ಸಿದ್ದಿಕೇರಿ (ಗಂಗಾವತಿ)

ಗಂಗಾವತಿಯಿಂದ ಪಶ್ಚಿಮಕ್ಕೆ ೨ ಕಿ.ಮೀ. ದೂರದಲ್ಲಿ ಈ ಗ್ರಾಮವಿದೆ. ಇಲ್ಲಿಯ ಬೆಟ್ಟದಲ್ಲಿ ಚಿತ್ರನೆಲೆ ಇದೆ.

ನೆಲೆ : ಒಂದು

ಜಾನಮ್ಮನ ವಟ್ಲ ಎನ್ನುವ ಈ ಬೆಟ್ಟದಲ್ಲಿ ಒಂದು ನೈಸರ್ಗಿಕ ಚಿಕ್ಕ ಕೆರೆ(ಮಳೆ ನೀರು ನಿಲ್ಲುವ ತೊಟ್ಟಿ)ಇದೆ. ಅದರ ದಡದ ಬಂಡೆಯಲ್ಲಿ ಆಯುಧ ತಯಾರಿಕೆಗಾಗಿ ತಿಕ್ಕಿದ ಗುರುತುಗಳಿವೆ. ಅದೇ ರೀತಿ ಬಂಡೆಯಲ್ಲಿ ಚಿಕ್ಕ ಚಿಕ್ಕ ಕುಳಿಗಳನ್ನು ಹಾಕಿ ಆದರಿಂದಲೇ ಎರಡು ಆಕೃತಿಗಳನ್ನು ಮೂಡಿಸಲಾಗಿದೆ. ಅವು ಇಂತಿವೆ.

**ಚಿತ್ರ ೧** : ಸ್ವಲ್ಪ ವಕ್ರವಾಗಿ ರೋಮನ್ ಮೂಲಕ್ಷರ I ನಂತಿರುವ ಈ ಚಿತ್ರದ ಮಧ್ಯದ ಲಂಬ ರೇಖೆಯು ೦.೭೮ ಮೀ ಎತ್ತರವಾಗಿದೆ. ಅದರ ಎರಡು ತುದಿಯ ತುದಿಯಲ್ಲಿ ಕುಳಿಗಳಿಂದಲೇ ಮಾಡಿರುವ ಅಡ್ಡರೇಖೆಗಳು ಕೂಡ ವಕ್ರವಾಗಿದ್ದು, ೦.೨೮ ಮೀ ಉದ್ದವಾಗಿವೆ.

**ಚಿತ್ರ ೨** : ಮೊದಲನೆಯ ಚಿತ್ರದ ಬದಿಯಲ್ಲಿ ಈ ಆಕೃತಿ ಇದೆ. ಮೇಲುನೋಟಕ್ಕೆ ಇದು ವೈದ್ಯಕೀಯ ಚಿನ್ಹೆಯಂತಿದೆ. ಅಂದರೆ ಒಂದು ವೃತ್ತ ಅದರ ಸಮಮಧ್ಯದಲ್ಲಿ ಸಂಕಲನ ಚಿಹ್ನೆಯಂತೆ ಉದ್ದ ಅಡ್ಡ ರೇಖೆಗಳಿವೆ. ಅಡ್ಡರೇಖೆ ೦.೫೨ ಮೀ. ಲಂಬ ರೇಖೆ ೦.೬೩ ಮೀ ಇದೆ. ವೃತ್ತವು ಅಂಡಾಕಾರದಲ್ಲಿದೆ.

ಮೇಲಿನ ಚಿತ್ರಗಳಿಂದ ಸ್ವಲ್ಪ ದೂರದಲ್ಲಿ ಒಂದು ದೊಡ್ಡ ಬಂಡೆಯ ಸಮವಾದ ಮುಖಭಾಗದಲ್ಲಿ ಒಟ್ಟು ೨೨ ಗುಳಿಗಳನ್ನು ಹಾಕಲಾಗಿದೆ. ಇವುಗಳಲ್ಲಿ ಗರಿಷ್ಠ ೭ ಸೆಂ.ಮೀ. ಇದ್ದರೆ ಕನಿಷ್ಠ ೩ ಸೆಂ.ಮೀ.ನ ಗುಳಿಗಳಿವೆ. ಇವು ಕ್ರಮಬದ್ಧವಾಗಿರದೆ ಅಲ್ಲಲ್ಲೆ ಇವೆ. ಈ ಗುಳಿಗಳನ್ನು ಒಂದು ಉಳಿಯಾಕಾರದ ಆಯುಧದಿಂದ ಸತತವಾಗಿ ತಿರುಗಿ ಕೊರೆದ ತಂತ್ರದಲ್ಲಿ ಮಾಡಲಾಗಿದೆ.

ಆಗೋಲಿ

ಗಂಗಾವತಿ-ದಾಸವಾಳ ರಸ್ತೆಯಿಂದ ವಾಯುವ್ಯಕ್ಕೆ ಸು. ೧೦ ಕಿ.ಮೀ. ದೂರದಲ್ಲಿ ಈ ಗ್ರಾಮವಿದೆ. ಇಲ್ಲಿ ವರ್ಣಚಿತ್ರ ನೆಲೆಗಳಲ್ಲೇ ಕೊರೆದ ಚಿತ್ರಗಳಿವೆ.

ನೆಲೆ : ಒಂದು

ಮೊರರ ಗುಡ್ಡದಲ್ಲಿ ಮೂರು ನವ ಶಿಲಾಯುಗ ಬೃಹತ್ ಶಿಲಾಯುಗದ ನೆಲೆಗಳಿವೆ. ಮೊದಲನೆ ನೆಲೆಯಲ್ಲಿದ್ದ ಶಿಲಾಸಮಾದಿಗಳನ್ನು ನಾಶಗೊಳಿಸಲಾಗಿದ್ದು, ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಗಿದೆ. ಈ ಹೊಲ(ಯರಡೋಣಿ ಲಿಂಗಪ್ಪನ ಹೊಲದ) ಪೂರ್ವ ಮೇರೆಯಲ್ಲಿ ಒಂದು ನೈಸರ್ಗಿಕ ಬಂಡೆ ಇದೆ. ಅದರ ಪಶ್ಚಿಮ ಮುಖದಲ್ಲಿ ಕುಳಿ ಆಕೃತಿ ಇದೆ.

ಸಂಪೂರ್ಣ ಚಿಕ್ಕ ಚಿಕ್ಕ ಕುಳಿಗಳಿಂದಲೇ ಹಡಗಿನ ಆಕಾರದಲ್ಲಿ ಈ ಚಿತ್ರವನ್ನು ಮೂಡಿಸಲಾಗಿದೆ. ಅಂದರೆ ಕುಳಿಗಳಿಂದಲೇ ಒಂದರ ಮೇಲೆ ಒಂದರಂತೆ ಎರಡು ರೇಖೆಗಳನ್ನು ಹಾಕಲಾಗಿದೆ. ಮಧ್ಯದಲ್ಲಿ ಅಂತರವಿರುವ ಈ ರೇಖೆಗಳು ಎರಡು ಕೊನೆಯಲ್ಲಿ ಪರಸ್ಪರ ಸಮೀಪಿಸುತ್ತ ಒಂದಾಗಿವೆ. ಇದು ಒಟ್ಟು ೧.೪೩ ಮೀ ಉದ್ದವಾಗಿಯೂ ೬ ಸೆಂ.ಮೀ.(ಮಧ್ಯದಲ್ಲಿ)ದಪ್ಪವಾಗಿದೆ.

### ನೆಲೆ : ಎರಡು

ಬೃಹತ್ ಶಿಲಾಯುಗದ ಶಿಲಾಸಮಾಧಿಗಳಿರುವ ಮೂರನೆಯ ನೆಲೆಯಲ್ಲಿ ಈ ಚಿತ್ರಗಳಿವೆ. ಬಂಡೆಯ ಮೇಲೆ ಪರಸ್ಪರ ಎದುರಾಗಿ ಎರಡು ಎತ್ತಿನ ಚಿತ್ರಗಳನ್ನು ಕೊರೆಯಲಾಗಿದೆ. ಅವುಗಳ ಎದುರಿನ ಬಂಡೆಯಲ್ಲಿ ಮತ್ತೊಂದು ದನದ ಚಿತ್ರವಿದೆ. ಪರಸ್ಪರ ಎದುರಾಗಿ ನಿಂತಿರುವ ಎತ್ತುಗಳಿವೆ. ಮುಖ ತ್ರಿಕೋನಾಕಾರದಲ್ಲಿದೆ. ಅದರ ಮೇಲೆ V ಆಕಾರದಲ್ಲಿ ಕೋಡುಗಳನ್ನು ತೋರಿಸಲಾಗಿದೆ. ಬೆನ್ನಿನ ರೇಖೆಯಲ್ಲೆ ಇಣಿಯನ್ನು ರಚಿಸಲಾಗಿದೆ. ಬಾಲ ಸಹಜವಾಗಿದೆ. ಎರಡಕ್ಕೂ ಶಿಶ್ನವನ್ನು ಬಿಡಿಸಲಾಗಿದೆ. ಎದುರಿನ ಎತ್ತಿನ ದೇಹ ಉದ್ದವಿದೆ. ಆದರೆ ಇದಕ್ಕೆ ಇಣಿ ಇಲ್ಲ.

### ನೆಲೆ : ಮೂರು

ನವಶಿಲಾಯುಗ, ಬೃಹತ್ ಶಿಲಾಯುಗದ ನೆಲೆಯಲ್ಲಿಯ ಬಂಡೆಯ ಹಾಸಿನ ಮೇಲೆ ಈ ಪಾದದ ಚಿತ್ರವಿದೆ. ಎರಡು ಪಾದಗಳ ಮಧ್ಯದಲ್ಲಿ ಒಂದೇ ರೇಖೆ ಇದೆ. ಈ ಪಾದಗಳಿಗೆ ಬೆರಳುಗಳಿಲ್ಲ. ಪಾದಗಳ ಮೇಲೆ ದೊಡ್ಡದಾದ ಕುಳಿಗಳ ಅಸ್ಪಷ್ಟ ಆಕೃತಿ ಇದೆ.

## ಹಿರೇಬೆಣಕಲ್

### ನೆಲೆ : ಒಂದು

ಮೊರೆರಗುಡ್ಡದ ಶಿಲಾಸಮಾಧಿಗಳ ನೆಲೆ ಅಗಸಿಬದಿಯ ಚಿತ್ರಿತ ಕಲ್ಲಾಸರೆಯ ಪಶ್ಚಿಮ ಮುಖದ ನೆಲ ಬಂಡೆಯ ಮೇಲೆ ಚಿಕ್ಕ ಚಿಕ್ಕ ಕುಳಿಗಳಿಂದ ಈ ಆಕೃತಿಯನ್ನು ರಚಿಸಲಾಗಿದೆ. ತಿರುವಿ ಮಾಡಿದ ತಂತ್ರದಲ್ಲಿ ಕುಳಿಗಳನ್ನು ನಿರ್ಮಿಸಲಾಗಿದೆ. ಅವು ಬಹಳ ಆಳವಾಗಿಲ್ಲ. ಒಂದು ವೃತ್ತ ಮತ್ತು ಅದರ ಮಧ್ಯ ಭಾಗದಿಂದ ಒಂದು ಉದ್ದ ರೇಖೆಯಲ್ಲಿ ಇದನ್ನು ರಚಿಸಲಾಗಿದೆ. ೧೪ ಕುಳಿಗಳ ಒಂದು ಸರಳ ರೇಖೆಯಿದ್ದು, ಅದರ ಕೆಳ ತುದಿಗೆ ಕೊನೆ ಕುಳಿಯ ೨ ಬದಿಯಲ್ಲಿ ತಲಾ ನಾಲ್ಕು ಚುಕ್ಕೆಗಳನ್ನು ಅರೆವೃತ್ತಾಕಾರದಲ್ಲಿ ಕೊರೆಯಲಾಗಿದೆ. ಅವು ಕೊನೆಯಿಂದ ಅನೇಕ ಕುಳಿಯ ಬದಿಗೆ ಬಂದಿದ್ದು

ಅದರಿಂದ ಸರಳ ರೇಖೆಗೆ ಒಂದು ವೃತ್ತದ ರಚನೆಯಾಗಿದೆ. ವೃತ್ತದ ಬಲ ಬದಿಯ ಅರೆ ವೃತ್ತದಲ್ಲಿ ಐದು ಕುಳಿಗಳ ಸಾಲು ಇದ್ದು ಅದರ ಎರಡು ಕುಳಿಗಳು ವೃತ್ತದ ಹೊರಗೆ ಇವೆ(ಅಳತೆ ೬೬ ಸೆಂ.ಮೀ., ೨೪ ಸೆಂ.ಮೀ.).

## ಕಮಲಾಪುರ

### ನೆಲೆ : ಒಂದು

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಮುಂದೆ ಈ ನೆಲೆ ಇದೆ. ಇಲ್ಲಿ ವಿಶಾಲ ಬಂಡೆಯ ಪಶ್ಚಿಮ ಇಳಿಜಾರಿನ ಮೇಲೆ ರೇಖಾಚಿತ್ರಗಳನ್ನು ಕೊರೆಯಲಾಗಿದೆ. ಒಟ್ಟು ಎಂಟು ಚಿತ್ರಗಳು ಕಂಡುಬರುತ್ತವೆ. ಅವುಗಳಲ್ಲಿ ಆರು ಎತ್ತಿನ ಚಿತ್ರಗಳಿವೆ. ಎರಡು ಎತ್ತು ಮತ್ತು ಅವುಗಳ ಮೇಲೆ ಕುಳಿತ ಮನುಷ್ಯನ ಚಿತ್ರಗಳಾಗಿವೆ. ಕೆಳಗಿನ ಎತ್ತುಗಳ ರಚನೆ ವಿಶಿಷ್ಟವಾಗಿದೆ. ಒಂದೇ ದೊಡ್ಡ ಕೋಡು, ದೊಡ್ಡದಾದ ಇಣಿ, ಉದ್ದವಾದ ಬಾಲ, ಕಣ್ಣುಗಳಿದ್ದು, ಚಿತ್ರದಲ್ಲಿ ಪೂರ್ಣತೆ ಇದೆ. ಕೇವಲ ಮೂರು ಸರಳ ರೇಖೆಯಲ್ಲಿ ಎತ್ತಿನ ಚಿತ್ರವನ್ನು ಕೊರೆಯಲಾಗಿದೆ. ಒಂದೇ ರೇಖೆಯಲ್ಲಿ ಮುಂದಿನ ಮೊದಲ ಕಾಲು, ಕತ್ತು, ಬಾಯಿ, ಮುಖ, ಕೋಡು, ಇಣಿ, ಬೆನ್ನುಗಳನ್ನು ಮಾಡಿಸಲಾಗಿದೆ. ಹಿಂದಿನ ಮೊದಲ ಕಾಲನ್ನು ಎರಡನೇ ರೇಖೆಯಲ್ಲಿ ಚಿತ್ರಿಸಲಾಗಿದೆ. ಮೂರನೆಯದು ಬಾಲ. ಅದು ಕಾಲಿನಷ್ಟೆ ಉದ್ದವಾಗಿದೆ. ತೀರ ಕೆಳಗೆ ಇರುವ ಎರಡು ಎತ್ತುಗಳು ಉಳಿದವುಗಳಿಗಿಂತ ಆಳತೆಯಲ್ಲಿ ಸ್ವಲ್ಪ ದೊಡ್ಡ ಪ್ರಮಾಣದಲ್ಲಿವೆ(೦.೬೫ ಮೀ ಅಗಲ x ೦.೫೩ ಎತ್ತರ ಮತ್ತು ೦.೩೫ ೦.೫೮ ಮೀ). ಮೇಲಿನ ಚಿತ್ರಗಳು ಸ್ವಲ್ಪ ಅಸ್ಪಷ್ಟವಾಗಿವೆ.

### ನೆಲೆ : ಎರಡು

ಕನ್ನಡ ವಿಶ್ವವಿದ್ಯಾಲಯದ ಪೂರ್ವಬದಿಯ ಬಯಲಿನ ಒಂಟಿಕಲ್ಲು ಗುಂಡಿನಲ್ಲಿದೆ. ಒಂಟಿಕಲ್ಲು ಗುಂಡಿನ ಕಲ್ಲಾಸರೆಯಲ್ಲಿ ಕಡವೆಯ ವರ್ಣಚಿತ್ರವಿದೆ. ಆ ಗುಂಡಿನ ಕೆಳಗಿನ ಬಂಡೆಗಲ್ಲಿನಲ್ಲಿ ಒಂದು ಆಕೃತಿ ಮತ್ತು ಎರಡು ಎತ್ತು ಒಟ್ಟು ಮೂರು ಚಿತ್ರಗಳು ಕೊರೆಯಲ್ಪಟ್ಟಿವೆ. ಒಂದರ ಹಿಂದೆ ಒಂದರಂತೆ ಸಾಲಾಗಿ ನಿಂತಿರುವ ಎರಡು ಎತ್ತುಗಳ ಮುಂಭಾಗದಲ್ಲಿ ಒಂದು ವಿಶಿಷ್ಟ ಚಿತ್ರವನ್ನು ಕೊರೆಯಲಾಗಿದೆ. ಒಂದು ವೃತ್ತವಿದ್ದು, ಅದರ ಸರಿ ಸಮ ಅರ್ಧಭಾಗದಲ್ಲಿ ಮೇಲಿನಿಂದ ಒಂದು ಸರಳ ರೇಖೆ ಎಳೆಯಲಾಗಿದೆ. ಆ ರೇಖೆ ವೃತ್ತವನ್ನು ದಾಟಿ ಸು.೧೦ಸೆ.ಮೀ. ಕೆಳಗಿನವರೆಗೆ ಇದೆ. ವೃತ್ತದ ಮೇಲಿನ ಬಲ ಮೂಲೆಯ ರೇಖೆಗೆ ತಾಗಿ ಅರೆ ವೃತ್ತಾಕಾರ ಇದೆ.

ಎತ್ತಿನ ಚಿತ್ರಗಳು ಸರಳ ರೇಖೆಯಲ್ಲಿವೆ. ಮುಖ ತ್ರಿಕೋನಾಕಾರದಲ್ಲಿದೆ. ಅದರ ಮೇಲ್ಗಡೆ ಕೋಡುಗಳನ್ನು ತೋರಿಸಲಾಗಿದೆ. ಇಣಿ, ಬಾಲ ಸಹಜವಾಗಿವೆ. ಕಾಲುಗಳ ರಚನೆ ವಿಶೇಷವಾಗಿದೆ. ಮುಂದಿನ ಮೊದಲ ಕಾಲು ಕತ್ತಿನಿಂದ ಒಂದು ನೇರ ರೇಖೆಯನ್ನು ಎಳೆದು ತೋರಿಸಿದ್ದಾರೆ. ಹಿಂದಿನ ಕಾಲು ಬೆನ್ನಿನ ರೇಖೆಯ ಮುಂದುವರಿದ ಕಾಲಾಗಿದೆ. ಮುಂದಿನ ಎರಡನೆಯ ಮತ್ತು ಹಿಂದಿನ ಮೊದಲನೆಯ ಕಾಲನ್ನು ಒಂದೇ ರೇಖೆಯಲ್ಲಿ ಮೂಡಿಸಲಾಗಿದೆ. ಅದೇ ಕೆಳಹೊಟ್ಟೆಯಾ ಕೂಡ ಸಂಕೇತಿಸುತ್ತದೆ.

## ನಾಗೇನಹಳ್ಳಿ

### ನೆಲೆ : ಒಂದು

ಇಲ್ಲಿಯ ದರಮರ ಗುಡ್ಡದಲ್ಲಿ ವರ್ಣಚಿತ್ರಗಳು, ಕುಳಿ ಆಕೃತಿಗಳು ಮತ್ತು ಒಂದು ಕೆತ್ತಿ ಮಾಡಿದ ದೊಡ್ಡ ಕುಳಿ ಇದೆ. ಚಿತ್ರಿತ ಕಲ್ಲಾಸರೆಯ ಪಶ್ಚಿಮಕ್ಕಿರುವ ಕಲ್ಲಾಸರೆಯಲ್ಲಿ ನೆಲಬಂಡೆಯ ಮೇಲೆ ೨ ಸ್ಥಳದಲ್ಲಿ ಕುಳಿ ಆಕೃತಿಗಳಿವೆ. ಅವು ಹಿರೇಬೆಣಕಲ್ಲಿನ ಕುಳಿ ಆಕೃತಿಗಳಂತೆ ಇವೆ. ಬೆಟ್ಟದ ದಕ್ಷಿಣದ ಇಳಿಜಾರಿನ ಒಂದು ಬಂಡೆಯ ಮೇಲೆ ಒಂದು ವೃತ್ತಾಕಾರದ ದೊಡ್ಡ ಕುಳಿ ಇದೆ. ಇದು ಸುಮಾರು ೧೦ ಸೆಂ.ಮೀ. ವ್ಯಾಸದ ಆಳತೆಯನ್ನು, ೧ ಸೆಂ.ಮೀ. ಆಳವನ್ನು ಹೊಂದಿದೆ. ಕೊರೆದು ಇವನ್ನು ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೦೧. ಅಭಿಶಂಕರ್ ಕೆ.(ಸಂ), ೧೯೭೦, ಅದೇ

ಮನ್, ಎಲ್., ೧೯೩೫, ಅದೇ

ಗೋರ್ಡನ್, ಡಿ.ಎಚ್., ೧೯೫೧, ಅದೇ,

ಅಲ್ಚಿನ್, ಎಫ್.ಆರ್., ೧೯೫೫, ಅದೇ

ಶ್ರೀನಿವಾಸಾಚಾರ್ ಪಿ.(ಸಂ), ೧೯೬೩, *ಪ್ರಿ ಹಿಸ್ಟಾರಿಕ್ ಸೈಟ್ಸ್ ಇನ್ ರಾಯಚೂರು ಡಿಸ್ಟ್ರಿಕ್ಟ್* ಐಪಿಜಿಆರ್‌ಎಸ್.ನಂ.೧೫

೦೨. ಫೂಟ್ ಆರ್.ಬಿ., ೧೯೧೬, ಅದೇ,

೦೩. ಸುಂದರ ಎ., ಐ.ಎ.ಆರ್., ೧೯೬೧-೬೨ ರಿಂದ ೧೯೭೮-೮೦ರವರಗೆನ ವರದಿಗಳು.

ಅದೇ, ೧೯೭೪

೦೪. ಷಡಕ್ಷರಯ್ಯ ಆರ್.ಎಂ., ೧೯೮೦, ಅದೇ

೦೫. ಪಾಟೀಲ ಬಿ.ಸಿ., ೧೯೮೪, ಅದೇ,

೦೬. ಶಂಭುಲಿಂಗಪ್ಪ ಟಿ., ೧೯೮೩, ಅದೇ,

# ಅಧ್ಯಾಯ ೫

# ಚಿತ್ರಗಳ ವಿಷಯ ವಿಶ್ಲೇಷಣೆ

೫.೧. ಮನುಷ್ಯ ಚಿತ್ರಗಳು

೫.೨. ಪ್ರಾಣಿ ಚಿತ್ರಗಳು

೫.೩. ಪಕ್ಷಿ ಚಿತ್ರಗಳು

೫.೪. ಸಂಯುಕ್ತ ಚಿತ್ರಗಳು

೫.೫. ವಿಚಿತ್ರ ಆಕೃತಿ ಚಿತ್ರಗಳು

೫.೬. ದೃಶ್ಯ ಚಿತ್ರಗಳು

೫.೭. ಮಂಡಲ, ರೇಖಾ ಸಂಕೇತ ಚಿತ್ರಗಳು

೫.೮. ಇತರ ಚಿತ್ರಗಳು

ಕೊಪ್ಪಳ-ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಚಿತ್ರಗಳು ಮುಖ್ಯವಾಗಿ ಮನುಷ್ಯ, ಪ್ರಾಣಿ, ಪಕ್ಷಿಗಳಿಗೆ ಸಂಬಂಧಿಸಿವೆ. ಒಂದೆರಡು ಬೇರೆ ವಿಷಯದ ಚಿತ್ರಗಳೂ ಇವೆ. ಮನುಷ್ಯ, ಪ್ರಾಣಿ ಪಕ್ಷಿ ಚಿತ್ರಗಳಲ್ಲಿ ಅವುಗಳ ರಚನೆ ಮತ್ತು ಭಂಗಿಯ ವಿಷಯದಿಂದ ವೈವಿಧ್ಯ ವಿಧಗಳಿವೆ. ಒಟ್ಟಾರೆ ಚಿತ್ರಗಳ ವಿಷಯ, ವಿಧಗಳು ಮತ್ತು ಭಂಗಿಗಳು, ಮಂಡಲ ರೇಖಾಚಿತ್ರಗಳ ಚಿತ್ರಣ ವಿವರ ಈ ಮುಂದಿನಂತಿದೆ.

## ೫.೧. ಮನುಷ್ಯ ಚಿತ್ರಗಳು

ಮನುಷ್ಯ ಚಿತ್ರಗಳಲ್ಲಿ ಅನೇಕ ವಿಧಗಳಿವೆ. ಅವು ನಗ್ನ ಚಿತ್ರಗಳು, ಉಬ್ಬಿದ ಮೂತಿಯ ಚಿತ್ರಗಳು, ಸಾಮಾನ್ಯ ಚಿತ್ರಗಳು, ಕಡ್ಡಿರೂಪದ ಚಿತ್ರಗಳು, ಬಾಲವುಳ್ಳ ಚಿತ್ರಗಳು ಇತ್ಯಾದಿಗಳಿವೆ.

**ನಗ್ನ ಮನುಷ್ಯ ಚಿತ್ರಗಳು :** ಮೈಮೇಲೆ ವಿವಿಧ ರೀತಿಯ ಗೆರೆಗಳುಳ್ಳ, ಬೇರೆ ಬೇರೆ ಭಂಗಿಯ ಕೆಲವು ಬೃಹತ್, ಮಧ್ಯಮ ಮತ್ತು ಚಿಕ್ಕ ಪ್ರಮಾಣದ ಏಕವ್ಯಕ್ತಿಯ ಚಿತ್ರಗಳು ಮಲ್ಲಾಪುರ, ಹಿರೇಬೆಣಕಲ್, ಚಿಕ್ಕಬೆಣಕಲ್, ಹಂಪಿ, ನಾರಾಯಣಪೇಟೆ ಮತ್ತು ಹೊಸ ಬಂಡಿಹರ್ಲಾಪುರಗಳಲ್ಲಿವೆ.

ಎರಡು ಕಾಲುಗಳನ್ನು ಅಗಲಿಸಿ, ಕೈಗಳನ್ನು ಮೇಲೆಕ್ಕೆತ್ತಿ ನಿಂತಿರುವ ಮನುಷ್ಯನ ಬೃಹತ್ ಪ್ರಮಾಣದ ಚಿತ್ರ ಮಲ್ಲಾಪುರದ ೩ನೇ ಗವಿ(ಖಾನಸಾಬಗವಿ)ಯಲ್ಲಿದೆ. ಇದು ೧.೮೦ ಮೀ ಅಗಲ ಮತ್ತು ೩ ಮೀ ಎತ್ತರವಾಗಿದೆ. ಇದೇ ರೀತಿಯ ಇತರ ಮಧ್ಯಮ ಪ್ರಮಾಣದ ಐದು ಚಿತ್ರಗಳು ಇಲ್ಲಿಯೇ ಇವೆ. ಇವುಗಳಲ್ಲಿ ಒಬ್ಬ ವ್ಯಕ್ತಿಯ ಚಿತ್ರದಲ್ಲಿ (೧.೬೬ಮೀ ಎತ್ತರ ೧ ಮೀ ಅಗಲ) ಹಸ್ತಗಳು ವೃತ್ತಾಕಾರದಲ್ಲಿವೆ. ಅದಕ್ಕೆ ಸುತ್ತಲೂ ಐದಾರು ಬೆರಳುಗಳಿವೆ. ಅವನ್ನು ಚಿಕ್ಕ ರೇಖೆಗಳಲ್ಲಿ ತೋರಿಸಲಾಗಿದೆ. ಮತ್ತು ತಲೆಯ ಸುತ್ತಲೂ ಕಿರಣಗಳಂತೆ ರೇಖೆಗಳಿವೆ. ಮತ್ತೊಂದು ಚಿತ್ರದಲ್ಲಿ (೦.೪೩ ಮೀ ೧ ಮೀ ಎತ್ತರ) ವ್ಯಕ್ತಿಯ ಕೈಗಳು ಸೊಂಟದ ಮೇಲೆ ಇರಿಸಿದಂತಿವೆ. ಕಾಲುಗಳಲು ತೀರ ಸಣ್ಣಗೆ ಕಡ್ಡಿಯಂತಿವೆ. ಇದೇ ರೀತಿಯ ಒಂದು ಚಿತ್ರ ಹಂಪಿಯ ೫ನೇ ಕಲ್ಲಾಸರೆ (ಭರಮ ದೇವರಗುಂಡು)ಯಲ್ಲಿ ಇದೆ. ಇದೇ ಭಂಗಿಯಲ್ಲಿ ಶಿಶ್ನಗಳನ್ನು ಹೊಂದಿರುವ ಚಿತ್ರಗಳು ಮಲ್ಲಾಪುರ,

ಹಿರೇಬೆಣಕಲ್ ಮತ್ತು ರಾಂಪುರಗಳಲ್ಲಿವೆ. ಇವು ತೊಡೆಗಳನ್ನು ಅಗಲಿಸಿ ಸೊಟ್ಟ ಮಾಡಿ ನಿಂತ ಭಂಗಿಯಲ್ಲಿರುತ್ತವೆ. ಸಣ್ಣ ತಲೆ, ತೋಳುಗಳು ಅಡ್ಡವಾಗಿದ್ದು, ಕೈಗಳು ಮೇಲೆಕ್ಕೆತ್ತಲ್ಪಟ್ಟಿರುತ್ತವೆ. ಹಸ್ತ ಪಾದಗಳನ್ನು ಬಿಡಿಸಿರುವುದಿಲ್ಲ. ನಗ್ನ ದೇಹ, ಶಿಶ್ನವನ್ನು ಸ್ಪಷ್ಟವಾಗಿ ಬಿಡಿಸಲಾಗಿದ್ದು, ಮುಖ, ಮೈ, ಕಾಲು, ತೊಡೆಗಳ ಮೇಲೆಲ್ಲಾ ರೇಖೆಗಳಿರುತ್ತವೆ. ದೊಡ್ಡ ಪ್ರಮಾಣದಲ್ಲಿ ಈ ಚಿತ್ರಗಳು ಹಿರೇಬೆಣಕಲ್‌ನ ೩ನೇ ಗವಿ (೨ಮೀ ಎತ್ತರ) ಮಲ್ಲಾಪುರದ ೧ನೇ ಕಲ್ಲಾಸರೆ (೨.೭೦ ಮೀ ಎತ್ತರ)ಗಳಲ್ಲಿವೆ. ಚಿಕ್ಕ ಪ್ರಮಾಣದಲ್ಲಿ ಮಲ್ಲಾಪುರದ ಅದೇ ಕಲ್ಲಾಸರೆಯ ೨ನೇ ಬದಿಯಲ್ಲಿ ಮತ್ತು ಮೂರನೇ ಗವಿಯಲ್ಲಿ ಇವೆ. ಮೊದಲನೆಯದರಲ್ಲಿ ಶಿಶ್ನ ಭಾಗ, ಎರಡೂ ಕಾಲುಗಳ ನಡುವೆ ದೇಹದ ಅಗಲದಷ್ಟೇ ಇದ್ದರೆ, ಎರಡನೆಯ ಚಿತ್ರ (೦.೫೫ ಎತ್ತರ) ದಲ್ಲಿ ಅದು ಸ್ವಲ್ಪ ಉದ್ದವಾಗಿದ್ದು ಬಾಲದಂತೆ ತೋರುತ್ತದೆ. ಈ ವ್ಯಕ್ತಿಯ ಮುಖ ತ್ರಿಕೋನಾಕಾರದಲ್ಲಿ, ದೇಹ ಚೌಕಾಕಾರದಲ್ಲಿರುವುದು ವಿಶೇಷ. ನಗ್ನ ಪುರುಷನ ಮತ್ತೊಂದು ವಿಶೇಷ ಚಿತ್ರ ರಾಂಪುರದ ೨ನೇ ಗವಿಯಲ್ಲಿದೆ. ನೀಳ ಆಯತಾಕಾರದ ದೇಹ, ದುಂಡಾದ ತಲೆ, ಕಾಲುಗಳನ್ನು ಅಗಲಿಸಿ, ಕೈಗಳನ್ನು ಮೇಲೆಕ್ಕೆತ್ತಿದೆ. ಹಸ್ತ, ಪಾದ ಮೈಮೇಲೆ ರೇಖೆಗಳಿಲ್ಲ. ಎರಡೂ ಕಾಲುಗಳ ಮಧ್ಯ ಉದ್ದವಾದ ಶಿಶ್ನವಿದೆ. ಅದಕ್ಕೆ ಶಿಶ್ನ ಮಣಿಯನ್ನು ತೋರಿಸಲಾಗಿದೆ. ಈ ಚಿತ್ರ ಮೈಮೇಲಿನ ರೇಖೆಗಳಿರುವ ಚಿತ್ರಗಳಿಗಿಂತ ನಂತರ ಕಾಲದ ರಚನೆಯಾಗಿದೆ. ಕೆಲವು ಚಿತ್ರಗಳು ಕೈಗಳನ್ನು ಮೇಲೆಕ್ಕೆತ್ತಿರುವ ಬದಲು ಕೆಳಗೆ ಇಳಿಸಿದ ಭಂಗಿಯಲ್ಲಿವೆ. ಕೈಗಳನ್ನು ಭುಜದ ಸಮಾನಾಂತರದಲ್ಲಿ ಚಾಚಿ ಮೊಣಕೈ ಭಾಗವನ್ನು ಕೆಳಗೆ ಇಳಿಬಿಟ್ಟ ವ್ಯಕ್ತಿಯ ಚಿತ್ರಗಳು ಚಿಕ್ಕ ಬೆಣಕಲ್‌ನ ಮೂರನೇ ಗವಿ ಮತ್ತು ಮಲ್ಲಾಪುರದ ೪ನೇ ಕಲ್ಲಾಸರೆಗಳಲ್ಲಿವೆ. ಇವುಗಳ ಕಾಲಿನ ಭಂಗಿಯೂ ಭಿನ್ನವಾಗಿರುವುದು ವಿಶೇಷ. ಮೊದಲನೆಯದಕ್ಕೆ ಒಂದು ಕಾಲು ವಕ್ರ ನೇರವಾಗಿ ಮತ್ತೊಂದು ಡೊಂಕಾಗಿದ್ದರೆ ಎರಡನೆಯದಕ್ಕೆ ೨ ಕಾಲುಗಳು ಡೊಂಕಾಗಿರದೆ ವಕ್ರ ನೇರವಾಗಿವೆ.

ಎರಡೂ ಕಾಲುಗಳನ್ನು ಅಗಲಿಸಿ ಸ್ವಲ್ಪ ವಕ್ರವಾಗಿ ನಿಂತ ಭಂಗಿಯ ಚಿತ್ರಗಳೂ ಇವೆ. ಇವಕ್ಕೆ ಒಂದೇ ಕೈ ಇರುತ್ತದೆ(ಗೋಚರವಾಗುತ್ತದೆ). ಹಿರೇಬೆಣಕಲ್ (೨ನೇ ಗವಿ) ಮತ್ತು ನಾರಾಯಣ ಪೇಟೆ (೧ನೇ ಗವಿ)ಗಳಲ್ಲಿ ಇವೆ. ಸು.೪ ಮೀ.ಗಿಂತಲೂ ಎತ್ತರವಿರುವ ನಾರಾಯಣ ಪೇಟೆಯ ಮನುಷ್ಯ ಚಿತ್ರದಲ್ಲಿ ಸಣ್ಣ ತಲೆ, ತಲೆಯಲ್ಲಿ ಕೂದಲನ್ನು ಸೂಚಿಸುವ ಸಣ್ಣ ಸಮಾನಾಂತರ ಗೆರೆಗಳಿವೆ. ತಲೆಯು ಬಲಕ್ಕೆ ಸ್ವಲ್ಪ ಬಾಗಿದೆ. ಎಡಗೈ ಇಲ್ಲ. ಮುಂಡದ ಉದ್ದಗಲಗಳು ಪ್ರಮಾಣ ಬದ್ಧವಾಗಿವೆ. ಪುಷ್ಟವಾದ ತೊಡೆಗಳು, ಯಥಾ ಪ್ರಕಾರ ಮುಖ ದೇಹ ತೊಡೆಯ ಮೇಲೆ ರೇಖಾಚಿತ್ರಗಳಿವೆ.

ಮೈಮೇಲೆ ರೇಖೆಗಳನ್ನು ಹೊಂದಿರುವ ಪಾರ್ಶ್ವ ಭಂಗಿಯಲ್ಲಿ ನಿಂತಿರುವ ವ್ಯಕ್ತಿ ಚಿತ್ರಗಳು ಮಲ್ಲಾಪುರ (೧ನೇ ಗವಿ), ಹೊಸಬಂಡಿಪರ್ಲಾಪುರ (೧ನೇ ಗವಿ), ಹಂಪಿ (೧,೫,೭) ಮತ್ತು ಹಿರೇಬೆಣಕಲ್‌ಗಳಲ್ಲಿವೆ. ಇವಕ್ಕೆ ಒಂದೇ ಕಾಲು ಒಂದೇ ಕೈ ಇರುತ್ತದೆ(ಪಾರ್ಶ್ವ ಭಂಗಿಯಲ್ಲಿ ಒಂದೇ ಕಾಣುತ್ತದೆ). ಕಾಲನ್ನು ಮುಂದಕ್ಕೆ ಡೊಂಕು ಮಾಡಿ ನಿಂತು ಕೈಗಳನ್ನು ಮುಖದ ಮುಂದೆ ಎತ್ತಿ ಹಿಡಿದಿರುತ್ತವೆ. ಹೊಸಬಂಡಿ ಹರ್ಲಾಪುರದ ಚಿತ್ರ ಛಾಯಾ ರೂಪದಲ್ಲಿದೆ. ಹಾಗಾಗಿ ಇದರ ಮೈಮೇಲೆ ರೇಖೆಗಳಿಲ್ಲ. ಹಂಪಿಯ ೫ನೇ ಕಲ್ಲಾಸರೆಯಲ್ಲಿ ಕೈಗಳನ್ನು ಭುಜದ ಸಮಾನಾಂತರದಲ್ಲಿ ಮುಂದಕ್ಕೆ ಚಾಚಿದ ಚಿತ್ರವಿದೆ. ಹಿರೇಬೆನಕಲ್ಲಿನ ೧೬ ಮತ್ತು ೧೭ನೇ ಗವಿಗಳಲ್ಲಿ ಈ ರೀತಿಯ ಚಿಕ್ಕ ಚಿಕ್ಕ ಆಕೃತಿಗಳಿವೆ. (೩೭ ಸೆಂ.ಮೀ.ಎತ್ತರ, ೧೭ ಸೆಂ.ಮೀ ಅಗಲ) ಇವುಗಳ ದೇಹದ ಮೇಲೆ ಸಮಾನಾಂತರದಲ್ಲಿ ಅಡ್ಡ ರೇಖೆಗಳಿವೆ.

ಇವಲ್ಲದೇ ಇತರ ಕೆಲವು ನಗ್ನ ಚಿತ್ರಗಳು ಇವೆ. ಹಿರೇಬೆಣಕಲ್ಲಿನ ೫ನೇ ಗವಿಯಲ್ಲಿ ದ್ವಿ ರೇಖೆಯ ನಗ್ನ ಪುರುಷನ ಚಿತ್ರವಿದೆ. ಕೈಗಳನ್ನು ಕೆಳಗೆ ಇಳಿ ಬಿಟ್ಟಿದ್ದಾನೆ. ಒಂದು ಕೈಯಲ್ಲಿ ಹಸ್ತ ಮತ್ತು ಬೆರಳುಗಳಿವೆ. ಶಿಶ್ನವನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ತಲೆ ದೊಡ್ಡದಾಗಿದ್ದು, ಎದೆ ವಿಶಾಲವಾಗಿದೆ. ಇಂದರಗಿಯಲ್ಲಿಯ ಚಿತ್ರ (೦.೬೧ ಮೀ ಎತ್ತರ ೦.೪೪ ಮೀ) ಒಂದು ವಿಶಿಷ್ಟವಾದ ರಚನೆ. ಕಾಲುಗಳನ್ನು ಅಗಲಿಸಿ ಕೈಗಳನ್ನು ಮೇಲೆಕ್ಕೆತ್ತಿ ನಿಂತ ಭಂಗಿಯ ರೇಖಾಚಿತ್ರವಿದು. ತಲೆ ಅರೆ ತ್ರಿಕೋನಾಕಾರದಲ್ಲಿದೆ. ಮುಂಡ ಕೂಡ ಸಂಪೂರ್ಣ ತ್ರಿಕೋನ ರೀತಿಯದು. ಭುಜದಿಂದ ಸಮಾನಾಂತರದಲ್ಲಿ ಕೈಗಳನ್ನು ಬದಿಗೆ ಚಾಚಿ ಮೊಣಕೈಯಿಂದ ಮೇಲಕ್ಕೆ ಎತ್ತಿದೆ. ಕೈ ತುದಿಯಲ್ಲಿ ೩ ಬೆರಳುಗಳನ್ನು ತೋರಿಸಲಾಗಿದೆ. ತ್ರಿಕೋನ ರೀತಿಯ ದೇಹದ ಕೆಳ ವ್ಯಾಸದಲ್ಲಿ ೨ ಬದಿಗೆ ಚಿಕ್ಕ ಕಾಲುಗಳಿವೆ. ಅವೆರಡರ ನಡುವೆ ವೃಷಣ ಮತ್ತು ಶಿಶ್ನವನ್ನು ತೋರಿಸಲಾಗಿದೆ.

**ಸ್ತ್ರೀ ಚಿತ್ರಗಳು :** ಪುರುಷ ಚಿತ್ರಗಳಂತೆ ಮೈಮೇಲೆ ರೇಖೆಯುಳ್ಳ ಸ್ತ್ರೀ ಚಿತ್ರಗಳೂ ಪುರುಷ ಚಿತ್ರಗಳ ಜೊತೆಯಲ್ಲಿಯೇ ಕಂಡು ಬರುತ್ತವೆ. ಹಂಪಿಯ ೫ನೇ ಗವಿಯಲ್ಲಿ ಎರಡು, ಮಲ್ಲಾಪುರದ ೩ನೇ ಗವಿಯಲ್ಲಿ ಎರಡು ಮತ್ತು ಹಿರೇಬೆಣಕಲ್ಲಿನ ೫ನೇ ಕಲ್ಲಾಸೆರೆಯಲ್ಲಿ ಎರಡು ಚಿತ್ರಗಳಿವೆ. ಸಾಮಾನ್ಯವಾಗಿ ಇವು ಪಾರ್ಶ್ವ ಭಂಗಿಯವು. ಕಾಲುಗಳನ್ನು ಸ್ವಲ್ಪ ಮುಂದಕ್ಕೆ ಬಾಗಿಸಿ ವಕ್ರವಾಗಿ ನಿಂತಿರುತ್ತವೆ. ಕೈಗಳು ಭುಜದ ಸಮಾನಾಂತರದಲ್ಲಿ ನೇರವಾಗಿ ಇರುತ್ತವೆ. ಮಲ್ಲಾಪುರದ ಒಂದು ಸ್ತ್ರೀ ಚಿತ್ರದಲ್ಲಿ ಮಾತ್ರ ಕೈ ಮೇಲೆಕ್ಕೆತ್ತಿದೆ. ತಲೆ ಚಿಕ್ಕದಿರುತ್ತದೆ. ಸ್ತನಗಳನ್ನು ಸ್ಪಷ್ಟವಾಗಿ ತೋರಿಸಲಾಗಿರುತ್ತದೆ. ಪುಷ್ಟಗಳು ಸ್ವಲ್ಪ ದೊಡ್ಡದಿರುತ್ತವೆ. ಮಲ್ಲಾಪುರದ ಒಂದು ಸ್ತ್ರೀ ಚಿತ್ರ

೧.೭೬ಮೀ ಎತ್ತರವಾಗಿದೆ. ನಾರಾಯಣ ಪೇಟೆ (೧ನೇ ಕಲ್ಲಾಸರೆ)ಯಲ್ಲಿಯ ಸ್ತ್ರೀ ಚಿತ್ರ ಮತ್ತೊಂದು ಪ್ರಕಾರದು. ಎರಡೂ ಕೈಗಳನ್ನು ಚಾಚಿ, ಕಾಲುಗಳನ್ನು ಅಗಲಿಸಿ ಕುಳಿತ ಸ್ತ್ರೀಯದು. ಇದು ಛಾಯಾರೂಪದ ಚಿತ್ರದ. ತಲೆಯ ಮೇಲಿನ ಉದ್ದ ಕೂದಲು ಎರಡೂ ಕಡೆ ಸೆಟೆದು ನಿಂತಿವೆ. ಹೊಟ್ಟೆ ಸ್ವಲ್ಪ ಉಬ್ಬಿದೆ. ಸೊಂಟದ ಕೆಳಭಾಗ ತ್ರಿಕೋನಾಕೃತಿಯಂತೆ ಕೆಳಚಾಚಿದೆ. ತಲೆಯ ಕೂದಲು ಸೆಟೆದಿರುವುದು, ಗರ್ಭಿಣಿಯಂತೆ ಉಬ್ಬು ಹೊಟ್ಟೆ ಪ್ರಾಯಶ: ಯೋನಿಯನ್ನು ಸೂಚಿಸುವ ಸೊಂಟದ ಕೆಳಗಿನ ತ್ರಿಕೋನಾಕಾರ ಈ ಚಿತ್ರವು ಸ್ತ್ರೀಯದೆಂದು ಸೂಚಿಸುತ್ತವೆ.

**ಇತರ ಮನುಷ್ಯ ಚಿತ್ರಗಳು :** ಸಮದೇಹದ ಮನುಷ್ಯ ಚಿತ್ರ: ಚಿಕ್ಕರಾಂಪುರದ ಐದನೆಯ ಕಲ್ಲಾಸರೆಯಲ್ಲಿ ಒಂದು ಮನುಷ್ಯ ಚಿತ್ರವಿದೆ. ಈ ಕಲ್ಲಾಸರೆ ಸುಮಾರು ೧೦ ಮೀ ಎತ್ತರದಲ್ಲಿ ಛಾವಣಿಯಂತೆ ಅಡ್ಡ ಚಾಚಿರುವ ಬಂಡೆ. ಇದರ ಒಳ ಮೈಮೇಲೆ ಇದೆ. ಈ ಮನುಷ್ಯ ಚಿತ್ರ ಸಂಪೂರ್ಣ ಛಾಯಾರೂಪದ್ದು. ಸು.೨ಮೀ ಎತ್ತರವಿರಬಹುದು. ದುಂಡು ತಲೆ, ಪ್ರಮಾಣಬದ್ಧ ದೇಹ, ನಿಂತ ಭಂಗಿಯಲ್ಲಿಯೂ ಒಂದು ವೈಶಿಷ್ಟ್ಯವಿದೆ. ತೊಡೆಗಳು ನೇರವಾಗಿವೆ. ಆದರೆ ಕೈಗಳು ಮೇಲೆಕ್ಕೆತ್ತಿ ನೆಟ್ಟಗೆ ನಿಂತ ಭಂಗಿಯಲ್ಲಿವೆ.

**ಉಬ್ಬಿದ ಮೂತಿಯ ಮನುಷ್ಯ ಚಿತ್ರಗಳು :** ಒಂದು ಕೈಯನ್ನು ಭುಜದ ಸಮಾನಾಂತರದಲ್ಲಿ ತೋರು ರೀತಿಯಲ್ಲಿ ಹಿಡಿದು ನಿಂತಿರುವ ಕೆಲವು ವಿಶೇಷ ಮನುಷ್ಯ ಚಿತ್ರಗಳು ಆನೆಗುಂದಿ (೧ನೇ ಕಲ್ಲಾಸರೆ) ರಾಂಪುರ (೧ನೇ ಕಲ್ಲಾಸರೆ) ಮತ್ತು ಗೂಗಿಬಂಡಿಗಳಲ್ಲಿವೆ. ಇವುಗಳ ಮೂತಿ ಮಂಗನ ಮುಖದಂತೆ ಉಬ್ಬಿರುತ್ತದೆ.

ಆನೆಗುಂದಿಯ ಚಿತ್ರ ರೇಖಾರೂಪದ್ದು, ಕೆಳಗೆ ಹಿಡಿದಿರುವ ಕೈ ಮಾತ್ರ ಸಂಪೂರ್ಣ ಛಾಯಾರೂಪದಲ್ಲಿದೆ. ವಿಶಾಲವಾದ ಎದೆ, ಸಣ್ಣ ಕಟಿ, ಹಸ್ತ ಪಾದಗಳಿಲ್ಲ. ಮುಖ ವಿಶಿಷ್ಟವಾಗಿದೆ. ಕತ್ತಿನ ಮೇಲೆ ಮುಖ ಭಾಗದಲ್ಲಿ ಚೂಪಾದ ಮೂತಿಯಿದೆ. ತಲೆ ವೃತ್ತಾಕಾರವಾಗಿರದೇ ಗರಗಸದ ಹಲ್ಲಿನಂತಿದೆ. ಕಣ್ಣು, ಕಿವಿ, ಮೂಗುಗಳಿಲ್ಲ. ಬದಿಯಲ್ಲಿ ಮನುಷ್ಯ ಮತ್ತು ಪ್ರಾಣಿಯ ಚಿತ್ರಗಳಿವೆ.

೦.೮೯ಮೀ ಎತ್ತರವಿರುವ ರಾಂಪುರದ ಮನುಷ್ಯ ಚಿತ್ರವು ಇದೇ ರೀತಿಯಲ್ಲಿದ್ದರೂ, ಸ್ವಲ್ಪ ಭಿನ್ನವಾದ ಶೈಲಿಯಲ್ಲಿದೆ. ಇದು ಸಂಪೂರ್ಣ ಛಾಯಾರೂಪದ ಚಿತ್ರ. ಬಹಳ ಸುಂದರವಾಗಿ ಚಿತ್ರಿಸಲಾಗಿದೆ. ನಿಂತ ಭಂಗಿಯಲ್ಲಿದೆ. ಬಲಗೈ ಭುಜದ ಸಮಾನಾಂತರದಲ್ಲಿ ತೋರು ರೀತಿಯಲ್ಲಿವೆ. ಇನ್ನೊಂದು ಕೈಯನ್ನು ಮೊಣಕೈವರೆಗೆ ಕೆಳಕ್ಕಿಳಿದು ಅಲ್ಲಿಂದ ಮೇಲೆಕ್ಕೆ ಎತ್ತಲಾಗಿದೆ. ವಿಶಾಲವಾದ ಭುಜ, ಸಣ್ಣ ಕಟಿ ಮತ್ತು ಅದಕ್ಕೆ ಪ್ರಮಾಣ ಬದ್ಧವಾದ ಪುಷ್ಟ ಮತ್ತು ತೊಡೆ ಕಾಲುಗಳಿವೆ.

ಪಾದಗಳನ್ನು ತೋರಿಸಿಲ್ಲ. ಹಸ್ತ ಅದರ ೫ ಬೆರಳುಗಳನ್ನು ಅತ್ಯಂತ ಸ್ಪಷ್ಟವಾಗಿ ತೋರಿಸಲಾಗಿದೆ. ಮುಖ ಬಲಗಡೆ ವಾಲಿದ್ದು (ತೋರು ಕೈಕಡೆ) ಕಿರಿ ತಲೆ, ಕಣ್ಣಿನ ಮೇಲಿನ ಉಬ್ಬು, ಉಬ್ಬಿದ ಮೂತಿ ಸ್ಪಷ್ಟವಾಗಿದೆ. ಕಣ್ಣು ಕಿವಿಗಳನ್ನು ತೋರಿಸಿಲ್ಲ. ಕತ್ತು, ಕತ್ತಿನ ಕೆಳಗೆ ಗರಗಸದ ಹಲ್ಲಿನ ರೀತಿಯ ಆಭರಣ (ಸರ)ದ ಅಲಂಕರಣೆ ಇರುವುದು ಗಮನಾರ್ಹ. ಇಡೀ ಚಿತ್ರ ೫ ಭಾಗದಲ್ಲಿದೆ. ಮುಖ, ಕತ್ತು, ಕೊರಳ ಸರ, ಇಡೀ ದೇಹ ಮತ್ತು ಎಡಗೈಯಲ್ಲಿ ಮೊಣಕೈಯಿಂದ ಮುಂದಿನ ಕೈ ಹೀಗೆ ಐದು ಭಾಗಗಳು ಪ್ರತ್ಯೇಕವಿದೆ. ಈ ವ್ಯಕ್ತಿಯ ಬಲಭಾಗದಲ್ಲಿ ಇದೇ ರೀತಿಯ ಇನ್ನೊಂದು ಚಿಕ್ಕ ಪ್ರಮಾಣದ (೦.೫೨ ಮೀ) ಚಿತ್ರ ಮತ್ತು ಎಡ ಭಾಗದಲ್ಲಿ ನವಿಲಿನ ಚಿತ್ರಗಳಿವೆ.

ಗೂಗಿಬಂಡಿಯಲ್ಲಿ ಇದೇ ರೀತಿಯ ಚಿತ್ರವಿದೆ. ಆದರೆ ಈಚೆಗೆ ಅದನ್ನು ಬೇರೆ ಆಕಾರದಲ್ಲಿ ಪುನ: ಬರೆಯಲಾಗಿದೆ. ಮಲ್ಲಾಪುರದ ೪ನೇ ಕಲ್ಲಾಸರೆಯಲ್ಲಿ ಎರಡೂ ಕೈಗಳನ್ನು ಅಗಲಿಸಿ ನಿಂತ ವ್ಯಕ್ತಿಯ ಅಪೂರ್ಣ ಚಿತ್ರವಿದೆ. ಅದರ ಮೂತಿಯು ಚೂಪಾಗಿದೆ.

ಕೋಡಿನ ಮಲುಖವಾಡ ಹಾಗೂ ಬಾಲ ಧರಿಸಿದ ಮನುಷ್ಯ ಚಿತ್ರಗಳು: ತಲೆಯಲ್ಲಿ ಕೋಡು ಮತ್ತು ಬಾಲವುಳ್ಳ ಕೆಲವು ಮನುಷ್ಯ ಚಿತ್ರಗಳು ಹಿರೇಬೆನಕಲ್ಲಿನ ೫ನೇ ಗವಿ ಮತ್ತು ಮಲ್ಲಾಪುರದ ೭ನೇ ಗವಿಯಲ್ಲಿ ನಾರಾಯಣಪೇಟೆಯ ೩ನೇ ಗವಿಯಲ್ಲಿ ಇವೆ. ಇವು ಸಂಪೂರ್ಣ ಛಾಯಾರೂಪದ ಚಿತ್ರಗಳು. ಪ್ರಾಣಿಗಳ ಸಮೂಹದ ಮಧ್ಯ ನಿಂತ ಭಂಗಿಯಲ್ಲಿವೆ. ಹಿರೇಬೆನಕಲ್ಲಿನಲ್ಲಿ ಎರಡು ಚಿತ್ರಗಳಿವೆ. ಅದರಲ್ಲಿ ದೊಡ್ಡ ವ್ಯಕ್ತಿಯ ಕೈಗಳನ್ನು ಎರಡೂ ಬದಿಗೆ ಅಗಲಿಸಿ ನಿಂತಿದ್ದಾನೆ. ಕೈಯಲ್ಲಿ ಹಸ್ತ ಬೆರೆಳುಗಳನ್ನು ತೋರಿಸಲಾಗಿದೆ. ಮುಖಕ್ಕೆ ಕೊಡುಳ್ಳ ಮುಖವಾಡವನ್ನು ಧರಿಸಿದಂತಿದೆ. ಕೋಡುಗಳು ಎರಡು ಕಡೆಗೆ ಎತ್ತರದಲ್ಲಿ ಬಾಗಿವೆ. ಸೊಂಟದಲ್ಲಿ ಬಾಲವಿದೆ. ಪಕ್ಕದಲ್ಲಿ ಇನ್ನೊಂದು ಸಣ್ಣ ಚಿತ್ರವಿದ್ದು ಅದರ ಕೋಡುಗಳು ದೊಡ್ಡದಾಗಿವೆ. ಒಂದು ಕೈಯಲ್ಲಿ ದುಂಡಾದ ವಸ್ತುವನ್ನು ಹಿಡಿದಿದೆ.

ಮಲ್ಲಾಪುರದ ಮನುಷ್ಯ, ಅನೇಕ ಪ್ರಾಣಿಗಳ ಗುಂಪಿನ ಮಧ್ಯ ಇದ್ದು, ಎರಡೂ ಕಾಲುಗಳನ್ನು, ಕೈಗಳನ್ನು ಅಗಲಿಸಿ ನಿಂತಿದ್ದಾನೆ. ಮುಖವಾಡ ಧರಿಸಿ ನಿಂತಿದ್ದು, ತಲೆಯಲ್ಲಿ ಒಂದರ ಮೇಲೊಂದರಂತೆ ಎರಡು ಕೋಡುಗಳಿವೆ. ಎರಡು ಕಾಲುಗಳ ಮಧ್ಯ ಬಾಲ ಇಳಿ ಬಿದ್ದಿದೆ. ಇಲ್ಲಿಯೇ ೯ನೇ ಗವಿಯಲ್ಲಿ ಮುಖವಾಡ ಧರಿಸಿ ನಿಂತ ಮನುಷ್ಯನ ಚಿತ್ರವಿದೆ. ಆದರೆ ಬಾಲವಿಲ್ಲ. ನಾರಾಯಣ ಪೇಟೆಯ ಚಿತ್ರವು ಮನುಷ್ಯ ಚಿತ್ರವೆನ್ನುವುದರ ಬಗ್ಗೆ ಗೊಂದಲ ಉಂಟು ಮಾಡುತ್ತದೆ. ಕಾಲು ಕೈಗಳನ್ನು ಅಗಲಿಸಿ ನಿಂತಿದೆ. ಮುಖಕ್ಕೆ ಕೋಡುಳ್ಳ ಮುಖವಾಡವನ್ನು ಮೈಮೇಲೆ ಉಡುಪನ್ನು ಧರಿಸಿದಂತಿದೆ.

ತಲೆಯ ಸುತ್ತಲೂ ಕಿರಣದಂತೆ ರೇಖೆ ಅಥವಾ ಕೂದಲಿರುವ ಮನುಷ್ಯ ಚಿತ್ರಗಳು: ತಲೆಯ ಸುತ್ತಲೂ ಗೆರೆಗಳಿರುವ ಎರಡು ರೀತಿಯ ಮನುಷ್ಯ ಚಿತ್ರಗಳು ಕಂಡು ಬರುತ್ತವೆ. ಅವುಗಳಲ್ಲಿ ಎಮ್ಮಿಗುಡ್ಡ (೧ನೇ ಕಲ್ಲಾಸರೆ) ಮತ್ತು ಆನೆಗುಂದಿ (೧ನೇ ಕಲ್ಲಾಸರೆ)ಯ ಚಿತ್ರಗಳು ಒಂದು ರೀತಿಯವು. ಇಲ್ಲಿ ವ್ಯಕ್ತಿಯ ಕೈಗಳನ್ನು ದೇಹದಿಂದ ಸ್ವಲ್ಪ ಅಂತರದಲ್ಲಿ ಅಗಲಿಸಿ ಕೆಳಗೆ ಹಿಡಿದಿದ್ದಾನೆ. ವಿಶಾಲ ಎದೆ, ಸಣ್ಣ ಕಟಿ, ಅಗಲವಾದ ಪುಷ್ಠಗಳಿವೆ. ಹಸ್ತ ಪಾದಗಳಿರುವುದಿಲ್ಲ. ವೃತ್ತಾಕಾರದ ತಲೆಯ ಸುತ್ತಲೂ ಸಮಾನಾಂತರದಲ್ಲಿ ರೇಖೆಗಳಿರುತ್ತವೆ. ಎಮ್ಮಿಗುಡ್ಡದಲ್ಲಿ ವ್ಯಕ್ತಿಯು ಒಂದು ಜಿಂಕೆಯ ಮೇಲೆ ನಿಂತಿದ್ದಾನೆ. ವ್ಯಕ್ತಿ ಚಿತ್ರ ಛಾಯಾರೂಪದ್ದಾದರೆ, ಜಿಂಕೆಯದು ರೇಖಾ ಚಿತ್ರ. ಈ ಮನುಷ್ಯರ ತಲೆಯ ಸುತ್ತಲಿನ ರೇಖೆಗಳು ಸಮಾನಾಂತರದಲ್ಲಿರುವುದು. ದೇಹವು ಸಮಪ್ರಮಾಣದಲ್ಲಿ ಚಿತ್ರಿಸಲ್ಪಟ್ಟಿರುವುದು. ಮತ್ತು ಚಿಗರೆಯ ಮೇಲೆ ನಿಂತ ಸಂದರ್ಭವನ್ನು ಗಮನಿಸಿ ಇದು ವಿಶೇಷ ವ್ಯಕ್ತಿಯ ಚಿತ್ರವೆನ್ನಬಹುದು. ಹಾಗಾಗಿ ತಲೆ ಸುತ್ತಲಿನ ರೇಖೆಗಳು ಕೂದಲುಗಳಲ್ಲವೆಂದು ಹೇಳಬಹುದು.

ಎರಡನೆಯ ರೀತಿಯ ಮನುಷ್ಯ ಚಿತ್ರಗಳಲ್ಲಿ ತಲೆಯ ಸುತ್ತಲಿನ ರೇಖೆಗಳನ್ನು ಖಂಡಿತವಾಗಿ ಕೂದಲುಗಳೆನ್ನಬಹುದು. ಆನೆಗುಂದಿಯ ೬ನೇ ನೆಲೆಯ ೩ನೇ ಗುಂಡಿನಲ್ಲಿ ಒಂದು ಮನುಷ್ಯ ಚಿತ್ರವಿದೆ. ಅದರ ತಲೆ ಮತ್ತು ಕತ್ತು ಪೂರ್ಣ ಛಾಯಾರೂಪದ್ದು. ತಲೆಯ ಸುತ್ತಲೂ ದೊಡ್ಡದಾಗಿ ಹರಡಿದ ರೀತಿಯ ರೇಖೆಗಳಿವೆ. ಇವು ಕೂದಲುಗಳಂತೆ ಸ್ಪಷ್ಟವಾಗಿ ತೋರುತ್ತವೆ. ಅದೇ ರೀತಿ ಅಗೋಲಿಯ ೨ನೇ ಕಲ್ಲಾಸೆರೆಯಲ್ಲಿ ಒಬ್ಬ ಬೇಟೆಗಾರ ಮತ್ತು ಇನ್ನೊಬ್ಬ ವ್ಯಕ್ತಿಯ ತಲೆಯಲ್ಲಿ ರೇಖೆಗಳಿವೆ. ಅವು ಕೂಡ ಕೂದಲುಗಳೆನ್ನಬಹುದು.

ಕೆಲವು ವಿಶಿಷ್ಟ ಮನುಷ್ಯಾಕೃತಿಗಳು: ಕೆಲವು ಕಡೆ ಮನುಷ್ಯನನ್ನು ವಿಶಿಷ್ಟವಾದ ರೀತಿಯಲ್ಲಿ ಚಿತ್ರಿಸಲಾಗಿದೆ. ಇವುಗಳ ಮುಖ ದೇಹ ಕೈ ಕಾಲು ವಿಚಿತ್ರವಾದ ಸಂಕೇತ ರೂಪದಲ್ಲಿರುತ್ತವೆ. ಅಂಥ ಕೆಲವು ಚಿತ್ರಗಳು ಇಂತಿವೆ.

ನಾರಾಯಣ ಪೇಟೆಯ ಮೂರನೆಯ ಕಲ್ಲಾಸರೆಯಲ್ಲಿ ಎರಡು ಚಿತ್ರಗಳಿವೆ. ಒಂದು ವ್ಯಕ್ತಿಯ ಹಿಂಬದಿಯದು. ಒಂದು ಕೈಯನ್ನೆತ್ತಿ ಯಾರನ್ನೋ ಕರೆಯುತ್ತಿರುವಂತಿದೆ. ಹಸ್ತದ ಬೆರಳು ಮತ್ತೊಂದು ಕೈಕಾಲು ಇಲ್ಲಿ ಕೇವಲ ಸಾಂಕೇಂತಿಕ. ಇನ್ನೊಂದು ಚಿತ್ರ (೦.೩೦ ಮೀ ೦.೩೭ ಎತ್ತರ) ರಾಕೆಟ್ ಮಾದರಿಯ ದೇಹ, ಕೈಬರಳು, ಕಾಲು ಸಾಂಕೇತಿಕವಾಗಿವೆ. ಅದೇ ರೀತಿ ಗಡ್ಡಿ (೧ನೇ ಕಲ್ಲಾಸರೆ) ಯಲ್ಲಿ ಮನುಷ್ಯನ ಒಂದು ರೇಖಾಚಿತ್ರವಿದೆ. ಕೈಗಳನ್ನೆತ್ತಿ ನಿಂತಿರುವ ಮನುಷ್ಯ ರಚನೆ ತುಂಬಾ ಸರಳವಾಗಿದೆ. ಸಂಗಾಪುರದ ೫ನೇ ಕಲ್ಲಾಸರೆಯಲ್ಲಿ ಒಂದು ವ್ಯಕ್ತಿಚಿತ್ರ ಈಗಿನ ಅಂಗಿ ಮತ್ತು

ಧೋತಿಯನ್ನು ಧರಿಸಿದಂತ ರೀತಿಯಲ್ಲಿ ಚಿತ್ರಿಸಿರುವುದು ವಿಶೇಷ. ಇಂದರಗಿಯ ನಗ್ನ ವ್ಯಕ್ತಿಯು ಕೂಡ ಭಿನ್ನವಾಗಿದೆ. ತಲೆ ಮತ್ತು ದೇಹ ತ್ರಿಕೋನಾಕಾರದಲ್ಲಿದೆ. ಕೈ ಮತ್ತು ಕಾಲು ಕೇವಲ ಸಣ್ಣ ಕಡ್ಡಿಯಂತಹ ರೇಖೆಗಳು ಮಲ್ಲಾಪುರದ ಒಂದನೇ ಕಲ್ಲಾಸರೆಯಲ್ಲಿ ಮತ್ತೊಂದು ರೀತಿಯ ಮನುಷ್ಯ ಚಿತ್ರವಿದೆ. ಇದು ರೇಖಾಕೃತಿಯಾದರೂ ಅದರ ಕೈ, ತೊಡೆ, ಕಾಲುಗಳನ್ನು ದಪ್ಪವಾಗಿ ತೋರಿಸಲಾಗಿದೆ. ರಾಂಪುರದಲ್ಲಿ ತಲೆಯಲ್ಲಿ ಕೋಡಿದ್ದು, ಮೈಮೇಲೆ ಏನೇನೋ ಹೊದ್ದುಕೊಂಡಂತಿರುವ ಎರಡು ಕೈಗಳನ್ನು ಮೇಲಕ್ಕೆತ್ತಿ ಬಾಲವನ್ನು ಹೊಂದಿರುವ ವ್ಯಕ್ತಿ ಚಿತ್ರಗಳಿವೆ. ಈ ಚಿತ್ರಗಳು ರಚನೆಯಲ್ಲಿ ಸರಳವಾಗಿದ್ದರೂ ಮನುಷ್ಯ ಕಲ್ಪನೆಯನ್ನು ಸಶಕ್ತವಾಗಿ ಅಭಿವ್ಯಕ್ತಿಗೊಳಿಸುತ್ತವೆನ್ನಬಹುದು.

**ಸಾಮಾನ್ಯ ಮನುಷ್ಯ ಚಿತ್ರಗಳು :** ಮೇಲೆ ಗಮನಿಸಿದಂತೆ ಕೆಲವು ವಿಶಿಷ್ಟ ರೀತಿಯ ಮನುಷ್ಯ ಚಿತ್ರಗಳು ಒಂದು ರೀತಿಯದಾದರೆ ಬಹು ಸಂಖ್ಯೆಯಲ್ಲಿ ಸಾಮಾನ್ಯವಾಗಿ ಕಾಣಬರುವ ಮನುಷ್ಯನ ಚಿತ್ರಗಳು ಇನ್ನೊಂದು ರೀತಿಯವು. ಈಟಿ, ಬಿಲ್ಲು, ಬಾಣ, ಖಡ್ಗ, ಕೋಲು, ಕೊಡಲಿ ಮತ್ತಿತರ ಶಸ್ತ್ರಾಸ್ತ್ರಗಳನ್ನು ಹಿಡಿದುಕೊಂಡಿರುವ 'ಯಾವುದೋ ಕ್ರಿಯೆಯಲ್ಲಿ ತೊಡಗಿರುವ' ಸಾಲಾಗಿ ಕುಣಿಯುತ್ತಿರುವ, ಅಶ್ವಸವಾರಿ ಮಾಡುತ್ತಿರುವ ಸಣ್ಣ ಅಳತೆಯ ಮನುಷ್ಯ ಚಿತ್ರಗಳು ಸಾಮಾನ್ಯವಾಗಿವೆ. ಇಂತಹ ಮನುಷ್ಯ ಚಿತ್ರಗಳ ರಚನೆ ಸರಳವಾಗಿರುತ್ತದೆ. ಇದರಲ್ಲಿ ನಾಲ್ಕು ರೀತಿಯನ್ನು ಗುರುತಿಸಬಹುದು.(೨) ತ್ರಿಕೋನಗಳನ್ನು ಪರಸ್ಪರ ಎದುರಾಗಿ ಒಂದರ ಮೇಲೆ ಒಂದು ಇರಿಸಿದಂತಹ ಮುಂಡದ (ದೇಹದ) ಮನುಷ್ಯ ಚಿತ್ರಗಳು ಒಂದು ರೀತಿಯವು. ಇವು ಛಾಯಾರೂಪವಾಗಿರಬಹುದು. (ಗಡ್ಡಿ ೧, ಆನೇಗುಂದಿ ೩ ಮಲ್ಲಾಪುರ ೧೨, ಹಿರೇಬೆಣಕಲ್ ೧,೬,೧೧,೧೨ ವೆಂಕಟಾಪುರ ೨ ಮತ್ತು ಚಿಕ್ಕರಾಂಪುರ ೪) ಇಲ್ಲವೇ ಬಾಹ್ಯರೇಖಾತ್ಮಕವಾಗಿರಬಹುದು. (ಅಗೋಲಿ-೨, ಹಂಪಿ-೪, ಮಲ್ಲಾಪುರ-೬) ಎರಡನೆ ರೀತಿಯ ಚಿತ್ರಗಳು ವಿಶಾಲವಾದ ಭುಜ, ದ್ವಿರೇಖೆಯ ಕೈಗಳು, ಉದ್ದವಾದ ಮುಂಡದಲ್ಲಿ ಸಣ್ಣ ಕಟಿ, ದೊಡ್ಡ ಪುಷ್ಠ ಮತ್ತು ದಪ್ಪ ಕಾಲುಗಳಿರುತ್ತವೆ. ಈ ರೀತಿಯವು ಹೆಚ್ಚು ನೈಜ ಆಕಾರದಲ್ಲಿರುತ್ತವೆನ್ನಬಹುದು. ವಿಶೇಷವೆಂದರೆ ಇವು ಬೃಹತ್ ಶಿಲಾಯುಗದ ಕಾಲದಲ್ಲಿ ನಿಲ್ಲಿಸುತ್ತಿದ್ದ ಬೃಹತ್ ಮಾನವ ಗೊಂಬೆಗಳನ್ನು ಹೋಲುವುದು. ಇವು ಛಾಯಾರೂಪದಲ್ಲಿ ಇರುತ್ತವೆ. (ಆನೆಗುಂದಿ-೨, ಮಲ್ಲಾಪುರ-೯, ಹಿರೆಬೆಣಕಲ್ -೧,೬,೧೧,೧೨) ಆನೆಗುಂದಿಯಲ್ಲಿಯ ಈ ತರಹದ ಚಿತ್ರಗಳಲ್ಲಿ ತಲೆಯಲ್ಲಿ ಕೂದಲನ್ನು ಹಿಂದೆ ಜುಟ್ಟು ಕಟ್ಟಿಕೊಂಡಂತೆ ಇವೆ.

ಮೂರನೆಯ ರೀತಿಯ ಚಿತ್ರಗಳೆಂದರೆ ಮುಂಡ ಲಂಬವಾಗಿ ಆಯಾತಾಕಾರದಲ್ಲಿರುವುದು. ಅದರ ಮೇಲಿನ ಎರಡು ಮೂಲೆಗೆ ಕೈಗಳನ್ನು, ಕೆಳ ಮೂಲೆಗಳಿಂದ ಕಾಲುಗಳನ್ನು ಬಿಡಿಸಲಾಗಿದೆ.

ಕೈಕಾಲುಗಳು ಕೇವಲ ರೇಖೆ ಮಾತ್ರ, ತಲೆ ದುಂಡಾಗಿರುತ್ತದೆ. ಇವು ಛಾಯಾ (ಅಗೋಲಿ-೨, ಆನೆಗುಂದಿ-೮, ಮಲ್ಲಾಪುರ-೭) ಇಲ್ಲವೇ ರೇಖಾ (ಆನೆಗುಂದಿ-೮) ರೂಪದಲ್ಲಿರುತ್ತವೆ. ನಾಲ್ಕನೆಯ ರೀತಿಯ ಚಿತ್ರ ತೆಂಬಾದ ನಾಲ್ಕನೇ ಕಲ್ಲಾಸರೆಯಲ್ಲಿದೆ. ಪಶುಗಳನ್ನು ಕಾಯುತ್ತಿರುವ ಮನುಷ್ಯನ ಚಿತ್ರವಿದು. ಎದೆ ಅಗಲವಾಗಿದ್ದು ಕಟಿಯವರೆಗೂ ಸಣ್ಣದಾಗುತ್ತಾ ಬಂದು ಅಲ್ಲಿಂದ ಮೊಣಕಾಲಿನವರೆಗೆ ಉದ್ದವಾಗಿ ಒಂದೇ ರೀತಿಯಲ್ಲಿವೆ. ಕೈಕಾಲುಗಳು ಪ್ರಮಾಣಬದ್ಧವಾಗಿವೆ. ಉಳಿದ ಎಲ್ಲಾ ರೀತಿಗಿಂತ ಇದು ಹೆಚ್ಚು ನೈಜ ರೂಪದಲ್ಲಿದೆ ಎನ್ನಬಹುದು.

**ಕಡ್ಡಿ ಯಾಕಾರದ (ರೇಖೆಯ) ಮನುಷ್ಯ ಚಿತ್ರಗಳು :** ಕೊಪ್ಪಳ ಹಂಪಿ ಪ್ರದೇಶದಲ್ಲಿ ಆನೆಗುಂದಿ (೨,೩,೪,೮) ಅಗೋಲಿ(೧) ಎಮ್ಮಿಗುಡ್ಡ (೨) ಬಿಳೆಭಾವಿ(೨) ನಾಗೇನಹಳ್ಳಿ(೧), ತೆಂಬಾ(೨) ಸಂಗಾಪುರ(೯) ಮತ್ತು ಹೊಸ ಬಂಡಿಹರ್ಲಾಪುರಗಳಲ್ಲಿ ಕಡ್ಡಿ ರೂಪದ ಮನುಷ್ಯ ಚಿತ್ರಗಳಿವೆ. ಇವುಗಳಲ್ಲಿ ಬಂಡಿ ಹರ್ಲಾಪುರ ಹೊರತುಪಡಿಸಿ ಉಳಿದವು ಬಿಳಿ ಬಣ್ಣ (ಸುಣ್ಣ)ದವಾಗಿದ್ದು ಇತಿಹಾಸ ಕಾಲದವು. ಚಿಕ್ಕ ಆಕೃತಿಗಳಾಗಿರುವ ಇವು ಸಾಮಾನ್ಯ ರೇಖೆಗಳಲ್ಲಿಯೇ ದೇಹ ಕೈಕಾಲುಗಳನ್ನು ತೋರಿಸಲಾಗಿರುತ್ತದೆ. ರೇಖೆಗಳ ವಿವಿಧ ವಿನ್ಯಾಸದಲ್ಲಿ ಬೇರೆ ಬೇರೆ ಭಂಗಿಯನ್ನು ರೂಪಿಸಲಾಗಿದೆ. ಇವುಗಳಲ್ಲಿ ಸ್ತ್ರೀ ಚಿತ್ರಗಳೂ ಇವೆ. ತಲೆಯಲ್ಲಿ ಎರಡೂ ಬದಿ ಜಡೆಯ ರೀತಿ ರೇಖೆ ಹಾಕಿರುವುದು (ಸಂಗಾಪುರ-೯) ಇಲ್ಲವೇ ಕೈಯ ಕೆಳಗೆ ಎಡ ಭಾಗದಲ್ಲಿ ೨ ಸಣ್ಣ ಬಿಂದುಗಳನ್ನಿಟ್ಟು ಸ್ತನಗಳನ್ನು ಸಂಕೇತಿಸಲಾಗಿದೆ. ಇವು ಸ್ತ್ರೀ ಚಿತ್ರಗಳೆಂದು ತಿಳಿಯುತ್ತವೆ.

**ಬಾಲವುಳ್ಳ ಮನುಷ್ಯ ಚಿತ್ರಗಳು :** ಇವು ಕೂಡ ಬಿಳಿ ಬಣ್ಣದವು ಇತಿಹಾಸ ಕಾಲಕ್ಕೆ ಸೇರುತ್ತವೆನ್ನಬಹುದು. ಈ ಚಿತ್ರಗಳು ಆನೆಗುಂದಿಯಲ್ಲಿ ಹೆಚ್ಚು ಕಂಡು ಬರುತ್ತವೆ. ಅಲ್ಲಿಯ ೪,೮ನೇ ಕಲ್ಲಾಸರೆ ಮತ್ತು ಮ್ಯಾಗಲಮಠದ ಗುಡ್ಡದ ಕಲ್ಲಾಸರೆಯಲ್ಲಿ ಇಂತಹ ಚಿತ್ರಗಳಿವೆ. ೮ರಲ್ಲಿ ಮಾತ್ರ ದೊಡ್ಡ ಪ್ರಮಾಣದ್ದು ಇದೇ ಮೊದಲು ಬಿಳಿ ಬಣ್ಣದಲ್ಲಿ ಬರೆದು ಮೇಲೆ ತೆಳು ಕೆಂಪು ಬಣ್ಣದಿಂದ ಸವರಲಾಗಿದೆ. ನಿಂತ ಭಂಗಿಯಲ್ಲಿದ್ದು ಮುಖ ಮಂಗದಂತಿದೆ. ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಡಾಲುಗಳಿವೆ. ಸೊಂಟದಲ್ಲಿ ಬಾಲವಿದೆ. ಕೆಲವು ರೇಖಾ ಚಿತ್ರಗಳು ಇದೇ ರೀತಿಯಲ್ಲಿವೆ. ಆನೆಗುಂದಿ ವಾನರ ರಾಜ್ಯ ಕಿಷ್ಕಿಂಧ ಎಂಬ ನಂಬಿಕೆ ಹಿನ್ನೆಲೆಯಲ್ಲಿ ಈ ಮೇಲೆ ನೋಡಿದ ಕೆಂಪು ವರ್ಣದ ಉಬ್ಬು ಮೂತಿಯ ಮತ್ತು ಈ ಚಿತ್ರಗಳು ಗಮನಾರ್ಹವಾಗಿವೆ.

**ಕೊರೆದ ಕುಟ್ಟಿದ ಮನುಷ್ಯ ಚಿತ್ರ :** ಕೊಪ್ಪಳ ಹಂಪಿ ಪ್ರದೇಶದಲ್ಲಿ ಈ ಪ್ರಕಾರದ ಚಿತ್ರಗಳು ಬಹಳ ವಿರಳವಾಗಿವೆ. ಬಿಡಿ ವ್ಯಕ್ತಿಯ ಏಕೈಕ ಕುಟ್ಟು ಚಿತ್ರ ಮಲ್ಲಾಪುರದ ಎರಡನೇ ನೆಲೆಯಲ್ಲಿದೆ.

ಬಲಗೈಯಲ್ಲಿ ಎತ್ತರವಾದ ತ್ರಿಶೂಲವನ್ನು ಹಿಡಿದು ನಿಂತ ವ್ಯಕ್ತಿಯ ಚಿತ್ರವಿದು. ಎಡಗೈಯನ್ನು ಸೊಂಟದ ಮೇಲಿರಿಸಿದ್ದಾನೆ. ತಲೆ ದೇಹ ಸ್ವಲ್ಪ ದಪ್ಪವಿದೆ. ಆದರೆ ಕೈಕಾಲುಗಳು ತೆಳು ರೇಖೆಯವು. ತ್ರಿಶೂಲ ಮುಖದ ಎರಡು ಬದಿಯಲ್ಲಿ ಸೂರ್ಯಚಂದ್ರರ ಚಿತ್ರಗಳಿವೆ.

## ೫.೨. ಪ್ರಾಣಿ ಚಿತ್ರಗಳು

ಪ್ರಾಣಿ ಚಿತ್ರಗಳಲ್ಲಿ ವಿಶೇಷವಾಗಿ ಗೂಳಿ, ಎತ್ತು, ಕಾಡು ಕೋಣ ಮತ್ತು ಚಿಗರೆ ಜಿಂಕೆಗಳು ಆ ಕಾಲದ ಮಾನವನಿಗೆ ಬಲು ಪ್ರಿಯವಾದ ಚಿತ್ರ ವಸ್ತುಗಳಾಗಿವೆ. ಹಾಗಾಗಿ ಈ ಪ್ರಾಣಿಗಳು ಅಧಿಕಾರವಾಗಿ ಕಾಣಿಸಿಕೊಂಡಿವೆ. ಉಳಿದ ಪ್ರಾಣಿ ಪಕ್ಷಿಗಳು ಕ್ವಚಿತ್ತಾಗಿ ಇವೆ.

**ದನದ ಚಿತ್ರಗಳು :** ಗೂಳಿ, ಎತ್ತು, ಅಧಿಕವಾಗಿ ಆಕಳು ತೀರ ಗೌಣ ಸಂಖ್ಯೆಯಲ್ಲಿವೆ. ಎತ್ತು, ಗೂಳಿ ಮತ್ತು ಆಕಳುಗಳನ್ನು ಕೆಲವು ಸಲ ಶೈಲಿಯಲ್ಲಿ ಒಂದೇ ಇರುವುದರಿಂದ ಗುರುತಿಸುವುದು ಕಷ್ಟ. ಇಣೆ ಅಥವಾ ಶಿಶ್ನವಿರುವುದರಿಂದ ಅದು ಎತ್ತು ಆಗಿರಬಹುದು. ಇಲ್ಲವೇ ಗೂಳಿಯಾಗಿರಬಹುದು. ಅದೇ ರೀತಿ ಇಣೆ ಇಲ್ಲದ, ಕೆಚ್ಚಲು ಇಲ್ಲದ ದನದ ರೀತಿಯ ಚಿತ್ರಗಳಿವೆ. ಅವನ್ನು ಏನೆಂದು ಗುರುತಿಸುವುದು ಕಷ್ಟ. ಆದರೆ ಒಟ್ಟು ಚಿತ್ರಗಳ ಪರಿಶೀಲನೆಯಿಂದ ಬಲಿಷ್ಟವಾಗಿ ಗಾಂಭೀರ್ಯದಿಂದ ಕೂಡಿರುವ ಇಣೆ, ಕೋಡು (ಚಿಕ್ಕ, ದೊಡ್ಡ) ಕೆಲವು ಸಲ ಶಿಶ್ನ ಹೊಂದಿದವನ್ನು ಗೂಳಿಗಳೆಂದು ನಿರ್ಧರಿಸಬಹುದು. ಇಣೆ, ಶಿಶ್ನ ಇದ್ದು ತೀರ ಸರಳವಾಗಿ ಗಾಂಭೀರ್ಯತೆ ಇಲ್ಲದವನ್ನು ಎತ್ತುಗಳೆಂದು ಹಾಗೂ ಇಣೆ, ಶಿಶ್ನವಿಲ್ಲದ ಕೆಚ್ಚಲು ಇರುವ ಇಲ್ಲದಿರುವ ದನಗಳನ್ನು ಹಸುಗಳೆಂದು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಕೊಪ್ಪಳ ಹಂಪಿ ಪ್ರದೇಶದ ದನದ ವಿಶ್ಲೇಷಣೆಯನ್ನು ಈ ಮುಂದಿನಂತೆ ಗಮನಿಸಬಹುದು.

**ಗೂಳಿ ಚಿತ್ರಗಳು :** ಗೂಳಿ ಚಿತ್ರಗಳು ಮಧ್ಯಮ ಮತ್ತು ಚಿಕ್ಕ ಪ್ರಮಾಣದಲ್ಲಿವೆ. ಛಾಯಾರೂಪದವೇ ಅಧಿಕ. ಮುಖ್ಯವಾಗಿ ಗೂಳಿ ಚಿತ್ರಗಳನ್ನು ಹಿರೇಬೆಣಕಲ್ (೫,೭,೧೧) ಚಿಕ್ಕಬೆಣಕಲ್(೧,೨) ಅಂಜನಹಳ್ಳಿ(೧,೨) ಮಲ್ಲಾಪುರ (೨,೬,೯,೧೧) ಹಂಪಿ(೨) ಕೊಪ್ಪಳ(೮) ಮಲ್ಲಾಪುರ, ಬಸಾಪಟ್ಟಣ ಮತ್ತು ಕಮಲಾಪುರದ ಕೊರೆದ ಕುಟ್ಟಿದ ಚಿತ್ರ ನೆಲೆಗಳಲ್ಲಿ ಕಾಣಬಹುದು.

ಎತ್ತಿನ ಚಿತ್ರಗಳ ವೈವಿಧ್ಯತೆಯಂತೆ ಗೂಳಿಗಳ ಚಿತ್ರಗಳು ಇಲ್ಲ. ದೊಡ್ಡ ಅಥವಾ ಚಿಕ್ಕ ಆಕಾರದ ರೋಮನ್ ಲಿಪಿ U ಅಥವಾ V ಆಕಾರದ ಕೋಡುಗಳನ್ನು (ಮಲ್ಲಾಪುರ ೨) ಹೊಂದಿರುತ್ತದೆ. ಇಣೆ ಸ್ವಲ್ಪ ದೊಡ್ಡದಿರುತ್ತದೆ. ಶಿಶ್ನವನ್ನು ಸಣ್ಣ ರೇಖೆ (ಆನೆಗುಂದಿ-೮) ಇಲ್ಲವೇ ಚೂಪಾಗಿ ದ್ವಿರೇಖೆ

(ಎಮ್ಮಿಗುಡ್ಡ ೧, ಮಲ್ಲಾಪುರ)ಯಲ್ಲಿರುತ್ತವೆ. ಮುಂಡದಲ್ಲಿ ಮುಂಗಾಲು, ಹಿಂಗಾಲುಗಳು ತ್ರಿಕೋನಾಕಾರದಲ್ಲಿದ್ದು ಹೊಟ್ಟೆ ತೀರಾ ಸಣ್ಣದಾಗಿ (ಮಲ್ಲಾಪುರ ೨) ಇಲ್ಲವೇ ಸಹಜವಾಗಿ (ಚಿಕ್ಕ ರಾಂಪುರ) ಇರುತ್ತದೆ. ಮಲ್ಲಾಪುರದಲ್ಲಿ ಕೆಲವು ಗೂಳಿ ಚಿತ್ರಗಳು ವಿಶೇಷವಾಗಿದ್ದು ಗಮನಾರ್ಹವೆನಿಸುತ್ತವೆ.

**ಕೆಲವು ವಿಶಿಷ್ಟ ಗೂಳಿಯ ಚಿತ್ರಗಳು :** ಮಲ್ಲಾಪುರದ ಒಂಭತ್ತನೇ ಕಲ್ಲಾಸರೆಯಲ್ಲಿ ಒಂದು ಮಧ್ಯಮ ಪ್ರಮಾಣದ ಗೂಳಿಯ ಚಿತ್ರವಿದೆ. ಅದು ಛಾಯಾ ರೂಪದ ಚಿತ್ರ. ಅತ್ಯಂತ ನೈಜ ರಚನೆಯ ಚಿತ್ರವಿದಾಗಿದೆ. ಬಲಿಷ್ಠವಾದ ದೇಹ, ಮುಖ, ಕಿವಿ, ಕೋಡು, ಇಣಿ, ಕಾಲು ಪ್ರಮಾಣಬದ್ಧವಾಗಿವೆ. ಕತ್ತಿನ ದಪ್ಪ ತೊಡೆಗಳ ಬಲಿಷ್ಟತೆ ಗೂಳಿಯ ಗಾಂಭಿರ್ಯವನ್ನು ವ್ಯಕ್ತಗೊಳಿಸುತ್ತದೆ. ಇದರ ಹಿಂಭಾಗ ಮಾಸಿರುವುದು ದುರಾದೃಷ್ಟ. ಹಾಗಾಗಿ ಶಿಶ್ನ ಇತ್ತೊ ಇಲ್ಲವೋ ತಿಳಿಯುವುದಿಲ್ಲ. ಪ್ರಾಯಶ: ಇದು ಕರ್ನಾಟಕದಲ್ಲಿ ಇಲ್ಲಿಯವರೆಗೆ ಬೆಳಕಿಗೆ ಬಂದ ಗೂಳಿಗಳ ಚಿತ್ರಗಳಲ್ಲಿಯೇ ಶ್ರೇಷ್ಠ ಮಟ್ಟದ್ದೆಂದು ಗುರುತಿಸಬಹುದು.

ಎರಡನೆಯ ಕಲ್ಲಾಸರೆಯಲ್ಲಿ ಎರಡು ಗೂಳಿಗಳ ಚಿತ್ರಗಳು ಗಮನಾರ್ಹವಾಗಿವೆ. ದ್ವಿತ್ರಿಕೋನ ಮುಂಡ ಶೈಲಿಯದು ಒಂದು. ಇದಕ್ಕೆ ವಿಶಾಲವಾದ ಕೋಡು; ದೊಡ್ಡದಾದ ಬಾಲಗಳಿವೆ. ಇದು ಛಾಯಾರೂಪದ ಚಿತ್ರ. ಹೊಟ್ಟೆ ತೀರ ತೆಳುವಾಗಿದ್ದು, ಅಸಹಜವೆನಿಸುತ್ತದೆ. ಮತ್ತೊಂದು ಭಿನ್ನ ಶೈಲಿಯಲ್ಲಿದೆ. ಅದು ಕೂಡಾ ಛಾಯಾರೂಪದ್ದು. ಉದ್ದವಾದ ದೇಹ, ದೊಡ್ಡ ಮುಂದಕ್ಕೆ ಬಾಗಿದ ಕೋಡು, ದೊಡ್ಡ ಇಣಿ, ದೊಡ್ಡದಾದ ಬಾಲಗಳಿವೆ. ಬಾಲದಲ್ಲಿ ಕುಟ್ಟು ಪ್ರಮಾಣ ಮೀರಿ ದೊಡ್ಡದಿದೆ. ದೇಹಕ್ಕೆ ಹಿಂದೆ ಮುಂದೆ ಒಂದರಬದಿ ಒಂದರಂತೆ ನಾಲ್ಕು ಕಾಲುಗಳಿವೆ. ಇವೆರಡೂ ಚಿತ್ರಗಳಲ್ಲಿ ಗೂಳಿಯ ಗಾಂಭೀರ್ಯತೆ ವ್ಯಕ್ತವಾಗುತ್ತದೆ. ಇಂತಹದೇ ಗೂಳಿಯ ಚಿತ್ರ ಅಂಜನಹಳ್ಳಿ(೨) ಯಲ್ಲಿದೆ.

ಮಲ್ಲಾಪುರದ ಹನ್ನೆರಡನೇ ಗವಿಯಲ್ಲಿಯ ಗೂಳಿಯ ಸಣ್ಣ ಸಣ್ಣ ರೇಖಾಚಿತ್ರಗಳು ಗಮನಾರ್ಹವಾಗಿವೆ. ದಪ್ಪ ಮುಂಡ ಬಲಿಷ್ಟ ಕಾಲು ದೊಡ್ಡ ಇಣಿ ಗೂಳಿಗಳ ದಷ್ಟಪುಷ್ಟತೆಯನ್ನು ಸೂಚಿಸುತ್ತದೆ. ಅಷ್ಟೇನೂ ದೊಡ್ಡದಲ್ಲದ ಕೋಡುಗಳಿವೆ. ಕಾಲುಗಳು ದ್ವಿತ್ರಿಕೋನಾಕೃತಿಯ ಬದಲಿಗೆ ಅವುಗಳಲ್ಲೆ ಸ್ವಲ್ಪ ಭಿನ್ನವಾದ ವಿನ್ಯಾಸದಿಂದ ಕೂಡಿವೆ. ಅದರಿಂದ ಕಾಲಿನ ಬಲಿಷ್ಟತೆ ಸಹಜವಾಗಿ ವ್ಯಕ್ತವಾಗಿದೆ. ಕೊಪ್ಪಳದಲ್ಲಿ (೮) ಕಾದಾಡುತ್ತಿರುವ ಬಲಿಷ್ಟ ಗೂಳಿಗಳ ಬಿಳಿ ವರ್ಣದ ಚಿತ್ರವಿದೆ. ಹಂಪಿಯ ಮೊಸಳಯ್ಯನ ಗುಡ್ಡದ ಗೂಳಿಯ ಚಿತ್ರವೂ ಅಪರೂಪದ್ದು. ಗೆರೆಗಳಿಂದ ಛಾಯಾರೂಪದಲ್ಲಿ ಬಿಡಿಸಲಾಗಿದೆ. ಗೂಳಿಯ ಬಲಿಷ್ಟವಾಗಿ ಗಾಂಭಿರ್ಯದಿಂದ ನಿಂತ ಭಂಗಿ ವಿಶಿಷ್ಟವಾಗಿದೆ.

ಮಲ್ಲಾಪುರದ, ಕಮಲಾಪುರದ ಮತ್ತು ಬಸಾಪಟ್ಟಣದ ಕೊರೆದ/ಕುಟ್ಟಿದ ಗೂಳಿ ಚಿತ್ರಗಳು ವರ್ಣಚಿತ್ರಗಳಂತೆ ಇವೆ. ಆದರೆ ಇವು ಬಾಹ್ಯ ರೇಖೆಯವು. ಇವುಗಳಿಗೆ ಇಣಿ ದೊಡ್ಡದಿರುವುದೇ ವಿಶೇಷ ಅಂಶ.

**ಎತ್ತಿನ ಚಿತ್ರಗಳು :** ಗೂಳಿಗಳಿಗಿಂತ ಎತ್ತಿನ ಚಿತ್ರಗಳು ಹೆಚ್ಚು ವೈವಿಧ್ಯಮಯವಾಗಿವೆ. ಮತ್ತು ವ್ಯಾಪಕವಾಗಿವೆ. ಇವು ಬೃಹತ್ ಪ್ರಮಾಣದಿಂದ ಹಿಡಿದು ಚಿಕ್ಕ ಪ್ರಮಾಣದವರೆಗೆ ವಿವಿಧ ಅಳತೆ, ಮತ್ತು ಶೈಲಿಯಲ್ಲಿವೆ. ಪಾರ್ಶ್ವ ಬದಿಯ ಭಂಗಿಯಲ್ಲಿ ಛಾಯಾರೂಪದ ಅಥವಾ ರೇಖಾರೂಪದಲ್ಲಿರುತ್ತದೆ. ರಾಮದುರ್ಗದ ಎತ್ತಿನ ಚಿತ್ರಗಳು ಸುಮಾರು ಎರಡು ಮೀ. ಉದ್ದವಿದ್ದು ದೊಡ್ಡ ಪ್ರಮಾಣದಲ್ಲಿವೆ. ಎತ್ತಿನ ಚಿತ್ರಗಳು ಮೂರು ನಮೂನೆಯ ರಚನೆಯಲ್ಲಿವೆ.

ಎರಡು ತ್ರಿಕೋನಾಕಾರದ ಕಾಲುಗಳು, ಹೊಟ್ಟೆ ತೆಳ್ಳಗೆ ಅಥವಾ ದಪ್ಪಗಿರುವ ಎತ್ತುಗಳು ಒಂದು ರೀತಿಯವು. ಇವು ಛಾಯಾರೂಪದಲ್ಲಿರುತ್ತವೆ. ಇದು ಸಾಮಾನ್ಯ ರೂಪ ಇವುಗಳಲ್ಲಿಯೇ ಸಹಜವಾದ ಹೊಟ್ಟೆ, ಇಣಿ(ಚಿಕ್ಕರಾಂಪುರ) ಬಾಲದಲ್ಲಿ ಕುಚ್ಚು, ಶಿಶ್ನ (ಆನೆಗುಂದಿ-೧,೮)ಗಳಿರುತ್ತವೆ. ಕೆಲವಕ್ಕೆ ಕೋಡು ಮೂರು ಮಡಿಕೆಯಲ್ಲಿ (ವಜ್ರಾಕೃತಿಯಂತೆ) ಒಳಬಾಗಿರುತ್ತದೆ. (ಹೊಸಬಂಡಿ ಹರ್ಲಾಪುರ-೧) ತೆಂಬಾದಲ್ಲಿ ನಾಲ್ಕು ಸುಂದರವಾದ ಎತ್ತುಗಳಿದ್ದು ಅವುಗಳ ಕೊರಳಲ್ಲಿ ಗಂಟೆಯಾಕಾರ ವಸ್ತುವನ್ನು ಕಟ್ಟಲಾಗಿರುವುದು ಗಮನಾರ್ಹ.

ಎರಡನೆ ರೀತಿಯವು ಅಗೋಲಿ(೨) ಮಲ್ಲಾಪುರ (೫)ಗಳಲ್ಲಿವೆ. ಇದೇ ರೀತಿಯ ಕೊರೆದ ಚಿತ್ರ ಮಲ್ಲಾಪುರ ಬಂಡೆಗಳ ಚಿತ್ರಗಳ ಎರಡನೇ ನೆಲೆಯಲ್ಲಿದೆ. ಇವುಗಳು ಬಾಹ್ಯ ರೇಖೆಯಲ್ಲಿವೆ. ದೊಡ್ಡ ಆಯತಾಕಾರದ ದೇಹ, ಒಂದು (ಅಗೋಲಿ, ಮಲ್ಲಾಪುರ ಕೊರೆದ ಚಿತ್ರ) ಅಥವಾ ದ್ವಿರೇಖೆಯ (ಮಲ್ಲಾಪುರ) ನಾಲ್ಕು ಕಾಲುಗಳಿರುತ್ತವೆ. ಸರಿಯಾದ ಸ್ಥಾನದಲ್ಲಿ ಇಣಿ ಇರದೇ ಸ್ವಲ್ಪ ಹಿಂದಿರುತ್ತದೆ. ಕೋಡುಗಳು ನೇರವಾಗಿ ಇಲ್ಲವೇ ವಕ್ರವಾಗಿರುತ್ತವೆ. ಅಗೋಲಿಯ ಎತ್ತಿನ ಮುಂಡದಲ್ಲಿ ಚುಕ್ಕೆಗಳ ಅಲಂಕರಣಗಳಿರುವುದು ವಿಶೇಷ.

ಮೂರನೇ ರೀತಿಯ ಚಿತ್ರ ಮಲ್ಲಾಪುರದ ೭ನೇ ಗವಿಯಲ್ಲಿದೆ. ಇದು ಬಾಹ್ಯ ರೇಖೆಯದು. ಅಸಹಜವೆನಿಸುವಷ್ಟು ಉದ್ದವಾದ ದೇಹ ಮತ್ತು ಕತ್ತುಗಳಿವೆ. ಚಿಕ್ಕ ಕೋಡು, ಇಣಿ, ಬಾಲ, ಶಿಶ್ನಗಳಿವೆ. ಮೈಮೇಲೆ ಅಡ್ಡ ರೇಖೆಗಳಿವೆ. ನಾಲ್ಕನೆಯ ರೀತಿಯದು ಚಿಕ್ಕರಾಂಪುರದ ೪ನೇ ಗವಿಯಲ್ಲಿದೆ. ಉದ್ದವಾದ ತೆಳು ಮುಂಡ, ಚಿಕ್ಕ ಕೋಡು, ಇಣಿ, ಬಾಲದ ಜೊತೆಗೆ ದ್ವಿರೇಖೆಯಂತೆ ದಪ್ಪವಾದ ನಾಲ್ಕು ಕಾಲುಗಳಿರುವುದು ಇವುಗಳ ವಿಶೇಷ. ೫ನೇ ವಿಧದ ಚಿತ್ರಗಳನ್ನು ಕೊರೆದ

ಚಿತ್ರಗಳಲ್ಲಿ ಗುರುತಿಸಬಹುದು. ಕಮಲಾಪುರ ಮತ್ತು ಬಸಾಪಟ್ಟಣಗಳಲ್ಲಿವೆ. ಎರಡು ಕೋಡನ್ನು ಸಂಕೇತಿಸುವ ಒಂದು ದೊಡ್ಡ ಕೋಡು ಮತ್ತು ದೊಡ್ಡ ಇಣಿ ಅವುಗಳ ವಿಶೇಷ. ಈ ನಾಲ್ಕು ವಿಧಗಳಲ್ಲದೇ ಚಿಕ್ಕ ಚಿಕ್ಕ ಎತ್ತಿನ ಚಿತ್ರಗಳು ವಿನ್ಯಾಸದಲ್ಲಿ ಅಲ್ಪಸ್ವಲ್ಪ ಭಿನ್ನ ರೀತಿಯಲ್ಲಿ ಕಂಡು ಬರುತ್ತವೆ.

**ಕೆಲವು ವಿಶಿಷ್ಟ ಎತ್ತಿನ ಚಿತ್ರಗಳು**

**ದೊಡ್ಡ ಪ್ರಮಾಣದ ಎತ್ತುಗಳು :** ರಾಮದುರ್ಗದಲ್ಲಿ ಕೆಂಪು ವರ್ಣದ ಎರಡು ಎತ್ತಿನ ಚಿತ್ರಗಳಿವೆ. ಅವು ಸುಮಾರು ಮೂರು ಮೀ.ಉದ್ದವಿದ್ದು ಕೊಪ್ಪಳ ಹಂಪಿ ಪ್ರದೇಶದ ಎತ್ತಿನ ಚಿತ್ರಗಳಲ್ಲಿಯೇ ದೊಡ್ಡ ಪ್ರಮಾಣದವೆಂದು ಹೇಳಬಹುದು. ಇವು ಛಾಯಾರೂಪದವು. ಪಾರ್ಶ್ವಬದಿಯ ಚಿತ್ರಗಳಾಗಿದ್ದು ಒಂದರ ಹಿಂದೆ ಇನ್ನೊಂದು ನಿಂತಿದೆ. ಮುಂದಿನ ಎತ್ತಿನ ಪುಷ್ಠ ಭಾಗದಲ್ಲಿ ಹಿಂದಿನ ಎತ್ತಿನ ಮುಖವಿದೆ. ಹಾಗಾಗಿ ಅದು ಮಾತ್ರ ಪೂರ್ಣ ಪ್ರಮಾಣದಲ್ಲಿದೆ. ಚಿಕ್ಕರಾಂಪುರ (೨ನೇ ಕಲ್ಲಾಸರೆ)ದಲ್ಲಿಯೂ ದೊಡ್ಡ ಅಳತೆಯ ಎರಡು ಎತ್ತುಗಳು ಪರಸ್ಪರ ಎದುರುಬದುರಾಗಿ ನಿಂತಿವೆ. ಆದರೆ ಇವು ಬಹಳಷ್ಟು ಮಾಸಿವೆ.

**ಮೈಮೇಲೆ ರೇಖಾಕೃತಿಗಳಿರುವ ಎತ್ತಿನ ಚಿತ್ರಗಳು :** ಮಲ್ಲಾಪುರ (೬) ಸಂಗಾಪುರ(೨,೩,೪) ಹಿರೇಬೆಣಕಲ್ (೨) ಮತ್ತು ತೆಂಬಾ(೫)ಗಳಲ್ಲಿ ಮೈಮೇಲೆ ರೇಖೆಗಳನ್ನು ಹಾಕಿರುವ ಎತ್ತುಗಳ ಚಿತ್ರಗಳಿವೆ. ಇವುಗಳಲ್ಲಿ ಹಿರೇಬೆಣಕಲ್ಲಿನ ಎರಡನೇ ಕಲ್ಲಾಸರೆಯಲ್ಲಿ ಉಳಿದ ಸ್ತ್ರೀ, ಪುರುಷ ಚಿತ್ರಗಳ ಮೈಮೇಲಿರುವಂತೆ ಹಾಗೂ ಹಂಪಿ (೬) ಮಲ್ಲಾಪುರ (೩) ನಾರಾಯಣ ಪೇಟೆಯ ಮನುಷ್ಯ ಚಿತ್ರಗಳ (ಮಾಂತ್ರಿಕ ವಿಧಿಯ) ಮೈಮೇಲಿರುವಂತೆ ದ್ವಿವಕ್ರದ ರೇಖೆಗಳಿರುವ ಎತ್ತಿನ ಚಿತ್ರವಿದೆ. ತೆಂಬಾದ ಎತ್ತಿನ ಮೇಲೆ ಪರಸ್ಪರ ಛೇದಿಸುವ ವಕ್ರ ರೇಖೆಗಳು, ಮಲ್ಲಾಪುರದಲ್ಲಿ ಜೋಡಿ ಎತ್ತುಗಳಲ್ಲಿ ಒಂದರ ಮೇಲೆ ಸಮಾನಾಂತರ ಅಡ್ಡ ಗೆರೆಗಳು (ಲಂಬವಾಗಿ)(೩) ಮತ್ತು ಪರಸ್ಪರ ಛೇದಿಸಿದ ಗೆರೆಗಳು (೪)ಸಂಗಾಪುರದ ಎತ್ತಿನ ಚಿತ್ರಗಳ ಮೇಲೆ ಇವೆ.

**ಅಲಂಕೃತ ಎತ್ತಿನ ಚಿತ್ರ :** ಆನೆಗುಂದಿಯ ಎರಡನೆಯ ಕಲ್ಲಾಸರೆಯಲ್ಲಿ ಅಲಂಕೃತವಾದ ಎತ್ತಿನ ಚಿತ್ರ ಗಮನ ಸೆಳೆಯುತ್ತದೆ. ಅಲ್ಲಿಯ ಪ್ರಾಣಿಗಳ ಸಮೂಹದಲ್ಲಿ ಇದೇ ದೊಡ್ಡದು. ಅಲಂಕಾರದ ಪರಿಣಾಮವಾಗಿ ಮೇಲು ನೋಟಕ್ಕೆ ಕುದುರೆಯಂತೆ ಕಾಣುತ್ತದೆ. ಆದರೆ ಕೋಡು, ಇಣಿಗಳಿರುವುದರಿಂದ ಎತ್ತು ಎನ್ನುವುದು ಸ್ಪಷ್ಟ. ಪಾರ್ಶ್ವ ಭಂಗಿಯ ರೇಖಾಚಿತ್ರವಿದು. ಕೋಡು, ಸಣ್ಣ ಇಣಿ, ಬಾಲಗಳಿವೆ. ಶಿಶ್ನ ಬಿಡಿಸಲಾಗಿದೆ. ದೇಹ, ಕಾಲು, ಬೆನ್ನು, ಕತ್ತು ಮತ್ತು ಬಾಲ ವಿಶೇಷ ರೇಖೆಗಳಿಂದ

ಅಲಂಕೃತಗೊಂಡಿವೆ. ಇಣಿಯ ಹಿಂದೆ ಬೆನ್ನಿನ ಮೇಲೆ ಮತ್ತು ಕತ್ತಿನಲ್ಲಿ ಗಂಟಲ ಭಾಗದಲ್ಲಿ ತಲಾ ಮೂರು ರೇಖೆಗಳನ್ನು ಹಾಕಲಾಗಿದೆ. ಅದೇ ರೀತಿ ಬಾಲಕ್ಕೆ ಎರಡೂ ಬದಿಗೆ ವಕ್ರವಾಗಿ ರೇಖೆಗಳಿವೆ. ಇದರಿಂದ ಬಾಲ ಕುದುರೆಯ ಬಾಲದಂತೆ ತೋರುತ್ತದೆ. ಮೈಮೇಲೆ ನಡುವೆ, ಅಡ್ಡ ರೇಖೆಗಳನ್ನು ಹಾಕಿದ್ದು ಅದಕ್ಕೆ ಮೇಲೆ ಕೆಳಗೆ ವಕ್ರವಾಗಿ ರೇಖೆಗಳನ್ನು ಹಾಕಲಾಗಿದೆ. ತೊಡೆ ಕಾಲುಗಳ ಮೇಲೆ ವಜ್ರಾಕೃತಿಯಲ್ಲಿ ಹಾಕಿದ ರೇಖೆಗಳಿವೆ.

**ಎದುರು ಬದುರಾಗಿ ನಿಂತ ಎತ್ತುಗಳು :** ಎದುರು ಬದುರಾಗಿ ನಿಂತ ಎತ್ತುಗಳ ಚಿತ್ರಗಳು ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳೆರಡರಲ್ಲಿ ಇವೆ. ವರ್ಣಚಿತ್ರಗಳಲ್ಲಿ ಚಿಕ್ಕರಾಂಪುರದ ೨ನೇ ಕಲ್ಲಾಸರೆಯಲ್ಲಿ ಎದುರಾಗಿ ನಿಂತ ಜೊತೆ ಎತ್ತಿನ ಚಿತ್ರ ದೊಡ್ಡ ಪ್ರಮಾಣದಲ್ಲಿದೆ. ಅದೇ ರೀತಿ ಅಲ್ಲಿಯ ಒಂದನೇ ಗವಿಯಲ್ಲಿ ೧ ಜೋಡಿ, ಮತ್ತು ನಾಲ್ಕನೇ ಗವಿಯಲ್ಲಿ ೩ ಜೋಡಿ ಎತ್ತುಗಳಿವೆ. ಇವುಗಳಲ್ಲಿ ೧ನೇ ಗವಿಯ ಹಾಗೂ ೪ನೇ ಗವಿಯ ಒಂದು ಜೋಡಿಯ ನಡುವೆ ಮನುಷ್ಯನ ಚಿತ್ರಗಳಿವೆ. ಇವು ಛಾಯಾರೂಪದವು.

ಅಗೋಲಿ ಮತ್ತು ಮಲ್ಲಾಪುರದಲ್ಲಿ ಈ ರೀತಿಯ ಕುಟ್ಟಿದ ಚಿತ್ರಗಳಿವೆ. ಮಲ್ಲಾಪುರದಲ್ಲಿ ಎರಡು ಎತ್ತುಗಳು ಒಂದೇ ಕಡೆ ಇದ್ದು ಅವಕ್ಕೆ ವಿರುದ್ಧವಾಗಿ ಇನ್ನೊಂದು ಚಿತ್ರವಿದೆ. ಇವು ಬಾಹ್ಯ ರೂಪದವು.

ಪರಸ್ಪರ ಎದುರು ನಿಂತ ಎತ್ತಿನ ಚಿತ್ರಗಳಲ್ಲಿ ಸಂಗಾಪುರದ ೬ನೇ ಕಲ್ಲಾಸರೆಯಲ್ಲಿಯ ಚಿತ್ರಗಳು ಗಮನಾರ್ಹವಾಗಿವೆ. ಇಲ್ಲಿ ಎರಡು ಜೋಡಿಗಳಿವೆ. ಮುಂಡ ನೀಳವಾಗಿವೆ. ಕಾಲುಗಳು (ತ್ರಿಕೋನಾಕಾರ) ಕೂಡ ನೀಳವಾಗಿವೆ. ಕೋಡು U ಆಕಾರದಲ್ಲಿ ದೊಡ್ಡದಾಗಿದೆ. ಬಾಲ ಉದ್ದವಿದ್ದು ತುದಿಯಲ್ಲಿ ಮೂರು ಕವಲಿನ ಕುಚ್ಚನ್ನು ತೋರಿಸಲಾಗಿದೆ. ಇವುಗಳ ಕೆಲವು ವಿಶೇಷ ಅಂಶಗಳೆಂದರೆ ದೊಡ್ಡದಿರುವ ಕೆಳಗಿನ ಎರಡು ಎತ್ತುಗಳ ಕೋಡಿನ ತುದಿಯಲ್ಲಿ ಹೂವನ್ನು ಇರಿಸಿದಂತೆ ಅಲಂಕರಣೆ ಇರುವುದು. ಮೇಲಿನ ಜೋಡಿಯಲ್ಲಿ ಎಡಭಾಗದ ಎತ್ತಿನ ಇಣಿ ಪೂರ್ಣ ವರ್ಣದಲ್ಲಿದ್ದು, ಅದಕ್ಕೆ ಶಿಶ್ನವಿದೆ, ಕೆಳಗಿನ ಜೋಡಿಯಲ್ಲಿ ಬಲ ಎತ್ತಿಗೆ ಶಿಶ್ನ, ಎಡ ಎತ್ತಿನ ಇಣಿ ಪೂರ್ಣ ವರ್ಣದಲ್ಲಿದೆ. ಬಲ ಎತ್ತಿಗೆ ಹೊಟ್ಟೆಯ ಕೆಳಗೆ ಎರಡು ಕಾಲುಗಳ ನಡುವೆ ಮತ್ತೊಂದು ಗೆರೆ ಎಳೆಯಲಾಗಿದೆ. ಇವೆಲ್ಲಾ ರೇಖಾಚಿತ್ರಗಳು.

ಸಾಮಾನ್ಯವಾಗಿ ಜೋಡಿ ಎತ್ತುಗಳ ಲಕ್ಷಣವೆಂದರೆ ಪರಸ್ಪರ ಅವು ಒಂದೇ ಅಳತೆ, ಶೈಲಿಯಲ್ಲಿರುವುದು. ಆದರೆ ಕೊಪ್ಪಳ ಹಂಪಿ ಪ್ರದೇಶದ ಸಂಗಾಪುರದ ಜೋಡಿ ಎತ್ತಿನ ಚಿತ್ರಗಳು ಭಿನ್ನ ಪ್ರಮಾಣದಲ್ಲಿದ್ದುದು ಗಮನಾರ್ಹವೆನಿಸುತ್ತವೆ.

**ಮುದಿ ಎತ್ತುಗಳು :** ಕೊಪ್ಪಳದ ಮೂರನೇಯ ಕಲ್ಲಾಸರೆಯಲ್ಲಿ ಎತ್ತಿನ ಅಪರೂಪದ ರೇಖಾಚಿತ್ರಗಳಿವೆ. ಇಡೀ ಪ್ರದೇಶದಲ್ಲೇ ಭಿನ್ನವಾದ ರೇಖಾಕೃತಿಗಳಿವು. ಇಲ್ಲಿ ಐದು ಪ್ರಾಣಿಗಳಿವೆ. ಅವುಗಳಲ್ಲಿ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ನಿಂತಿರುವ ಎರಡು ಎತ್ತುಗಳು ಗಮನ ಸೆಳೆಯುತ್ತವೆ. ಸರಳ ರೇಖೆಯಲ್ಲಿಯೇ ಕೋಡು, ಮುಂಡ, ಬಾಲಮುಖ, ಕಾಲು, ಇಣಿಗಳನ್ನು ಒಳಗೊಂಡ ಎತ್ತುಗಳನ್ನು ಬಿಡಿಸಲಾಗಿದೆ. ಅವುಗಳ ಭಂಗಿ, ಶೈಲಿಯನ್ನು ಗಮನಿಸಿದಾಗ ಮುದಿ ಎತ್ತುಗಳಂತೆ ತೋರುತ್ತವೆ. ಜೋತುಬಿದ್ದ ಕೋಡುಗಳು, ಎಲುಬುಗಳು ಎದ್ದು ಕಾಣುತ್ತಿರುವ ಸಣಕಲಾದ ದೇಹ, ಒಳಸೇರಿದ ಹೊಟ್ಟೆ ಈ ಅಭಿಪ್ರಾಯಕ್ಕೆ ಸಾಕ್ಷಿಯಾಗಿವೆ. ಇದೊಂದು ವಿಶೇಷ ಚಿತ್ರ.

**ಹಸುವಿನ ಚಿತ್ರಗಳು :** ಇಣೆಯಿರುವ ಮತ್ತು ಶಿಶ್ನ ಇರುವ, ಇಲ್ಲದಿರುವ ಚಿತ್ರಗಳನ್ನು ಎತ್ತುಗಳೆಂದು ಗುರುತಿಸಿದಂತೆ ಹಸುವಿನ ಚಿತ್ರಗಳನ್ನು ಗುರುತಿಸುವುದು ಕಷ್ಟ. ಕೆಚ್ಚಲು ಇದ್ದರೆ ಈ ಸಮಸ್ಯೆ ಇರಲಾರದು. ಆದರೆ ಕೆಲವು ಚಿತ್ರಗಳಿಗೆ ಇಣೆಯು ಇರುವುದಿಲ್ಲ. (ಉದಾ:ಆನೆಗುಂದಿ, ಅಗೋಲಿ) ಕೋಡುಗಳು ಇರುತ್ತವೆ. ಕೆಲವು ದನಗಳ ಗುಂಪಿನಲ್ಲಿ ಇಣಿ ಮತ್ತು ಶಿಶ್ನವಿರುವ ಎತ್ತುಗಳ ಜೊತೆಯಲ್ಲಿ ಈ ರೀತಿಯ ದನಗಳಿರುತ್ತವೆ. ಹಾಗಾಗಿ ಇಂಥವನು ಆಕಳುಗಳ ಚಿತ್ರವೆಂದು ಗುರುತಿಸಬಹುದು. ಇವು ಶೈಲಿ ಭಂಗಿಯಲ್ಲಿ ಎತ್ತುಗಳಂತೆ ಇರುತ್ತವೆ. ಹಿರೇಬೆನಕಲ್ಲಿನ ೧ನೇ ಕಲ್ಲಾಸರೆಯಲ್ಲಿ ಎತ್ತುಗಳ ಜೊತೆಗೆ ಮೂರು ರೇಖಾರೀತಿಯ ದನಗಳ ಚಿತ್ರಗಳಿವೆ. ಅವುಗಳ ಕೋಡು ಅಷ್ಟು ದೊಡ್ಡದಿಲ್ಲ. ಇವುಗಳನ್ನು ಖಂಡಿತವಾಗಿ ಹಸುಗಳೆಂದು ಹೇಳಬಹುದು. ಅದೇ ರೀತಿ ಆನೆಗುಂದಿಯ ೧ ಮತ್ತು ೨ ರಲ್ಲಿ ಚಿಕ್ಕ ರಾಂಪುರದ ೧ನೇ ಗವಿ, ಅಗೋಲಿಯ ೨ನೇ ಕಲ್ಲಾಸರೆಗಳಲ್ಲಿ ಈ ರೀತಿಯ ಹಸುವಿನ ಚಿತ್ರಗಳಿವೆ. ಇದೇ ಆಕಾರದಲ್ಲಿದ್ದು ದೊಡ್ಡ ದೊಡ್ಡ ಕೋಡುಗಳಿದ್ದಲ್ಲಿ ಅವನ್ನು ಎಮ್ಮೆಗಳೆಂದು ಗುರುತಿಸಬಹುದು.

ಹಿರೇಬೆಣಕಲ್ (೬ನೇ ಗವಿ), ಆನೆಗುಂದಿ (ಕಲ್ಲಾಸರೆ ೨) ಮತ್ತು ಕೊಪ್ಪಳ (೧ನೇ ಗವಿ)ಗಳಲ್ಲಿ ಕೆಚ್ಚಲುಳ್ಳ ಹಸುವಿನ ಚಿತ್ರಗಳಿವೆ. ಆನೆಗುಂದಿಯದು ಚಿಕ್ಕ ಆಕಾರದಲ್ಲಿದ್ದು ಮುಖ ಮೇಲೆಕ್ಕೆತ್ತಿದೆ. ಕೆಚ್ಚಲನ್ನು ಅದಕ್ಕೆ ಮೊಲೆ ತೊಟ್ಟುಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಇದು ಆಡಿನ ಚಿತ್ರವೇ ಎಂಬ ಅನುಮಾನ ಉಂಟಾಗುತ್ತದೆ. ಹಿರೆಬೆಣಕಲ್ಲಿನ ಆಕಳು ಸ್ಪಷ್ಟವಿದೆ. ಆದರೆ ಕೊಪ್ಪಳದ ಚಿತ್ರ ವಿಚಿತ್ರವಾಗಿದೆ. ಕೆಚ್ಚಲಿನಲ್ಲಿ ಒಂದೇ ತೊಟ್ಟಿದೆ ಹಾಗೂ ಇದಕ್ಕೆ ಎತ್ತರವಾದ ಇಣೆ ಇರುವುದು ಅಸಹಜವೆನಿಸುತ್ತದೆ.

**ಕಾಡು ಕೋಣ, ಎಮ್ಮೆಯ ಚಿತ್ರಗಳು:** ಕೋಣದ ಚಿತ್ರಗಳು ಮಲ್ಲಾಪುರ (೩) ಬಂಡಿಹರ್ಲಾಪುರ(೨,೩) ಹಂಪಿ (೨) ಕೊಪ್ಪಳ(೧) ಚಿಕ್ಕಬೆಣಕಲ್ (೩)ಗಳಲ್ಲಿ ಎಮ್ಮೆ ಚಿತ್ರಗಳು ಎಮ್ಮೆಗುಡ್ಡ (೧) ಹಿರೆಬೆಣಕಲ್ (೬) ಸಂಗಾಪುರ (೬)ಗಳಲ್ಲಿ ಇವೆ.

ಬಂಡಿ ಹರ್ಲಾಪುರ (೨ನೇ ಚಿತ್ರ) ಹಂಪಿ, ಕೊಪ್ಪಳಗಳ ಕೋಣಗಳ ಚಿತ್ರಗಳು ಚಿಕ್ಕ ಅಳತೆಯವು. ಉಳಿದವು ಬೃಹತ್ ಪ್ರಮಾಣದಲ್ಲಿವೆ. ವಿಶೇಷವಾಗಿ ಮಲ್ಲಾಪುರ ಚಿಕ್ಕಬೆಣಕಲ್ ಮತ್ತು ಬಂಡಿಹರ್ಲಾಪುರದಲ್ಲಿ ಪೂರ್ಣ ಪ್ರಮಾಣದ ಬೃಹತ್ ಕೋಣಗಳ ಚಿತ್ರಗಳು ಇದ್ದು, ಗಮನಾರ್ಹವೆನಿಸುತ್ತವೆ. ಮಲ್ಲಾಪುರದಲ್ಲಿ ೩,೧೦ ಮೀ ಎತ್ತರ ಮತ್ತು ೨.೧೫ಮೀ ಉದ್ದ ಪ್ರಮಾಣದಲ್ಲಿದೆ. ಬಲಿಷ್ಟವಾದ ದೇಹ, ಶಿಶ್ನ ಚಿಕ್ಕ ಚೂಪಾದ ಕಿರಿದಾದ ಕೋಡುಗಳಿವೆ. ಮೈಮೇಲೆ ರೇಖಾಕೃತಿಗಳಿವೆ.

ಚಿಕ್ಕ ಬೆಣಕಲ್ (೨ ಮೀ ಉದ್ದ ಮತ್ತು ೨ ಮೀ ಎತ್ತರ) ಮತ್ತು ಬಂಡಿ ಹರ್ಲಾಪುರಗಳ (೨,೮೦ ಮೀ ಉದ್ದ ಮತ್ತು ೧.೮೯ ಎತ್ತರ) ಕೋಣಗಳು ಗಮನಾರ್ಹ ಪ್ರಮಾಣದಲ್ಲಿವೆ. ಇವು ಅತ್ಯಂತ ಬಲಿಷ್ಟವಾದ ಒಳಬಾಗಿದ ಕಿರಿದಾದ ದಪ್ಪ ಕೋಡುಗಳು, ಬಲಿಷ್ಟ ದೇಹ, ೨ ಕಿವಿಗಳು, ಬಾಲ ಶಿಶ್ನಗಳನ್ನು ಹೊಂದಿದೆ. ಬಂಡಿ ಹರ್ಲಾಪುರದ ೧ನೇ ಕಲ್ಲಾಸರೆಯಲ್ಲಿ ಮತ್ತೊಂದು ಬಲಿಷ್ಟ ಕೋಣದ ಮುಖ ಭಾಗದ ಚಿತ್ರವಿದೆ. ಈ ಕೋಣಗಳು ಗೂಳಿಯಂತೆ ದಷ್ಟಪುಷ್ಟವಾಗಿದ್ದು, ಗಾಂಭೀರ್ಯಕ್ಕೆ ಸಂಕೇತಗಳಾಗಿವೆ. ಈ ಚಿತ್ರಗಳು ಪ್ರಾಗಿತಿಹಾಸ ಕಾಲದ ಕಲೆಯ ಕೌಶಲ್ಯಕ್ಕೆ ಸಾಕ್ಷಿಯಾಗಿವೆ.

ಹಿರೇಬೆಣಕಲ್, ಸಂಗಾಪುರಗಳಲ್ಲಿಯ ಎಮ್ಮೆ ಚಿತ್ರಗಳು ಚಿತ್ರ ಸಮೂಹದಲ್ಲಿದ್ದು ಬೃಹತ್ ಕೋಡುಗಳನ್ನು ಹೊಂದಿವೆ. ಇವುಗಳಲ್ಲಿ ಎಮ್ಮೆಗುಡ್ಡದ ಎಮ್ಮೆಯದು ಉತ್ತಮ ಚಿತ್ರವಾಗಿದೆ.

**ಜಿಂಕೆ ಚಿಗರೆಯ ಚಿತ್ರಗಳು :** ಗೂಳಿ, ಕೋಣ, ಎತ್ತಿನಂತೆ ಜಿಂಕೆ ಕೂಡ ಆದಿ ಮಾನವನಿಗೆ ಪ್ರಿಯವಾದ ವಸ್ತು, ಈ ಮುಗ್ಧ ಪ್ರಾಣಿ ಅವನ ಕಲೆಯಲ್ಲಿ ಅಪೂರ್ವ ಸ್ಥಾನ ಪಡೆದಿದೆ. ಬಿಡಿ ಬಿಡಿಯಾಗಿ, ಗುಂಪಾಗಿ, ಸಾಲು ಸಾಲಾಗಿ ಜಿಂಕೆಗಳನ್ನು ಚಿತ್ರಿಸಿದ್ದಾನೆ. ಜಿಂಕೆ ಚಿಗರೆಯ ಚಿತ್ರಗಳು ಹಿರೇಬೆಣಕಲ್ (೧,೪,೫,೬,೧೧,೧೩,೧೪)ಎಮ್ಮಿಗುಡ್ಡ (೧) ಗೂಗಿಬಂಡಿ, ಅಂಜನಹಳ್ಳಿ (೧), ಆನೆಗುಂದಿ (೨,೬) ಮಲ್ಲಾಪುರ (೩,೬,೮) ಸಂಗಾಪುರ (೨), ಕೊಪ್ಪಳ (೧.೨) ನಾರಾಯಣಪೇಟೆ (೪), ಹೊಸಬಂಡಿಹರ್ಲಾಪುರ (೨), ಹಂಪಿ (೨,೪) ಮತ್ತು ಚಿಕ್ಕ ರಾಂಪುರ (೧) ಗಳಲ್ಲಿ ಇವೆ. ಇವುಗಳಲ್ಲಿ ಕವಲಿನ ಕೋಡುಳ್ಳ ಜಿಂಕೆಗಳು ಕೊಪ್ಪಳದಲ್ಲಿ ಮತ್ತು ಅವುಗಳ ಗುಂಪುಗಳು ಆನೆಗುಂದಿ ಮತ್ತು ಹಿರೆಬೆಣಕಲ್ಲಿನ ೬ನೇ ಗವಿಯಲ್ಲಿವೆ. ಬಂಡಿ ಹರ್ಲಾಪುರದಲ್ಲಿ ಕವಲಿನ ಕೋಡಿನ ಜಿಂಕೆಯ ಸಾಲು ಮನಮೋಹಕವಾಗಿದೆ.

ಪ್ರಮಾಣಬದ್ಧ ದೇಹ, ದೊಡ್ಡ ಕವಲಿನ ಕೊಂಬುಗಳಿಂದ ಕೂಡಿದ್ದೂ, ಉತ್ತಮ ಚಿತ್ರಗಳಾಗಿವೆ. ಆನೆಗುಂದಿಯಲ್ಲಿ ಒಂದು ಗುಂಪಿನ ಜಿಂಕೆಗಳ ಮೈಮೇಲೆ ಅಡ್ಡಗೆರೆ ಹಾಕಿ ಅದರ ಎರಡು ಬದಿಯಿಂದ ವಕ್ರವಾಗಿ ರೇಖೆ ಎಳೆಯಲಾಗಿದೆ. ಕೊಂಬುಗಳ ಕವಲುಗಳನ್ನು ಕೂಡ ಅದೇ ರೀತಿಯಲ್ಲಿ ತೋರಿಸಲಾಗಿದೆ. ಸಂಗಾಪುರ ಮತ್ತು ಮಲ್ಲಾಪುರ (೬)ಗಳ ಜಿಂಕೆಗಳ ಮೈಮೇಲೆ ವಕ್ರವಾಗಿ ರೇಖೆಗಳನ್ನು ಹಾಕಲಾಗಿದೆ. ಇವೆಲ್ಲಾ ಅಲಂಕಾರ ದೃಷ್ಟಿಯಿಂದ ಮಾಡಿರಬಹುದೆನಿಸುತ್ತದೆ. ಮಲ್ಲಾಪುರದ ಮೂರನೇ ಗವಿಯಲ್ಲಿ ಜಿಂಕೆಯ ಮುಖ, ಎತ್ತು ಅರ್ಧಮುಂಡದ ದೊಡ್ಡ ಚಿತ್ರವಿದೆ. ಇದೇ ಈ ಪ್ರದೇಶದ ಜಿಂಕೆಯ ದೊಡ್ಡ ಚಿತ್ರವೆನ್ನಬಹುದು. ಇದರ ಮೈಮೇಲೆ ಮೂರು ಸಾಲಿನಲ್ಲಿ ಪಟ್ಟೆಗಳಿವೆ.

ಹಿರೇಬೆಣಕಲ್ಲಿನ ೫ ಮತ್ತು ಹಂಪಿಯಲ್ಲಿ ಉದ್ದ ಕೊಂಬಿನ ಜಿಂಕೆಗಳಿವೆ. ಹಿರೇಬೆಣಕಲ್ಲಿನ ೧೧ ಮತ್ತು ೧೨ನೇ ಗವಿಗಳಲ್ಲಿ ಜಿಂಕೆ ಸಾಲುಗಳ ಅಪೂರ್ವ ಚಿತ್ರಗಳಿವೆ ೧೧ನೇ ಗವಿಯಲ್ಲಿಯ ಸಾಲು ಜಿಂಕೆಗಳು ತೀರಾ ಗಮನಾರ್ಹವಾದದ್ದು. ಮರ ಇಲ್ಲವೆ ಚರ್ಮದಲ್ಲಿ ಪ್ರಾಣಿಯ ಚಿತ್ರವನ್ನು ಕತ್ತರಿಸಿಕೊಂಡು ಅದನ್ನು ಬಂಡೆಯ ಮೇಲಿಟ್ಟು ಒಂದು ಪಕ್ಕದಲ್ಲೊಂದರಂತೆ ಸಾಲು ಚಿತ್ರಗಳನ್ನು ತೆಗೆದಂತಿದೆ. ಕ್ರಮವಾಗಿ ಸಾಲಿನ ಎಲ್ಲಾ ಜಿಂಕೆಗಳನ್ನು ಪ್ರಮಾಣದಲ್ಲಿಯೂ, ಆಕಾರದಲ್ಲಿಯೂ, ಅವುಗಳ ಭಂಗಿಯಲ್ಲಿಯೂ ಏಕಪ್ರಕಾರವಾಗಿ ಬಿಡಿಸಿರುವುದು ವಿಶೇಷವೇ ಸರಿ. ಶೈಲಿಯಲ್ಲಿ ದೇಹ ಉದ್ದ ಹಾಗೂ ತೆಳ್ಳಗಿದ್ದು, ಕಾಲುಗಳು ಕಡ್ಡಿಯಂತೆ, ಕೋಡುಗಳು ಕವಲೊಡೆದ ರೆಂಬೆಯಂತಿವೆ. ಬಾಲ ಸಣ್ಣದಿದ್ದು ಮೇಲೆಕ್ಕೆತ್ತಿದೆ. ಕುತ್ತಿಗೆ ನೀಳ, ಸಣ್ಣ ಹಾಗೂ ನೆಟ್ಟಗಿದ್ದು ತಲೆ ಎತ್ತಿ ನೋಡುತ್ತಿರುವ ಹಾಗಿವೆ. ಸಾಮಾನ್ಯವಾಗಿ ಎಲ್ಲಾ ಜಿಂಕೆಗಳು ಇದೇ ಶೈಲಿಯಲ್ಲಿರುತ್ತವೆ.

ನಾರಾಯಣಪೇಟೆಯ ೪ನೇ ಕಲ್ಲಾಸರೆಯಲ್ಲಿ ೧೭ ಪ್ರಾಣಿಗಳ ಚಿತ್ರಗಳಿವೆ. ಇವು ಜಿಂಕೆಗಳೂ ಅಥವಾ ಪಶುಗಳೋ ಸ್ಪಷ್ಟವಾಗುವುದಿಲ್ಲ. ಬಾಲ ಹಸುವಿನಂತಿವೆ. ಅದರ ಮೈಮೇಲೆ ಅಡ್ಡರೇಖೆ ಇದ್ದು ಪ್ರಾಯಶ: ಪಟ್ಟೆಯಾಗಿರಬೇಕು. ಹಾಗಾಗಿ ಇವು ಜಿಂಕೆಗಳಾಗಿರಬಹುದು. ಚಿಕ್ಕರಾಂಪುರದಲ್ಲಿ (೧) ಸಾಲಾಗಿ ನಿಂತ ಜಿಂಕೆಗಳಿವೆ.

**ಕಡವೆ :** ವಿರಳವಾಗಿ ಈ ಪ್ರಾಣಿಗಳ ಚಿತ್ರಗಳು ಅಲ್ಲಲ್ಲಿ ಕಂಡುಬರುತ್ತವೆ. ಇವುಗಳನ್ನು ನಿರ್ಧಿಷ್ಟವಾಗಿ ಗುರುತಿಸುವುದು ಕಷ್ಟ. ಮಲ್ಲಾಪುರದ ೩ನೇ ಗವಿಯಲ್ಲಿ ಒಂದು ಪ್ರಾಣಿಯ ಚಿತ್ರವಿದೆ. ಅದಕ್ಕೆ ಮುಖಭಾಗವಿಲ್ಲ. ರೇಖಾಚಿತ್ರವಿದು ೧.೨೪ಮೀ ಉದ್ದವಿದೆ. ಬೆನ್ನ ಮೇಲೆ ವಕ್ರವಾಗಿ ಕೂದಲನ್ನು ತೋರಿಸಲಾಗಿದೆ. ತುಂಡು ಬಾಲವಿರುತ್ತದೆ. ಇದೇ ರೀತಿ ಅರ್ದ ದೇಹ ಚಿತ್ರ ಹಂಪಿಯ ೫ನೇ ಕಲ್ಲಾಸರೆಯಲ್ಲಿದೆ. ಇಲ್ಲಿ ಉದ್ದ ಕತ್ತು, ನಿಮಿರಿ ನಿಂತ ೨ ಕಿವಿಗಳ ಪ್ರಾಣಿಯ ಮುಖ ಚಿತ್ರಗಳಿವೆ.

ಇಂತಹದೇ ಅಲ್ಲಿಯ ೭ನೇ ಕಲ್ಲಾಸರೆಯಲ್ಲೂ ಇದೆ. ಈ ಮುಖಗಳು ಕಡವೆ ತರಹ ಇವೆ. ಅರ್ಧ ದೇಹದ ಪ್ರಾಣಿಗೆ ಇವೆ ಮುಖಗಳಿರಬೇಕೆನಿಸುತ್ತದೆ. ಹಾಗಾದಲ್ಲಿ ಇವು ಕಡವೆಗಳೆನ್ನಬಹುದು. ಕಮಲಾಪುರದ ಒಂಟಿ ಗುಂಡಿನಲ್ಲಿ ಇದೇ ರೀತಿ ದೇಹದ ಒಂದು ಪ್ರಾಣಿಯ ರೇಖಾಚಿತ್ರವಿದೆ. ಗಡ್ಡಿಯಲ್ಲಿ (೩ನೇ ಕಲ್ಲಾಸರೆ) ಇದರಂತೆ ಪ್ರಾಣಿಯ ಮುಖಭಾಗದ ಚಿತ್ರವಿದೆ. ಇವುಗಳಿಗೆ ಚಿಕ್ಕ ಕೋಡುಗಳಿವೆ.

**ಕುದುರೆ :** ಕುದುರೆ ಚಿತ್ರಗಳು ಹಿರೇಬೆಣಕಲ್ (೩) ಗಡ್ಡಿ (೨) ಮಲ್ಲಾಪುರ (೨) ಕೊಪ್ಪಳ (೧) ಮತ್ತು ಹೊಸ ಬಂಡಿಹರ್ಲಾಪುರಗಳಲ್ಲಿವೆ. ಇವೆಲ್ಲ ಬಿಡಿ ಚಿತ್ರಗಳು. ಹಿರೆಬೆಣಕಲ್ಲಿನಲ್ಲಿ ೨ ಕುದುರೆ ಚಿತ್ರಗಳಿವೆ. ಗಡ್ಡಿಯಲ್ಲಿ ಮುಖ ಬಗ್ಗಿಸಿ ನಿಂತ ಕುದುರೆಯ ಚಿತ್ರವಿದ್ದು, ಮೈಮೇಲೆ ಅನೇಕ ಕ್ರಮಬದ್ಧ ರೇಖೆಗಳಿವೆ. ಇದೇ ರೀತಿ ರೇಖೆಗಳಿರುವ ಕುದುರೆ ಹೊಸ ಬಂಡಿಹರ್ಲಾಪುರದಲ್ಲಿದೆ. ಮಲ್ಲಾಪುರದ ಕುದುರೆ ಚಿತ್ರ ಗಮನಾರ್ಹವಾಗಿದೆ. ಎತ್ತರವಾದ ಕಾಲುಗಳು, ಎತ್ತರವಾದ ಕತ್ತಿದೆ. ತಲೆಯ ಮೇಲೆ ಸಾಲಾಗಿ ತುರಾಯಿ ರೀತಿ ಕೂದಲು ಅಥವಾ ಅಲಂಕರಣೆ ಇದೆ. ಕೊಪ್ಪಳದ ಕುದುರೆ ಚಿತ್ರದ ಮುಖ ಪಕ್ಷಿಯಂತೆ ಮೂತಿ ಚೂಪಾಗಿ ವಿಶೇಷವೆನಿಸುತ್ತದೆ. ಕುದುರೆಗಳ ಪ್ರಮಾಣಬದ್ಧ ಆಕೃತಿಗಳು ಸವಾರರನ್ನೊಳಗೊಂಡ ಚಿತ್ರಗಳಲ್ಲಿವೆ. ಇಂಥವು ಅಧಿಕ ಸಂಖ್ಯೆಯಲ್ಲಿ ಹಿರೇಬೆಣಕಲ್, ಚಿಕ್ಕರಾಂಪುರ, ಆನೆಗುಂದಿಗಳಲ್ಲಿ ಕಂಡುಬರುತ್ತವೆ.

**ಹುಲಿ, ಚಿರತೆ :** ಹುಲಿ ಚಿರತೆಯಂತಹ ಕ್ರೂರ ಪ್ರಾಣಿಗಳು ಆದಿ ಮಾನವನ ಕಲೆಯ ವಿಷಯವಾಗಿದೆ. ಹಿರೇಬೆಣಕಲ್ಲಿನಲ್ಲಿ ೭ನೇ ಗವಿಯಲ್ಲಿ ಅಶ್ವಸವಾರನೊಬ್ಬ ಹುಲಿಯೆಡೆಗೆ ಬಾಣ ಹೂಡಿರುವ ದೃಶ್ಯ ಗಮನಾರ್ಹ. ಇಲ್ಲಿಯೇ (೮) ಮತ್ತು (೯)ನೇ ಗವಿಗಳಲ್ಲಿ ಮೂರು ಹುಲಿ ಚಿತ್ರಗಳಿವೆ. ಇವುಗಳ ಮೇಲೆ ಸಮನಾಂತರ ಗೆರೆಹಾಕಿ ಪಟ್ಟೆಗಳನ್ನು ತೋರಿಸಲಾಗಿದೆ. ಹಂಪಿಯ ಎರಡನೆಯ ಕಲ್ಲಾಸರೆಯ ಹುಲಿಯ ಚಿತ್ರ ರಚನೆ, ಶೈಲಿ, ಭಂಗಿಯಿಂದ ಉತ್ತಮ ಚಿತ್ರವಾಗಿದೆ. ಬಾಲ ಎತ್ತಿಕೊಂಡು ಹೊರಟಿರುವ ಭಂಗಿ ಅತ್ಯಂತ ಸಹಜವಾಗಿದೆ. ಮೈಮೇಲೆ ವಕ್ರ ನೇರ ಪಟ್ಟೆಗಳಿವೆ. ಕೊಪ್ಪಳದಲ್ಲಿ ಮೇಲೆಕ್ಕೆ ನೆಗೆದಿರುವ ಹುಲಿಯ ಚಿತ್ರವಿದೆ. ಇದರ ಮೈಮೇಲೆ ಬಾಗಿದ ವಕ್ರ ರೇಖೆಗಳಿರುವುದು ವಿಶೇಷ. ವೆಂಕಟಾಪುರದಲ್ಲೂ ಹುಲಿ ಚಿತ್ರವಿದೆ. ಈಚಿನ ಹುಲಿ ಚಿತ್ರಗಳಿಗೆ ಬಂಡಿ ಹರ್ಲಾಪುರದವು ಒಳ್ಳೆಯ ಮಾದರಿಗಳಾಗಿವೆ. ರಾಂಪುರದ ಎರಡನೆಯ ಗವಿಯಲ್ಲಿ ಚಿರತೆಯ ರುಂಡ ಭಾಗದ ಚಿತ್ರವಿದೆ. ಹಿರೇಬೆನಕಲ್ಲಿನ ೧ನೇ ಕಲ್ಲಾಸರೆಯಲ್ಲಿ ಮತ್ತು ಚಿಕ್ಕರಾಂಪುರದ ೧ನೇ ಗವಿಯಲ್ಲಿ ಚಿರತೆಯ ಚಿಕ್ಕ ಚಿತ್ರಗಳಿವೆ.

**ಆನೆ :** ಆನೆ ಚಿತ್ರಗಳು ಹಿರೇಬೆಣಕಲ್ (೩), ಅಂಜನಹಳ್ಳಿ(೨), ಆನೆಗುಂದಿ (೭,೮) ಮತ್ತು ಸಂಗಾಪುರ (೭,೮ ಮತ್ತು ೧೦) ಗಳಲ್ಲಿವೆ. ಆನೆಗುಂದಿಯಲ್ಲಿಯ ಆನೆ ಚಿತ್ರಗಳು ಒಂದು ರೀತಿಯಲ್ಲಿದ್ದರೆ, ಸಂಗಾಪುರದ ಚಿತ್ರಗಳು ಮತ್ತೊಂದು ರೀತಿಯಲ್ಲಿವೆ. ಮೊದಲಿನವು ಉದ್ದವಾದ ದೇಹವನ್ನು ಹೊಂದಿವೆ. ದಪ್ಪವಾದ ನಾಲ್ಕು ಕಾಲುಗಳು ಸಾಲಾಗಿವೆ. ದೇಹ, ಕಾಲುಗಳ ಪ್ರಮಾಣ ಬದ್ಧತೆ ಇಲ್ಲ. ಇವನ್ನು ಕಡುಕೆಂಪು ವರ್ಣದಲ್ಲಿ ಬಿಡಿಸಲಾಗಿದೆ. ಸಂಗಾಪುರದವು ಬೆನ್ನು ಮೇಲಕ್ಕೆ ಎತ್ತರಿಸಿ ಸ್ವಲ್ಪ ನೈಜ ರೀತಿಯಲ್ಲಿವೆ. ಸೊಂಡಿಲು ಸಪೂರವೆನಿಸುತ್ತದೆ. ಇವು ತಿಳಿ ಕೆಂಪು ವರ್ಣದವು. ಆನೆಗುಂದಿಯ ಕಲ್ಲಾಸರೆ ಮತ್ತು ಸಂಗಾಪುರದ (೮)ನೇ ಕಲ್ಲಾಸರೆಯ ಆನೆಗಳ ಮೇಲೆ ಸವಾರರಿದ್ದಾರೆ.

**ಹಂದಿ :** ಮಲ್ಲಾಪುರದ ೩ನೆಯ ಗವಿಯಲ್ಲಿ ಎರಡು ಹಂದಿಯ ಚಿತ್ರಗಳಿವೆ. ದೊಡ್ಡದು (೧.೩೯ ಮೀ ಎತ್ತರ, ೨.೦೬ ಮೀ ಉದ್ದ). ಪಾರ್ಶ್ವ ಭಂಗಿಯಲ್ಲಿ ನಿಂತ ಹಂದಿಯದು ರೇಖಾಚಿತ್ರವಿದು. ಮುಖ, ಕಿವಿ, ದೇಹ, ಕಾಲು ಪ್ರಮಾಣಬದ್ಧವಾಗಿವೆ. ಕಣ್ಣನ್ನು ಗುರುತಿಸಿಲ್ಲ. ಮೈಮೇಲೆ ರೇಖಾಕೃತಿಗಳಿವೆ. ಇದು ಸಹಜವಾದ ರೇಖಾಚಿತ್ರವಾಗಿದೆ. ಇನ್ನೊಂದು ಇದರಂತೆ ಚಿಕ್ಕ ಚಿತ್ರವಿದೆ. ೫ನೇ ಕಲ್ಲಾಸರೆಯಲ್ಲೂ ಹಂದಿಯ ಮುಖಚಿತ್ರವಿದೆ. ಚಿಕ್ಕ ಬೆಣಕಲ್ (೩) ಹಿರೇಬೆಣಕಲ್ (೨) ಗಳಲ್ಲೂ ಹಂದಿಯ ದೊಡ್ಡ ಚಿತ್ರಗಳಿವೆ.

**ನಾಯಿ :** ನಾಯಿಯ ಚಿತ್ರಗಳು ದನಗಳ, ಮನುಷ್ಯ ಚಿತ್ರಗಳೆಡೆಯಲ್ಲಿ ಕಂಡುಬರುತ್ತವೆ. ಸಾಮಾನ್ಯವಾಗಿ ಕಡ್ಡಿಯಂತೆ ರೇಖಾಕೃತಿಯಲ್ಲಿ ನಾಯಿ ಚಿತ್ರಗಳನ್ನು ಬಿಡಿಸಲಾಗಿರುತ್ತದೆ. ತೆಳು ಉದ್ದ ದೇಹ, ಕಡ್ಡಿಯಂತೆ ಕಾಲು, ಬಾಲ ಮೇಲೆಕ್ಕೆತ್ತಿರುತ್ತದೆ. ನಾಯಿಯ ಚಿತ್ರಗಳು ಹಿರೇಬೆಣಕಲ್ (೧) ಚಿಕ್ಕರಾಂಪುರ (೧) ಹಂಪಿ (೪) ರಾಂಪುರ (೩) ಮಲ್ಲಾಪುರ (೪,೬) ಹೊಸ ಬಂಡಿಹರ್ಲಾಪುರ (೧) ಮತ್ತು ಆನೆಗುಂದಿ (೨)ಯ ಚಿತ್ರಗಳಲ್ಲಿ ಕಂಡುಬಂದಿದೆ.

**ಉಡ :** ಉಡದ ಚಿತ್ರಗಳು ಗಡ್ಡಿ (೩) ಮತ್ತು ಹಿರೇಬೆಣಕಲ್‌ಗಳಲ್ಲಿವೆ. ಗಡ್ಡಿಯಲ್ಲಿ ಹಲ್ಲಿಯ ಆಕಾರದಲ್ಲಿದ್ದು ಛಾಯಾರೂಪದಲ್ಲಿದೆ. ಚೂಪಾದ ಮುಖ, ತೆಳುವಾದ ಕತ್ತು, ಅರೆವೃತ್ತಾಕಾರದ ಹೊಟ್ಟೆ, ನಾಲ್ಕು ಕಾಲು ಉದ್ದವಾದ ಬಾಲವನ್ನು ಹೊಂದಿದೆ. ನಾಲಗೆಯನ್ನು ಹೊರಚಾಚಿದೆ. ನಾಲಿಗೆ ತುದಿ ಗುಂಡಾಗಿದೆ.

ಹಿರೇಬೆಣಕಲ್ಲಿನ ೧೬ನೇ ಕಲ್ಲಾಸರೆಯಲ್ಲಿ ೫ ಉಡಗಳ ಗುಂಪಿನ ಚಿತ್ರವಿದೆ. ಚಿತ್ರಗಳು ಬಹಳಷ್ಟು ಮಾಸಿವೆ. ಇವುಗಳ ಮೈ ತುಂಬಾ ವಕ್ರವಾಗಿ ಪರಸ್ಪರ ಛೇದಿಸುವ ರೇಖೆಗಳಿದ್ದು ಬಹಳ ಸುಂದರವಾಗಿ ಕಾಣುತ್ತದೆ.

**ಮಂಗ :** ಮಂಗದ ಚಿತ್ರಗಳು ತೀರ ವಿರಳ. ಅದರಲ್ಲೂ ಬಿಳಿ ಬಣ್ಣದ ಚಿಕ್ಕ ಚಿಕ್ಕ ಕಡ್ಡಿ ರೀತಿಯ ಆಕೃತಿಗಳು ಎಮ್ಮಿಗುಡ್ಡ(೨) ಆನೆಗುಂದಿ (೮) ಗಳಲ್ಲಿವೆ. ಇವು ವಿವಿಧ ಭಂಗಿಯಲ್ಲಿವೆ. ಚಿಕ್ಕರಾಂಪುರ (೧) ಮತ್ತು ಚಿಕ್ಕಬೆಣಕಲ್ ಗಳಲ್ಲಿ ಕೆಂಪುವರ್ಣದ ಚಿತ್ರಗಳಿವೆ. ಕಡ್ಡಿಯಂತೆ ಉದ್ದ ದೇಹ ಮೂತಿ ಚೂಪಾದ ಮುಖ (ಅಥವಾ ತ್ರಿಕೋನಾಕಾರದ ಮುಖ) ಕೈಕಾಲು ಬಾಲಗಳಿರುತ್ತವೆ.

**ಹಾವು :** ಹಾವಿನ ಚಿತ್ರಗಳು ಹೆಚ್ಚಿಲ್ಲ. ಹಿರೇಬೆನಕಲ್ಲಿನಲ್ಲಿ ಎರಡನೆಯ ಕಲ್ಲಾಸರೆಯಲ್ಲಿ ಎರಡು ಬೃಹತ್ ಹೆಬ್ಬಾವುಗಳ ಚಿತ್ರಗಳಿವೆ. ಅವುಗಳ ಮೈಮೇಲೆ ರೇಖಾಚಿತ್ರಗಳಿವೆ. ಇವನ್ನು ಹೊರತುಪಡಿಸಿ ಸಣ್ಣ ಪ್ರಮಾಣದಲ್ಲಿ ಹಾವಿನ ಚಿತ್ರಗಳೇ ಇಲ್ಲ. ಚಿಕ್ಕರಾಂಪುರದಲ್ಲಿ ಇತಿಹಾಸ ಕಾಲದ ದೊಡ್ಡ ನಾಗಸರ್ಪದ ಚಿತ್ರವಿದೆ.

**ಮೀನ :** ಮೀನಿನ ೪ ಅಪರೂಪದ ಚಿತ್ರಗಳು ಹಂಪಿ (೩) ಮಲ್ಲಾಪುರ (೩) ಮತ್ತು ಹಿರೇಬೆಣಕಲ್ (೧೬)ಗಳಲ್ಲಿವೆ. ಹಂಪಿಯಲ್ಲಿಯ ಒಂದು ಬಾಹ್ಯ ರೇಖೆಯಲ್ಲಿದ್ದು, ಸಹಜ ರೂಪದಲ್ಲಿವೆ. ಇದು ಉದ್ದವಾಗಿದ್ದು ಮಧ್ಯದಲ್ಲಿ ಅಗಲಿರುವುದರಿಂದ ಒಂದು ವಿಶೇಷ ಜಾತಿಯ ಮೀನೆನ್ನಬಹುದು. ಬಾಲ U ಆಕಾರದಲ್ಲಿದೆ. ಇನ್ನೊಂದು ಮೀನಿನ ಮೇಲೆ ಉದ್ದ ರೇಖೆಗಳಿವೆ. ಇವೆರಡು ಬೇರೆ ಬೇರೆ ಜಾತಿಯವು. ಮಲ್ಲಾಪುರದಲ್ಲಿಯ ಮೀನು ಮತ್ತೊಂದು ವಿಶೇಷ ಜಾತಿಯದು. ಸಮುದ್ರದಲ್ಲಿ ವಿರಳವಾಗಿ ದೊರೆಯುವ ಕೊಡೆಯಾಕಾರದ ಮೀನಿನಂತಿದೆ. ಅರೆವೃತ್ತಾಕಾರದ ದೇಹ ಅದಕ್ಕೆ ಅನೇಕ ಎಳೆಯಾಕಾರದ ಬಾಲಗಳಿವೆ. ಹಿರೇಬೆನಕಲ್ಲಿನಲ್ಲಿ ದೊಡ್ಡ ಪ್ರಮಾಣದಲ್ಲಿದೆ. (೦.೫ ಮೀ. ಅಗಲ ಮತ್ತು ೦.೮೩ ಮೀ ಉದ್ದ) ಮೊಟ್ಟೆಯಾಕಾರದ ಉದ್ದ ದೇಹ. ದಪ್ಪ ಬಾಲ ಮತ್ತು ದೇಹದ ಎರಡೂ ಕಡೆ ರೆಕ್ಕೆಗಳಿವೆ. ಮೈ ಮತ್ತು ದ್ವಿರೇಖೆಯ ಬಾಲದ ಮೇಲೆ ಸಮನಾಂತರದಲ್ಲಿ ಅಡ್ಡ ರೇಖೆಗಳಿವೆ.ಈ ಪ್ರದೇಶದಲ್ಲಿ ಅಪರೂಪದ ಜಾತಿಯ ಮೀನುಗಳ ಚಿತ್ರಗಳಿರುವುದು ಗಮನಾರ್ಹ.

**ಇತರ ಪ್ರಾಣಿಗಳು :** ಹೋತು, ಆಡು (ಆನೆಗುಂದಿ ೨), ಮೊಸಳೆ (ಹಂಪಿ-೧) ಟಗರು ಮತ್ತು ತೋಳ (ಕೊಪ್ಪಳ-೧) ಗಳ ಒಂದೊಂದು ಚಿತ್ರಗಳಿವೆ. ಕೊಪ್ಪಳ (೧) ಹಿರೇಬೆಣಕಲ್ (೧) ಗಳಲ್ಲಿ ಮೊಲದ ಚಿತ್ರಗಳಿವೆ. ಆನೆಗುಂದಿಯಲ್ಲಿ ಆಡು ಮುಖ ಮೇಲಕ್ಕೆತ್ತಿ ನಿಂತಿದೆ. ಅದಕ್ಕೆ ಕೆಚ್ಚಲನ್ನು ತೋರಿಸಲಾಗಿದೆ. ಹಂಪಿಯಲ್ಲಿ ಮೊಸಳೆ ಉಡದಂತಿ ತೋರುತ್ತಿದ್ದರೂ ಅದು ಮೊಸಳೆ ಎನ್ನುವುದು ಸ್ಪಷ್ಟ. ಕೊಪ್ಪಳದ ಒಂದನೆಯ ಗವಿಯ ಪ್ರಾಣಿ ಸಮೂಹದ ಚಿತ್ರಗಳಲ್ಲಿ ಟಗರು, ಮೊಲ ಮತ್ತು ತೋಳದ ಚಿತ್ರಗಳು ಸಹಜವಾಗಿವೆ.

## ೫.೩. ಪಕ್ಷಿ ಚಿತ್ರಗಳು

**ನವಿಲು ಚಿತ್ರಗಳು :** ನವಿಲು ಅತ್ಯಂತ ಸುಂದರವಾದ ಪಕ್ಷಿ. ಹಾಗಾಗಿ ಅದು ಆದಿ ಮಾನವನಿಗೆ ಪ್ರಿಯವಾದ ಪಕ್ಷಿಯಾಗಿರಲಿಕ್ಕೂ ಸಾಕು. ಬೇರೆಲ್ಲ ಪಕ್ಷಿಗಳಿಗಿಂತ ನವಿಲನ್ನು ಅವನು ತನ್ನ ಚಿತ್ರಗಳಲ್ಲಿ ಸುಂದರವಾಗಿ ಮೂಡಿಸಿದ್ದಾನೆ. ದೊಡ್ಡ, ಮಧ್ಯಮ ಮತ್ತು ಸಣ್ಣ ಗಾತ್ರದ ನವಿಲಿನ ಚಿತ್ರಗಳು ಈ ಪ್ರದೇಶದಲ್ಲಿವೆ. ದೊಡ್ಡ ಚಿತ್ರಗಳು ಬಿಡಿಯಾಗಿದ್ದರೆ ಸಣ್ಣವು ಮನುಷ್ಯ ಪ್ರಾಣಿಗಳ ಚಿತ್ರ ಸಮೂಹದಲ್ಲಿದೆ. ಹೆಣ್ಣು ಗಂಡು ಎರಡೂ ನವಿಲುಗಳಿವೆ.

ಮಲ್ಲಾಪುರದ ಮೂರನೇ ಗವಿಯಲ್ಲಿ ೨.೫ ಮೀ ಉದ್ದದ ದೊಡ್ಡ ಚಿತ್ರವಿದೆ. ಇದಕ್ಕೆ ಪುಕ್ಕವಿಲ್ಲ. ಕತ್ತು ಉದ್ದವಾಗಿದೆ. ದೇಹ ಕತ್ತಿಗಿಂತ ಸ್ವಲ್ಪ ದಪ್ಪವಿದ್ದು ಅದೂ ಉದ್ದವಿದೆ. ಇದರಿಂದ ಮೇಲು ನೋಟಕ್ಕೆ ಇದು ಹೆಬ್ಬಾವಿನಂತೆ ತೋರುತ್ತದೆ. ಆದರೆ ಸೂಕ್ಷ್ಮವಾಗಿ ಗಮನಿಸಿದಲ್ಲಿ ರುಂಡ ತಲೆಯ ಮೇಲೆ ತುರಾಯಿ, ಕಾಲುಗಳಿರುವುದು ಕಾಣುತ್ತದೆ. ಹಾಗಾಗಿ ಇದು ದೊಡ್ಡ ಪ್ರಮಾಣದ ನವಿಲು ಎನ್ನುವುದು ಸ್ಪಷ್ಟ. ಮೈಮೇಲೆ ವಕ್ರವಾಗಿ ಪರಸ್ಪರ ಛೇದಿಸುವ ರೇಖೆಗಳಿವೆ. ಬೊಮ್ಮಸಾಗರ ತಾಂಡದ ಮೂರು ನವಿಲುಗಳು ತಮ್ಮ ಗಾತ್ರದಿಂದ ಗಮನ ಸೆಳೆಯುತ್ತವೆ. ಸುಮಾರು ೧ ಮೀಟರ್ ಉದ್ದವಾಗಿವೆ. ಒಂದರ ಹಿಂದೆ ಒಂದರಂತೆ ಮೂರು ಎಡೆಬಿಡದೆ ಇವೆ. ಹಾಗಾಗಿ ಮೂರನೆಯದು ಮಾತ್ರ ಪೂರ್ಣ ರೂಪದಲ್ಲಿ ಗೋಚರಿಸುತ್ತದೆ. ರಾಂಪುರ (೧) ಮಲ್ಲಾಪುರ (೬) ಅಂಜನಹಳ್ಳಿ(೧) ಚಿಕ್ಕರಾಂಪುರ (೧) ಮತ್ತು ಹಿರೇಬೆನಕಲ್ಲಿನ ೧,೪, ೫,೬ ಮತ್ತು ೭ನೇ ಗವಿಗಳಲ್ಲಿ ನವಿಲಿನ ಚಿತ್ರಗಳಿವೆ. ಇವುಗಳಲ್ಲಿ ರಾಂಪುರ ಮತ್ತು ಮಲ್ಲಾಪುರಗಳವು ಮಧ್ಯಮ ಪ್ರಮಾಣದವು. ರಾಂಪುರದ್ದು ನೈಜವಾಗಿದೆ. ಮಲ್ಲಾಪುರದಲ್ಲಿ ಪ್ರಾಣಿಗಳ, ಮನುಷ್ಯರ ಗುಂಪಿನ ಮಧ್ಯ ಇದೆ. ಇಡೀ ಪ್ರಾಣಿ ಸಮೂಹದಲ್ಲಿ ನವಿಲೊಂದನ್ನು ಮಾತ್ರ ಛಾಯಾರೂಪದಲ್ಲಿ ಬಿಡಿಸಲಾಗಿದೆ. ಹಿರೇಬೆಣಕಲ್, ಚಿಕ್ಕರಾಂಪುರಗಳ ಹೆಣ್ಣು ಗಂಡಿನ (ಗರಿ ಇರುವ) ಸಣ್ಣ ಸಣ್ಣ ಸುಂದರ ಚಿತ್ರಗಳಿವೆ. ಅಂಜನಹಳ್ಳಿಯಲ್ಲಿ ಹಡಗಿನ ಚಿತ್ರದ ಮೇಲೆ ಅಲಂಕಾರ ರೂಪದಲ್ಲಿ ಮೂರು ಚಿಕ್ಕ ನವಿಲುಗಳಿವೆ.

**ಇತರ ಪಕ್ಷಿಗಳು :** ನವಿಲನ್ನು ಹೊರತು ಬೇರೆ ವಿಧದ ಪಕ್ಷಿಗಳು ಹೆಚ್ಚಿಗಿಲ್ಲ. ಹಂಪಿ (೬) ಯಲ್ಲಿ ಒಂದು ದೊಡ್ಡ ಪಕ್ಷಿಯ ಚಿತ್ರವಿದೆ. ಅದು ಯಾವುದೆಂದು ಸ್ಪಷ್ಟವಾಗುವುದಿಲ್ಲ. ದಪ್ಪ ದೇಹ, ಉದ್ದ ಕತ್ತಿನ ಪಕ್ಷಿಯೊಂದು ಅಂಜನಹಳ್ಳಿ (೧)ಯಲ್ಲಿದೆ. ಆನೆಗುಂದಿಯ ೭ನೇ ನೆಲೆಯ ೧ನೇ ಗುಂಡಿನಲ್ಲಿ ಸಾಲಾಗಿರುವ ಐದು ಪಕ್ಷಿಗಳಿವೆ. ಇವು ಹಿಂದಿನಿಂದ ಮುಂದಕ್ಕೆ ಕ್ರಮವಾಗಿ ಒಂದಕ್ಕಿಂತ ಒಂದು

ದೊಡ್ಡದಿವೆ. ದಪ್ಪ ದೇಹ ಸಣ್ಣಪುಕ್ಕಗಳಿವೆ. ಕಾಡು ಕೋಳಿ ರೀತಿ ಕಾಣುತ್ತವೆ. ಇಲ್ಲಿಯ ತಿಮ್ಮಯ್ಯ ಗುಂಟೆಯಲ್ಲೂ ಸಾಲಾಗಿ ಹಾರುತ್ತಿರುವ ಪಕ್ಷಿ ಚಿತ್ರಗಳಿವೆ.

## ೫.೪. ಸಂಯುಕ್ತ (ಮನುಷ್ಯ-ಪ್ರಾಣಿ) ಚಿತ್ರಗಳು

**ಅಶ್ವಸವಾರರು :** ಸಂಯುಕ್ತ ಚಿತ್ರಗಳಲ್ಲಿ ಅಶ್ವಸವಾರರ ಚಿತ್ರಗಳ ಹೆಚ್ಚಿಗೆ ಇವೆ. ಅವುಗಳಲ್ಲಿ ಹಿರೇಬೆನಕಲ್ಲಿನ ೧,೪,೬ ಮತ್ತು ೧೨ನೇ ಗವಿಗಳಲ್ಲಿಯ ಚಿತ್ರಗಳು ಸಂಖ್ಯಾತ್ಮಕವಾಗಿ ಮತ್ತು ವೈವಿಧ್ಯತೆಯಿಂದ ಗಮನಾರ್ಹವಾಗಿವೆ.

ಇವು ಛಾಯಾರೂಪ (೧) ಇಲ್ಲವೇ ಬಾಹ್ಯರೇಖಾರೂಪ (೬)ದಲ್ಲಿವೆ. ಕೈಯಲ್ಲಿ ಕೊಡಲಿ ಹಿಡಿದ (೧,೬,೧೨) ಭರ್ಚಿ ಹಿಡಿದ (೧,೬) ಸವಾರಿರುತ್ತಾರೆ. ಕುದುರೆಗಳ ಕತ್ತು ಮತ್ತು ಬಾಲದಲ್ಲಿ ರೋಮಗಳನ್ನು ತೋರಿಸಲಾಗಿರುತ್ತದೆ. ಚಾವಟಿ ಅಥವಾ ಕೋಲು ಹಿಡಿದ ಸವಾರರು ಇದ್ದಾರೆ. (೧,೪) ೧೨ನೇ ಗವಿಯಲ್ಲಿ ೨೩ ಕುದುರೆ ಸವಾರರ ಚಿತ್ರಗಳಿವೆ. ೬ನೇ ಗವಿಯಲ್ಲಿ ವ್ಯಕ್ತಿಯೊಬ್ಬ ಭರ್ಚಿ ಹಿಡಿದು ಕುದುರೆ ಮೇಲೆ ನಿಂತಿದ್ದು ಆ ಕುದುರೆಗೆ ಉದ್ದವಾದ ಹಗ್ಗ(?) ವನ್ನು ಕಟ್ಟಿ ವ್ಯಕ್ತಿಯೊಬ್ಬ ಎಳೆಯುತ್ತಿರುವ ರೀತಿಯ ಮೂರು ಚಿತ್ರಗಳು ಗಮನಾರ್ಹ.

ಚಿಕ್ಕರಾಂಪುರ (೪) ಆನೆಗುಂದಿ (೨) ಯಲ್ಲಿ ಹಿರೇಬೆಣಕಲ್ ರೀತಿ ಅಶ್ವಸವಾರರ ಚಿತ್ರಗಳಿವೆ. ಮಲ್ಲಾಪುರದ (೭)ಅಶ್ವಸವಾರರ ಚಿತ್ರ ಸಹಜವಾಗಿಲ್ಲ. ಕುದುರೆಯ ತಲೆ ಮೇಲೆ ರೋಮಗಳಿದ್ದು (ರೇಖೆ) ಅವುಗಳ ತುದಿಯಲ್ಲಿ ಸಣ್ಣ ಸಣ್ಣ ದುಂಡಾದ ರಚನೆಗಳಿವೆ.

**ಕೊರೆದ ಚಿತ್ರ :** ಮಲ್ಲಾಪುರದ ಎರಡನೇ ನೆಲೆ (ಬಂಡೆ ೩) ಯಲ್ಲಿ ಅಶ್ವಸವಾರನ ಒಂದು ಕೊರೆದ ಚಿತ್ರವಿದೆ. ಇದು ಆನೆಗುಂದಿಯ (೨) ವರ್ಣಚಿತ್ರಗಳನ್ನು ಹೋಲುತ್ತದೆ.

**ಬಿಳಿವರ್ಣದ ಚಿತ್ರಗಳು :** ಅಗೋಲಿ, ಬಿಳೀಭಾವಿಗಳಲ್ಲಿ ಅಶ್ವಸವಾರರ ಸುಂದರ ಚಿತ್ರಗಳಿವೆ. ವರ್ಣಚಿತ್ರಗಳಿಗಿಂತ ಇವು ಭಿನ್ನವಾದ ಶೈಲಿಯಲ್ಲಿವೆ. ಬಾಹ್ಯ ರೇಖೆಯ ಚಿತ್ರಗಳಿವೆ. ಸವಾರನ ಕೈಯಲ್ಲಿ ಖಡ್ಗ ಅಥವಾ ಕೋಲು ಇದೆ. (ಬಿಕೇಭಾವಿ) ಕುದುರೆಯ ತಲೆಮೇಲೆ ರೋಮಗಳಿವೆ. ಅಗೋಲಿಯಲ್ಲಿ ಅಲಂಕಾರದಂತೆ ರೋಮಗಳಿವೆ. ತೆಂಬಾದಲ್ಲಿ ಅಶ್ವಸವಾರರ ಕಡ್ಡಿ ಚಿತ್ರಗಳಿವೆ. ಇವೆಲ್ಲಾ ಇತಿಹಾಸ ಕಾಲದವು.

**ದನದ ಸವಾರರು :** ದನದ ಮೇಲೆ ಮನುಷ್ಯರು ಕುಳಿತಿರುವ ಕೆಲವು ಚಿತ್ರಗಳು ತಿರುಮಲಾಪುರ, ಗೂಗಿಬಂಡಿ, ತೆಂಬಾ, ಬಸಾಪಟ್ಟಣ ಮತ್ತು ಕಮಾಲಾಪುರಗಳಲ್ಲಿವೆ. ಗೂಗಿಬಂಡಿಯದು ಕೆಂಪುವರ್ಣದ

ಛಾಯಾಚಿತ್ರ ಉದ್ದವಾದ ಪಶುವಿನ ಮೇಲೆ ವ್ಯಕ್ತಿಯೊಬ್ಬ ನಿಂತಿದ್ದಾನೆ. ತಿರುಮಲಾಪುರದಲ್ಲಿ ಬಿಳಿ ಬಣ್ಣದ ರೇಖಾಚಿತ್ರವಿದ್ದು ಮೇಲಿನ ವ್ಯಕ್ತಿಯದು ಕಡ್ಡಿ ರೂಪದ ಚಿತ್ರ. ಹಂಪಸದುರ್ಗ, ತೆಂಬಾಗಳಲ್ಲಿ ಕಡ್ಡಿ ರೂಪದ ಬಿಳಿಬಣ್ಣದ ಚಿತ್ರಗಳಿವೆ. ಬಸಾಪಟ್ಟಣ ಮತ್ತು ಕಮಲಾಪುರಗಳಲ್ಲಿ ಎತ್ತಿನ ಸವಾರರ ಕೊರೆದ ಚಿತ್ರಗಳಿವೆ.

**ಆನೆ, ಜಿಂಕೆ, ಸವಾರರು :** ಆನೆಗುಂದಿ (೮) ಮತ್ತು ಸಂಗಾಪುರದಲ್ಲಿ ಆನೆ ಮೇಲೆ ಕುಳಿತ ವ್ಯಕ್ತಿಗಳ ಚಿತ್ರಗಳಿವೆ. ಆನೆಗುಂದಿಯಲ್ಲಿ ಸಣ್ಣ ಮನುಷ್ಯಾಕೃತಿಗಳು ಎರಡು ಆನೆ ಮೇಲೆ ಇವೆ. ಸಂಗಾಪುರದಲ್ಲಿ ದೊಡ್ಡ ವ್ಯಕ್ತಿಯದು. ಎಮ್ಮಿಗುಡ್ಡದಲ್ಲಿ ಜಿಂಕೆಯ ಮೇಲೆ ವ್ಯಕ್ತಿಯೊಬ್ಬ ನಿಂತಿದ್ದಾನೆ. ಅವನ ತಲೆಯ ಸುತ್ತಲೂ ಕಿರಣಗಳಂತೆ ರೇಖೆಗಳಿವೆ. ಹಿರೇಬೆಣಕಲ್ಲಿನ ೧ನೇ ಗವಿಯಲ್ಲಿ ವ್ಯಕ್ತಿಯೊಬ್ಬ ಪ್ರಾಣಿಯೊಂದರ ಮೇಲೆ ಹಿಮ್ಮುಖವಾಗಿ ಕುಳಿತಂತಿದೆ.

**ವಿಚಿತ್ರ ಆಕೃತಿ ಚಿತ್ರಗಳು**

**ವಿಚಿತ್ರ ಮನುಷ್ಯ ಆಕೃತಿಗಳು :** ನಿರ್ಧಿಷ್ಟವಾಗಿ ಗುರುತಿಸಲಾಗದ ಮನುಷ್ಯಾಕಾರದ ಕೆಲವು ವಿಚಿತ್ರ ಚಿತ್ರಗಳು ಕೊಪ್ಪಳ ಹಂಪಿ ಪ್ರದೇಶದಲ್ಲಿವೆ.

ಹಿರೇಬೆಣಕಲ್ಲಿನ ೧೭ನೇ ಗವಿಯಲ್ಲಿ ಎರಡು ವಿಚಿತ್ರ ಮನುಷ್ಯ ರೂಪದ ಆಕೃತಿಗಳಿವೆ. ಮೊದಲನೆಯ ಆಕೃತಿಯು ೫ ಮೀ ಉದ್ದ ಮತ್ತು ೪ ಮೀ ಅಗಲವಿದೆ. ಬೆನ್ನು ಬಾಗಿಸಿದ ಭಂಗಿಯಲ್ಲಿದೆ. ತಲೆ ತ್ರಿಕೋನಾಕಾರದಲ್ಲಿದೆ. ಬಲಕೈ ತಲೆಯ ಮುಂದೆ ಮೇಲಕ್ಕೆ ಚಾಚಿದೆ. ಅದು ದೊಡ್ಡ ಆಯತದ ಪಟ್ಟಿಯಂತಿದ್ದು ತುದಿಯಲ್ಲಿ ಚೂಪಾದ ನಾಲ್ಕು ಉಗುರು (?)ಗಳಿವೆ. ಎಡಗೈ ತೋಳಿನ ಭಾಗದಲ್ಲಿ ಕತ್ತರಿಸಿ ಸೀಳಿದಂತಿದೆ. ಕಾಲಿನ ಬದಲು ಬಾಲವಿದೆ. ಹೊಟ್ಟೆಯಲ್ಲಿ ಕೆಳಮುಖವಾಗಿ ಅದೇ ಭಂಗಿಯ ಇನ್ನೊಂದು ಚಿಕ್ಕ ಆಕೃತಿ ಇದೆ. ಈ ಎರಡೂ ಆಕೃತಿಗಳ ತಲೆ ಬೆನ್ನು ಬಾಲದ ಮೇಲೆಲ್ಲಾ ವಿಶಿಷ್ಟವಾದ ರೇಖಾಪಟ್ಟಿಗಳಿವೆ. ಕೈಮೇಲೆ ಅಡ್ಡಪಟ್ಟಿಗಳಿವೆ. ಬಾಲದ ಮೇಲೆ ವ್ಯಕ್ತಿಯೊಬ್ಬ ಎರಡು ಕೈಗಳನ್ನು ಮೇಲೆಕ್ಕೆ ಎತ್ತಿಕೊಂಡು ನಿಂತಿದ್ದಾನೆ.

ಎರಡನೆಯ ಆಕೃತಿಯ ೭ಮೀ ಉದ್ದವಾಗಿದೆ. ತಲೆ, ಎರಡು ಕೈ(?) ದೇಹ ಮತ್ತು ಉದ್ದವಾದ ಬಾಲ ಇದಕ್ಕಿದೆ. ಮೇಲು ನೋಟಕ್ಕೆ ಹಿಂದಿನ ಕಾಲುಗಳಿಲ್ಲದ ಉಡದ ಚಿತ್ರದಂತೆ ತೋರುತ್ತದೆ. ಮೊಟ್ಟೆಯಾಕಾರದ ಸ್ವಲ್ಪ ಉದ್ದ ತಲೆ, ತಲೆಯ ಕೆಳಗೆ ಕುತ್ತಿಗೆ ಭಾಗದಿಂದ ಎರಡೂ ಬದಿ ಚಾಚಿದ ಪಟ್ಟಿಯಂತಿರುವ ಕೈಗಳು(?) ಉಬ್ಬಿದ ಹೊಟ್ಟೆಯ ಉದ್ದ ದೇಹ ಮತ್ತು ಉದ್ದವಾದ ಬಾಲವಿದೆ.

ಕೈಯಲ್ಲಿ ತುದಿಯಲ್ಲಿ ಚೂಪಾದ ಮೂರು ಉಗುರುಗಳಿವೆ. ತಲೆ, ಕೈ, ದೇಹ ಬಾಲದ ಮೇಲೆ ರೇಖೆಗಳಿವೆ.

ಸ್ಥಳೀಯ ಜನ ಈ ಗವಿಗಳಿಗೆ ರಕ್ಕಸಗವಿ ಎಂದು ಕರೆಯುತ್ತಾರೆ. ಈ ಓನ್ನಲೆಯಲ್ಲಿ ಮೇಲಿನ ಚಿತ್ರಗಳನ್ನು ಪರಿಶೀಲಿಸಲಾಗಿ ರಾಕ್ಷಸದ ಕಲ್ಪನೆ ಹಿಂದಿನಿಂದಲೂ ಇದ್ದು, ಅವರ ಕಲ್ಪನೆಯ ರಾಕ್ಷಸ ಚಿತ್ರಗಳು ಇವಾಗಿರಬಹುದು. ಮೇಲಿನ ಆಕೃತಿ ಒಬ್ಬ ವ್ಯಕ್ತಿಯನ್ನು ನುಂಗಿದಂತಿದೆ. ಬಾಲದ ಮೇಲೆ ನಿಂತಿರುವ ವ್ಯಕ್ತಿ ಅದರ ಜೊತೆ ಹೋರಾಡುತ್ತಿರಬೇಕೆನಿಸುತ್ತದೆ.

**ವಿಚಿತ್ರ ಪ್ರಾಣಿ ಆಕೃತಿಗಳು :** ಕೆಲವು ವಿಚಿತ್ರ ಪ್ರಾಣಿ ಚಿತ್ರಗಳು ಸಂಗಾಪುರ ಹಿರೇಬೆಣಕಲ್ ಮತ್ತು ಬಿಳೇಭಾವಿಗಳಲ್ಲಿವೆ. ಸಂಗಾಪುರದ ೭ನೇ ಕಲ್ಲಾಸರೆಯಲ್ಲಿ ೨ ಪ್ರಾಣಿಗಳ ಚಿತ್ರಗಳಿವೆ. ಮೇಲು ನೋಟಕ್ಕೆ ಕುದುರೆಗಳಂತೆ ಕಾಣುತ್ತವೆ. ಆದರೆ ಅವು ಕುದುರೆಗಳಲ್ಲ. ದೇಹ ಕುದುರೆಯಂತೆ ತೋರುವ ಸಿಂಹದ ದೇಹಗಳು, ಕಾಲುಗಳು ಎತ್ತರವಾಗಿದ್ದು ಕುದುರೆಯಂತಿವೆ. ಕಾಲಿನ ತುದಿಯಲ್ಲಿ ಗೊರಸುಗಳಿವೆ. ಮುಂದಿನ ಪ್ರಾಣಿಯ ಬಾಲ ದನದ ಬಾಲದಂತೆ ಉದ್ದವಿದ್ದು ಮೇಲೆಕ್ಕೆತ್ತಿದೆ. ತುದಿಯಲ್ಲಿ ರೋಮದ ದಪ್ಪ ಕುಚ್ಚ ಇದೆ. ಹಿಂದಿನ ಪ್ರಾಣಿಗೆ ಬಾಲ ಅಷ್ಟೇನೂ ಉದ್ದವಿಲ್ಲ. ಇವುಗಳ ಮುಖ ಸ್ಪಷ್ಟವಿಲ್ಲ. ಮೊದಲನೆಯದು ಮಾಸಿ ಹೋಗಿದೆ. ಆದರೆ ತಲೆಯ ಭಾಗದಿಂದ ಮೇಲೆದ್ದಿರುವ ಮೂರು ದೊಡ್ಡ ರೋಮ(?)ಗಳಿವೆ. ಹಿಂದಿನ ಪ್ರಾಣಿಯ ಮುಖ ಅಸ್ಪಷ್ಟವಿದ್ದು ಸಿಂಹದ ಮುಖದಂತೆ ತೋರುತ್ತದೆ. ಸಿಂಹ, ದೇಹ, ಕುದುರೆ, ಕಾಲು, ದನದ ಬಾಲವಿರುವ ಈ ಪ್ರಾಣಿಯನ್ನು ನಿರ್ಧಿಷ್ಟವಾಗಿ ಗುರುತಿಸುವುದು ಕಷ್ಟ.

ಬಿಳೇಭಾವಿಯಲ್ಲಿ ಮತ್ತೊಂದು ವಿಚಿತ್ರ ಪ್ರಾಣಿಯ ಚಿತ್ರವಿದೆ. ಇದು ಪೌರಾಣಿಕ ಕಲ್ಪನೆಯ ಕಾಮಧೇನು ಪ್ರಾಣಿಯಂತಿದೆ. ದೇಹ ಹಸುವಿನಂತಿದ್ದು, ಉದ್ದವಾಗಿದೆ. ಕತ್ತು ಉದ್ದವಾಗಿದೆ. ಮನುಷ್ಯ ಮುಖ ಕಿವಿಗಳಿವೆ. ಕಣ್ಣು ಬಾಯಿಗಳಿಲ್ಲ. ತಲೆಯ ಮೇಲೆ ಎರಡು ಕೋಡುಗಳಿವೆ. ಕಾಲುಗಳು ಸಣ್ಣದಿವೆ. ಬಾಲ ಉದ್ದವಿದ್ದು ಹಿಂದಿನಿಂದ ಬೆನ್ನಿನ ಮೇಲಕ್ಕೇರಿ ಹೊಟ್ಟೆ ಭಾಗದಲ್ಲಿ ಕೆಳಕ್ಕಿಳಿದಿದೆ. ತುದಿಯಲ್ಲಿ ರೋಮದ ಕುಚ್ಚು ಇದೆ. ಇದು ಕೂಡ ವಿಚಿತ್ರ ಪ್ರಾಣಿ ಚಿತ್ರವಾಗಿದೆ.

ಹಿರೇಬೆಣಕಲ್ಲಿನ ಒಂದನೇ ಕಲ್ಲಾಸರೆಯಲ್ಲಿ (ಪೂರ್ವ ಬದಿ) ಒಂದು ದನದ ಚಿತ್ರವಿದೆ. ನಾಲ್ಕು ಕಾಲು, ಚಿಕ್ಕ ಕೋಡು, ಚಿಕ್ಕ ಬಾಲ ಸ್ಪಷ್ಟವಿದೆ. ಆದರೆ ಹೊಟ್ಟೆ ಭಾಗದಲ್ಲಿ ಮತ್ತೊಂದು ಪ್ರಾಣಿಯ ಚಿತ್ರವನ್ನು ಹಿಮ್ಮುಖವಾಗಿ ಬರೆಯಲಾಗಿದೆ. ಅದರ ಬೆನ್ನು, ಪುಷ್ಠ, ಮುಖ ಮಾತ್ರವಿದೆ. ಮುಖದಲ್ಲಿ

ಕಿವಿ ಕೋಡುಗಳಿವೆ. ಅವು ದೊಡ್ಡ ಪ್ರಾಣಿಯ ಬೆನ್ನಿನ ಹಿಂಭಾಗದಲ್ಲಿ ದೇಹದಿಂದ ಹೊರಕ್ಕೆ ಬಂದಿವೆ. ಇದೊಂದು ವಿಶೇಷ ರಚನೆಯಾಗಿದೆ.

## ೫.೬. ದೃಶ್ಯ ಚಿತ್ರಗಳು

ಪ್ರಾಗಿತಿಹಾಸ ಕಾಲದ ಚಿತ್ರಕಲೆಯಲ್ಲಿ ಅನೇಕ ವೈಯಕ್ತಿಕ , ಬಿಡಿ ಚಿತ್ರಗಳ ಜೊತೆಗೆ ಆ ಕಾಲದ ಜೀವನದ ಕೆಲವು ಅಂಶಗಳನ್ನು ಬಿಂಬಿಸುವ ದೃಶ್ಯ ಚಿತ್ರಗಳು ಇವೆ. ಸಾಲು ಕುಣಿತ, ಬೇಟೆಗಾರಿಕೆ, ಪಶುಪಾಲನೆ, ಮಾಂತ್ರಿಕ ಆರಾಧನೆ (?), ಲೈಂಗಿಕ ಕ್ರಿಯೆ, ಶವಸಂಸ್ಕಾರ ಮತ್ತಿತರ ಘಟನೆಗಳ ಚಿತ್ರಗಳನ್ನು ಗುರುತಿಸಬಹುದು. ಆ ಕಾಲದ ಜೀವನ ವಿಧಾನದ ಕೆಲವು ಸಂಗತಿಗಳನ್ನು ಅರಿತುಕೊಳ್ಳಲು ಇಂಥ ಚಿತ್ರಗಳಿಂದ ಸಾಧ್ಯವಾಗುತ್ತದೆ.

**ಸಾಲು ಕುಣಿತ :** ಕೈ-ಕೈ ಹಿಡಿದು ಸಾಲಾಗಿ ಕುಣಿಯುತ್ತಿರುವ ಮನುಷ್ಯರ ಚಿತ್ರಗಳು ಮುಖ್ಯವಾಗಿ ಹಿರೇಬೆಣಕಲ್ ಮತ್ತು ಚಿಕ್ಕರಾಂಪುರದ ಗವಿ ಚಿತ್ರಗಳಲ್ಲಿ ಕಂಡು ಬರುತ್ತವೆ. ಸಾಲು ಮನುಷ್ಯ ಚಿತ್ರಗಳು ಎರಡು ರೀತಿಯಲ್ಲಿವೆ. ಒಂದು ಛಾಯಾರೂಪವಾದರೆ ಮತ್ತೊಂದು ರೀತಿ ದೇಹದ ರೇಖಾರೂಪದವು. ಮೊದಲ ರೀತಿಯವು ಹಿರೇಬೆನಕಲ್ಲಿನ ೧,೧೧ ಮತ್ತು ೧೨ನೇ ಗವಿಗಳಲ್ಲಿ ಹಾಗೂ ಚಿಕ್ಕ ರಾಂಪುರದ ೧ನೇ ಗವಿಯಲ್ಲಿ ಕಂಡುಬರುತ್ತವೆ. ಎರಡನೇಯ ರೀತಿಯವು ಹಿರೇಬೆಣಕಲ್ಲಿನ ಆರು ಮತ್ತು ಚಿಕ್ಕರಾಂಪುರದ ಅದೇ ಗವಿಯಲ್ಲಿ ಇವೆ. ಛಾಯಾರೂಪದ ಚಿತ್ರಗಳಲ್ಲಿ ದಪ್ಪ ಕಾಲಿನ ಮನುಷ್ಯ ತಂಡಗಳು ಮತ್ತು ತೆಳು ಕಾಲಿನ ಮನುಷ್ಯ ತಂಡಗಳಿವೆ. ತಂಡಗಳಲ್ಲಿ ಕೆಲವು ವ್ಯಕ್ತಿಗಳ ತಲೆಯ ಸುತ್ತಲೂ ಕೆದರಿದ ರೀತಿಯ ತಲೆಯ ಕೂದಲು ಹರಡಿದ್ದು ಅವನ್ನು ಸ್ತ್ರೀ ಚಿತ್ರಗಳೆಂದು ಗುರುತಿಸಬಹುದು.

ಹಿರೇಬೆಣಕಲ್ಲಿನ ಒಂದನೇ ಕಲ್ಲಾಸರೆಯಲ್ಲಿ ೨,೩,೪,೧೦ ಜನರ ಎರಡು ಮತ್ತು ೧೩ ಜನರನ್ನು ಒಳಗೊಂಡಿರುವ ೬ ಸಾಲು ಕುಣಿತದ ತಂಡಗಳಿವೆ. ೨ ಮತ್ತು ೩ ಜನರ ತಂಡ ಸ್ತ್ರೀಯರವು. ಆದರೆ ಮೂರರಲ್ಲಿ ಕೊನೆಯ ವ್ಯಕ್ತಿ ತಲೆಯಲ್ಲಿ ಕೂದಲಿಲ್ಲ. ಆದರೆ ತಲೆ ಸ್ವಲ್ಪ ಎತ್ತರದಲ್ಲಿದೆ. ಕೈಯಲ್ಲಿ ಕೊಡಲಿ ಇದೆ. ಇದು ಕೂದಲನ್ನು ಮೇಲಕ್ಕೆ ಕಟ್ಟಿಕೊಂಡ ಸ್ತ್ರೀ ಅಥವಾ ಪುರುಷನ ಚಿತ್ರವಿರಬೇಕು. ೪. ೧೦ರ ಒಂದು ತಂಡ ಮತ್ತು ೧೩ ಜನರ ತಂಡದ ಕಾಲ ಕೆಳಗೆ ತಂಡ ನಿಂತ ರೀತಿಯಲ್ಲಿ ಗೆರೆಯನ್ನು ಹಾಕಲಾಗಿದೆ. ಅಗಲವಾಗಿ ನಿಂತಿರುವ ಹತ್ತು ಜನರ ಮತ್ತೊಂದು ತಂಡದಲ್ಲಿಯ ಕೊನೆಯ ಇಬ್ಬರು ವ್ಯಕ್ತಿಗಳು ಕೈಯಲ್ಲಿ ಆಯುಧಗಳನ್ನು ಹಿಡಿದಿದ್ದಾರೆ. ಒಂದು ಕೊಡಲಿ ಇನ್ನೊಂದು ಸ್ಪಷ್ಟವಾಗುವುದಿಲ್ಲ. ನಾಲ್ಕನೆಯ ಗವಿಯಲ್ಲಿ ೩ ಜನರ ತಂಡವಿದೆ.

೧೧ ಮತ್ತು ೧೨ನೆಯ ಗವಿಗಳಲ್ಲಿ ನೇರ ಹಾಗೂ ವೃತ್ತ ಸಾಲು ಕುಣಿತದ ತಂಡಗಳಿವೆ. ೧೨ರಲ್ಲಿ ೬,೭,೧೨ ಮತ್ತು ೨೭ ಜನರ ತಂಡಗಳಿವೆ. ೧೨ ಜನರ ತಂಡ ವೃತ್ತಸಾಲಿನಲ್ಲಿದೆ. ೨೭ ಜನರ ತಂಡದಲ್ಲಿ ಬಲಕ್ಕಿರುವ ವ್ಯಕ್ತಿ ಹುಡುಗನೆಂದು ಹೇಳಬಹುದು. ಇವೆರಡು ಸಾಲಿನ ಮನುಷ್ಯ ಚಿತ್ರಗಳು ಶೈಲಿಯಲ್ಲಿ ಭಿನ್ನವಾಗಿವೆ. ಮೊದಲನೇಯದರಲ್ಲಿ ಚಿತ್ರಗಳು ಹೆಚ್ಚು ದೃಢಕಾಯದವರಂತೆ ಇವೆ. ವಿಶಾಲ ಭುಜ, ಅಗಲ ಎದೆ, ಪುಷ್ಪವಾದ ತೊಡೆ ಕಾಲುಗಳು ಎತ್ತರ ಸು.೨೭ ಸೆಂ.ಮೀ ಹುಡುಗನ ಎತ್ತರ ಸು.೧೪ ಸೆಂ.ಮೀ ಹೆಚ್ಚು ಕಡಿಮೆ ನೇರವಾದ ಸಾಲು (೧.೫೨ ಉದ್ದ). ಬಣ್ಣವೂ ಕೂಡ ಕಪ್ಪು ನೇರಳೆ, ಎರಡನೇಯದರಲ್ಲಿ ವ್ಯಕ್ತಿಗಳ ಎತ್ತರ ನೀಳ ಮುಂಡದ ಭಾಗ ತೆಳ್ಳಗೆ, ಕಾಲುಗಳು ಕಡ್ಡಿಯ ಹಾಗೆ ತೊಡೆಯ ಭಾಗ ಮಾತ್ರ ಸ್ಥೂಲ. ಸಾಲು ಸ್ವಲ್ಪ ವೃತ್ತವಾಗಿದ್ದು ಜನರು ವರ್ತುಲಾಕಾರದಲ್ಲಿ ನಿಂತಿದ್ದಾರೆ ಎಂಬುದನ್ನು ಸುಲಭವಾಗಿ ಚಾಣಾಕ್ಷತನದಿಂದ ತೋರಿಸಲಾಗಿದೆ.

ಚಿಕ್ಕರಾಂಪುರದಲ್ಲಿ ೬,೭ ಮತ್ತು ೧೯ಜನರ ತಂಡಗಳ ಛಾಯಾರೂಪದ ಚಿತ್ರಗಳಿವೆ. ಮನುಷ್ಯ ಚಿತ್ರಗಳು ದ್ವಿಕೋನಾಕೃತಿಯ ಮುಂಡವನ್ನು ಒಳಗೊಂಡಿವೆ. ಇಲ್ಲಿಯೇ ೧೫ ಜನರ ೧ ಸಾಲು ಮತ್ತು ಹಿರೇಬೆನಕಲ್ಲಿನ ೬ನೇ ಗವಿಯಲ್ಲಿ ೬ ಮತ್ತು ೮ ಜನರ ೨ ಸಾಲು ಚಿತ್ರಗಳು, ಮುಂಡವನ್ನು ಒಳಗೊಂಡ ರೇಖಾರೂಪದವು. ಹಿರೇಬೆಣಕಲ್ ಗವಿಯ ಚಿತ್ರಗಳು ವಿಶೇಷವಾಗಿವೆ. ಗಂಡು ಹೆಣ್ಣಿನ ಸಾಲು ಪರಸ್ಪರ ಎದುರುಬದುರಾಗಿ ಕುಣಿಯುತ್ತಿರುವಂತಿದೆ. ೮ ಜನರ ಸಾಲಿನಲ್ಲಿ ಎಲ್ಲರ ತಲೆಯಲ್ಲಿ ಕೂದಲುಗಳಿವೆ. ಹಾಗಾಗಿ ಅವು ಸ್ತ್ರೀಯರ ಸಾಲೆನ್ನಬಹುದು.

ಯಶಸ್ವಿ ಬೇಟೆಯ ನಂತರ ಅಥವಾ ವಿಶೇಷ ಸಂತೋಷದ ಸಂದರ್ಭದಲ್ಲಿ ಪ್ರಾಗಿತಿಹಾಸ ಕಾಲದ ಜನತೆ ಈ ರೀತಿ ಕೈ ಕೈ ಹಿಡಿದು ಸಾಲಾಗಿ ನೃತ್ಯದಲ್ಲಿ ತೊಡಗುತ್ತಿರಬೇಕೆಂದು ಊಹಿಸಬಹುದು. ನೃತ್ಯದಲ್ಲಿ ಸ್ತ್ರೀಯರೂ ಮಕ್ಕಳೂ ಪಾಲ್ಗೊಳ್ಳುತ್ತಿದ್ದರು. ಸ್ತ್ರೀಯರೂ ತಮ್ಮದೇ ಪ್ರತ್ಯೇಕ ಸಾಲಿನಲ್ಲಿ ಇಲ್ಲವೇ ಪುರುಷರ ಸಾಲಿನಲ್ಲಿ ಸೇರಿ ಕುಣಿತದಲ್ಲಿ ತೊಡಗುತ್ತಿದ್ದುದು ವಿಶೇಷ. ಕೆಲವು ಸಲ ಸಾಲು ಕುಣಿತಗಾರರ ಕೈಯಲ್ಲಿ ಕೊಡಲಿಯಂತಹ ಆಯುಧಗಳಿರುವುದರಿಂದ ಈ ನೃತ್ಯ ಬೇಟೆಗೆ ಸಂಬಂಧಿಸಿರಬಹುದೆಂದು (ಯಶಸ್ವಿ ಬೇಟೆಗಾಗಿ) ತರ್ಕಿಸಬಹುದು.

**ಬೇಟೆಗಾರಿಕೆ :** ಬೇಟೆ ಆದಿ ಜನರ ಮುಖ್ಯ ಕಸುಬಾಗಿತ್ತುಲ. ಜೀವನ ನಿರ್ವಹಣೆಗಾಗಿ ಪ್ರಾಣಿಗಳ ಬೇಟೆಯಾಡುತ್ತಿದ್ದರು. ಈ ಬೇಟೆಗೆ ಸಂಬಂಧಿಸಿದ ಸಂಗತಿಗಳ ಚಿತ್ರಕಲೆಯ ವಿಷಯ ವಸ್ತುವಾಗಿ ಅಲ್ಲಲ್ಲಿ ಕೆಲವು ಬೇಟೆಯ ಅಪರೂಪದ ದೃಶ್ಯಗಳು ಕಂಡುಬರುತ್ತವೆ.

ಹಿರೇಬೆಣಕಲ್ಲಿನ ಹತ್ತನೇ ಕಲ್ಲಾಸರೆಯಲ್ಲಿ ಬಿಲ್ಲು ಬಾಣಗಳನ್ನು ಹಿಡಿಕೆಯುಳ್ಳ ಉದ್ದಕತ್ತಿಗಳನ್ನು ಹಿಡಿದುಕೊಂಡು ನಿಂತ ಮನುಷ್ಯರ ಚಿತ್ರಗಳಿವೆ. ೧,೬ ಮತ್ತು ಚಿಕ್ಕರಾಂಪುರದ ೪ನೇ ಗವಿ ಅಗೋಲಿ (೨) ಗಳಲ್ಲಿ ಕೊಡಲಿ ಭರ್ಚಿ ಕತ್ತಿ ಬಿಲ್ಲು ಬಾಣಗಳನ್ನು ಹಿಡಿದು ನಿಂತ ವ್ಯಕ್ತಿಗಳ ಚಿತ್ರಗಳಿವೆ. ಇವೆಲ್ಲಾ ಕಬ್ಬಿಣ ಯುಗದ ಬೃಹತ್ ಶಿಲಾಯುಗ ಕಾಲದಲ್ಲಿ ಬಳಕೆಯಲ್ಲಿದ್ದ ಆಯುಧಗಳೆಂದು ತಿಳಿಯಬಹುದು. ಬೇಟೆಯಲ್ಲಿ ಈ ಆಯುಧಗಳು ಪ್ರಮುಖವಾಗಿ ಬಳಕೆಯಾಗುತ್ತಿರಬೇಕೆಂದು ತರ್ಕಿಸಬಹುದು.

ಗಡ್ಡಿ(೧)ಯಲ್ಲಿ ವ್ಯಕ್ತಿಯೊಬ್ಬ ಉದ್ದವಾದ ಭರ್ಚಿಯಿಂದ ಪ್ರಾಣಿಯೊಂದಕ್ಕೆ (ಸ್ಪಷ್ಟವಿಲ್ಲ) ಬೆನ್ನಿನಲ್ಲಿ ಚುಚ್ಚಿದ ಚಿತ್ರವಿದೆ. ಆ ಅಘಾತಕ್ಕೆ ಪ್ರಾಣಿ ಮುಗ್ಗರಿಸಿ ಬಿದ್ದಿದೆ. ಕೊಪ್ಪಳದ (೨) ಬೇಟೆ ಚಿತ್ರ ಅಪರೂಪದ್ದು. ಬೇಟೆಗಾರನೊಬ್ಬ ಜಿಂಕೆಗಳ ಬೇಟೆಯಾಡುತ್ತಿದ್ದಾನೆ. ಅವನ ಬಾಣಕ್ಕೆ ಎರಡು ಜಿಂಕೆಗಳು ಬಲಿಯಾಗಿ ನೆಲಕ್ಕೆ ಬಿದ್ದಿವೆ. ಮತ್ತೊಂದಕ್ಕೆ ಬಾಣ ಪ್ರಯೋಗಿಸಿದ್ದಾನೆ. ಆನೆಗುಂದಿಯಲ್ಲಿ (೬-೨) ಮತ್ತೊಂದು ವಿಶೇಷ ದೃಶ್ಯವಿದೆ. ಪಕ್ಷಿಯೊಂದನ್ನು ಬೇಟೆಯಾಡಿದ ಇಬ್ಬರು ವ್ಯಕ್ತಿಗಳು ಅದರ ಎರಡೂ ರೆಕ್ಕೆಗಳನ್ನು ಒಂದೊಂದು ಕೈಯಲ್ಲಿ ಹಿಡಿದು ಹೊರಟಿದ್ದಾರೆ.

ಹಿರೇಬೆಣಕಲ್ಲಿನ ೧ ಮತ್ತು ೬ನೇ ಗವಿಯಲ್ಲಿ ಅಶ್ವಸವಾರರು ಬೇಟೆಯಲ್ಲಿ ತೊಡಗಿದ ದೃಶ್ಯಗಳನ್ನು ಗುರುತಿಸಬಹುದು. ಅಶ್ವಸವಾರರು ತಮ್ಮ ಕೈಯಲ್ಲಿರುವ ಭರ್ಚಿಯನ್ನು ಜಿಂಕೆಯೆಡೆಗೆ ಎಸೆಯುತ್ತಿರುವಂತಿದೆ. ೬ರಲ್ಲಿ ಜಿಂಕೆಯ ಮೇಲೆ ಅಕ್ರಮಣ ಮಾಡಲು ಸಿದ್ಧವಾಗಿರುವ ಹುಲಿಯ ಮೇಲೆ ಅಶ್ವಸವಾರನೊಬ್ಬ ಭರ್ಚಿಯನ್ನು ಎಸೆಯುತ್ತಿರುವಂತೆ ಒಂದು ಚಿತ್ರವಿದೆ. ಹಿರೇಬೆಣಕಲ್ಲಿನ ೫ ಮತ್ತು ಮಲ್ಲಾಪುರದ ೬ನೇ ಕಲ್ಲಾಸರೆಗಳಲ್ಲಿ ಎತ್ತು, ಆಕಳು, ಜಿಂಕೆ ಈ ಪ್ರಾಣಿಗಳ ಗುಂಪಿನ ಮಧ್ಯ ನಿಂತ ವ್ಯಕ್ತಿಗಳ ಚಿತ್ರಗಳಿವೆ. ಇವರು ಕೋಡುಗಳುಳ್ಳ ಮುಖವಾಡವನ್ನು ಬಾಲವನ್ನು ಧರಿಸಿದ್ದಾರೆ. ಪ್ರಾಯಶ: ಇವರು ಜಿಂಕೆ, ಹಸು ಮುಂತಾದ ಸಾಧು ಪ್ರಾಣಿಗಳನ್ನು ಹಿಡಿಯಲು ಸತ್ತ ಆ ಪ್ರಾಣಿಯ ಚರ್ಮವನ್ನು ಹೊದ್ದುಕೊಂಡು ಅದರಂತೆ ನಟಿಸಿ ಹಿಡಿಯಲು ಈ ರೀತಿ ವೇಷ ಹಾಕುತ್ತಿದ್ದರೆಂದು ತರ್ಕಿಸಬಹುದು. ಆನೆಗುಂದಿಯಲ್ಲಿ(೨) ಅಶ್ವಸವಾರರು ಮತ್ತು ಕೋಲು ಹಿಡಿದ ವ್ಯಕ್ತಿಗಳು ಜಿಂಕೆಗಳನ್ನು ಹಿಡಿಯಲು ಪ್ರಯತ್ನಿಸುತ್ತಿರುವಂತೆ ಚಿತ್ರಗಳಿವೆ.

ಚಿಕ್ಕರಾಂಪುರ(೪)ರಲ್ಲಿ ಬಿಲ್ಲು ಬಾಣ ಹಿಡಿದ ಅಶ್ವಸವಾರರು ಎತ್ತು ಆಕಳುಗಳನ್ನು ಹಿಡಿಯುತ್ತಿರುವಂತಹ ಚಿತ್ರವಿದೆ. ಎಮ್ಮಿಗುಡ್ಡದ ೨ನೇ ಕಲ್ಲಾಸರೆಯಲ್ಲಿ ಪ್ರಾಣಿಯೊಂದನ್ನು ಕೋಲು ಅಥವಾ ಭರ್ಚಿ ಹಿಡಿದ ವ್ಯಕ್ತಿಗಳು ಸುತ್ತುವರಿದ ಚಿತ್ರವಿದೆ. ಇದು ಬಿಳಿ ವರ್ಣದ್ದು.

**ಪಶುಪಾಲನೆ :** ಪಶುಪಾಲನೆ ಶಿಲಾಯುಗದ ಜನತೆಯ ಮುಖ್ಯ ಕಸುಬಾಗಿತ್ತು. ಪಶುಪಾಲನೆಯ ದೃಶ್ಯಗಳನ್ನು ಪ್ರಾಗಿತಿಹಾಸ ಕಾಲದ ಚಿತ್ರಕಲೆಯಲ್ಲಿ ಗುರುತಿಸಬಹುದು. ಚಿಕ್ಕರಾಂಪುರದ ೧ನೇ ಕಲ್ಲಾಸರೆಯಲ್ಲಿ ಎತ್ತು ಮತ್ತಿತರ ಸಾಕುಪ್ರಾಣಿಗಳನ್ನು ಹೊಡೆದುಕೊಂಡು ಹೊರಟ ವ್ಯಕ್ತಿಯ ಚಿತ್ರವಿದೆ. ಅವನ ಕೈಯಲ್ಲಿ ಉದ್ದವಾದ ಭರ್ಚಿಯಿದೆ. ಪಶುಗಳ ಗುಂಪಿನಲ್ಲಿ ನಾಯಿ ಇದೆ. ಅದೇ ರೀತಿ ಅಗೋಲಿ ತೆಂಬಾ ಮತ್ತು ಹಿರೇಬೆಣಕಲ್ಲಿನ ಒಂದು ಕಲ್ಲಾಸರೆಯಲ್ಲಿ ಪಶುಪಾಲಕರ ಚಿತ್ರಗಳಿವೆ. ಅಗೋಲಿ(೨)ಯಲ್ಲಿ ಪಶುಗಳ ಗುಂಪಿನ ಮಧ್ಯ ಪಶುಪಾಲಕನಿದ್ದು ಅವನ ಕೈಯಲ್ಲಿ ಬಿಲ್ಲು ಬಾಣಗಳಿವೆ. ತೆಂಬಾದಲ್ಲಿ ನಾಲ್ಕು ಎತ್ತುಗಳನ್ನು ಹೊಡೆದುಕೊಂಡು ಹೊರಟ ವ್ಯಕ್ತಿಯ ಚಿತ್ರವಿದೆ. ಎಲ್ಲಾ ಎತ್ತುಗಳ ಕೊರಳಲ್ಲಿ ಗಂಟೆಯಾಕಾರದ ವಸ್ತುವನ್ನು ಕಟ್ಟಿರುವುದು ಗಮನಾರ್ಹ. ವ್ಯಕ್ತಿಯ ಕೈಯಲ್ಲಿ ಕತ್ತಿಯಂತಹ ಆಯುಧವಿದೆ. ಹಿರೇಬೆನಕಲ್ಲಿನಲ್ಲಿ ಹತ್ತು ಪಶುಗಳನ್ನು ಹೊಡೆದುಕೊಂಡು ಹೊರಟ ವ್ಯಕ್ತಿಯ ಚಿತ್ರವಿದೆ. ಅವನ ಕೈಯಲ್ಲಿ ಕೋಲು ಬಿಲ್ಲು ಬಾಣ ಸೊಂಟದಲ್ಲಿ ಕತ್ತಿಗಳಿವೆ. ಇದರಿಂದ ಪಶುಪಾಲಕರು ತಮ್ಮ ಪಶುಗಳನ್ನು ಕ್ರೂರ ಪ್ರಾಣಿಗಳಿಂದ ರಕ್ಷಿಸಲು ಬಿಲ್ಲು ಬಾಣ ಖಡ್ಗಗಳನ್ನು ತಮ್ಮ ಜೊತೆ ಇಟ್ಟುಕೊಳ್ಳುತ್ತಿದ್ದರೆಂದು ತಿಳಿಯಬಹುದು.

**ಲೈಂಗಿಕ ಕ್ರಿಯೆ :** ಲೈಂಗಿಕ ಕ್ರಿಯೆಯೂ ಕೂಡ ಚಿತ್ರದ ವಸ್ತುವಾಗಿದೆ. ಸಂಭೋಗ ಕ್ರಿಯೆಯನ್ನು ಚಿತ್ರಗಳಲ್ಲಿ ಸಾಂಕೇಂತಿಕವಾಗಿ ತೋರಿಸಲಾಗಿದೆ. ಹಂಪಿಯ ನಾಲ್ಕನೇ ಕಲ್ಲಾಸರೆಯಲ್ಲಿ ಹಿರೇಬೆಣಕಲ್ಲಿನ ೧೧ ಮತ್ತು ೧೨ನೇ ಗವಿಗಳಲ್ಲಿ ಗಂಡು ಹೆಣ್ಣಿನ ಲೈಂಗಿಕ ಕ್ರಿಯೆಯ ಚಿತ್ರಗಳಿವೆ. ಹಂಪಿಯಲ್ಲಿ ಎರಡು ವ್ಯಕ್ತಿಗಳ ಚಿತ್ರಗಳು ಒಂದರ ಪಕ್ಕ ಒಂದಿವೆ. ಅವೆರಡರ ಗುಹ್ಯ ಸ್ಥಾನವನ್ನು ಅರೆವೃತ್ತಾಕಾರದ ರೇಖೆಯಿಂದ ಸೇರಿಸಿದೆ. ಇದು ಆ ಇಬ್ಬರ ಮಧ್ಯ ಲೈಂಗಿಕ ಕ್ರಿಯೆಯ ಸೂಚಕ ರೀತಿ. ಹಿರೇಬೆಣಕಲ್ಲಿನಲ್ಲಿ ಕೈಗಳನ್ನು ಮೇಲೆಕ್ಕೆತ್ತಿ ತೊಡೆಗಳನ್ನು ಅಗಲಿಸಿರುವ ಜೋಡಿಯ ಮರ್ಮಾಗಗಳಿರುವ ಸ್ಥಾನಗಳನ್ನು ಒಂದು ಗೆರೆಯಿಂದ ಸೇರಿಸಿದೆ. ಇದು ಕೂಡ ಸಂಭೋಗದ ಸ್ಥಿತಿಯನ್ನು ತೋರಿಸುವ ರೀತಿ.

ಎಮ್ಮಿಗುಡ್ಡದ ೨ನೇ ಕಲ್ಲಾಸರೆಯಲ್ಲಿ ಬಿಳಿವರ್ಣದ ಕಡ್ಡಿಯಾಕಾರದ ಹೆಣ್ಣುಗಂಡಿನ ಜೋಡಿ ಇದೆ. ಇದರಲ್ಲಿ ಸ್ತ್ರೀ ಚಿತ್ರ ಸ್ಪಷ್ಟವಾಗಿದೆ. ಎದೆ ಸ್ಥಾನದಲ್ಲಿ ಎರಡು ಚುಕ್ಕೆಗಳನ್ನು ಇಟ್ಟು ಸ್ತನಗಳನ್ನು ಸೂಚಿಸಲಾಗಿದೆ. ಈ ಜೋಡಿಯ ಮರ್ಮಾಗಗಳಿರುವ ಸ್ಥಾನವನ್ನು ನೇರ ಗೆರೆಯಿಂದ ಸೇರಿಸಿ ಸಂಭೋಗ ಸ್ಥಿತಿಯನ್ನು ತೋರಿಸಲಾಗಿದೆ.

**ಆರಾಧನೆ :** ಹಂಪಿ, ಹಿರೇಬೆಣಕಲ್, ಚಿಕ್ಕಬೆಣಕಲ್ ನಾರಾಯಣ ಪೇಟೆ ಮತ್ತು ಮಲ್ಲಾಪುರಗಳಲ್ಲಿ ನಗ್ನರಾದ ಸ್ತ್ರೀಪುರುಷರು ದಂಪತಿಗಳು ಮೈಮೇಲೆ ವಿಚಿತ್ರಾಕಾರದಲ್ಲಿ ರೇಖೆಗಳನ್ನು ಬರೆದುಕೊಂಡು ನರ್ತಿಸುತ್ತಿರುವಂತೆ ಕಾಣುವ ಚಿತ್ರಗಳಿವೆ. ಇವು ಮಾಂತ್ರಿಕ ಆರಾಧನೆಗೆ ಸಂಭಂಧಿಸಿದವು.

ಮಲ್ಲಾಪುರ ಚಿಕ್ಕಬೆಣಕಲ್‌ಗಳಲ್ಲಿ ಇಂಥ ವ್ಯಕ್ತಿ ಚಿತ್ರಗಳ ಜೊತೆಯಲ್ಲಿ ಕಾಡು ಕೋಣ, ಹಂದಿ, ಜಿಂಕೆ, ನವಿಲು ಮುಂತಾದ ಪ್ರಾಣಿಗಳ ಮುಖದ ಅರೆದೇಹದ ಮತ್ತು ಪೂರ್ಣ ದೇಹದ ಚಿತ್ರಗಳಿವೆ. ಇವುಗಳ ಮೇಲೂ ಮನುಷ್ಯ ಚಿತ್ರಗಳ ಮೇಲಿರುವಂತೆ ರೇಖಾಕೃತಿಗಳಿವೆ. ಪ್ರಾಯಶ: ಮಾಂತ್ರಿಕ ಆರಾಧನೆಯಲ್ಲಿ ಈ ಪ್ರಾಣಿಗಳು ಬಳಕೆಯಾಗಿರಬಹುದುದೆಂದು ತೋರುತ್ತದೆ. ಅಂದರೆ ಇಂತಹ ಪ್ರಾಣಿಗಳನ್ನು ಬಲಿ ಕೊಟ್ಟಿರುವ ಸಾಧ್ಯತೆ ಇದೆ. ಸಾಮಾನ್ಯವಾಗಿ ಇಂತಹ ಚಿತ್ರಗಳು ದೊಡ್ಡ ಪ್ರಮಾಣದಲ್ಲಿವೆ. ಹಿರೇಬೆಣಕಲ್ಲಿನ ೨ ಮತ್ತು ೧೬ನೇ ಗವಿಯ ಪ್ರಾಣಿ ಮಾನವಾಕೃತಿಗಳ ಮೇಲೂ ರೇಖಾಕೃತಿಗಳಿರುವುದು ವಿಶೇಷ.

ಹಂಪಿಯ ಬರಮ ದೇವರ ಗುಂಡಿನಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಕುಣಿತದಲ್ಲಿ ತೊಡಗಿದ ನಾಲ್ಕು ಸ್ವಲ್ಪ ದೊಡ್ಡ ದೊಡ್ಡ ಮನುಷ್ಯಾಕೃತಿಗಳಿವೆ. ವ್ಯಕ್ತಿಗಳು ಈ ಗೋಲಾಕೃತಿಯ ರಂಗಮಂಟಪದಲ್ಲಿರುವಂತೆ ಕಾಣುತ್ತವೆ. ಎಡಗಡೆಯಿಂದ ಮೊದಲನೇ ಮೂರು ಬಲಬದಿ ನೋಟದಲ್ಲಿವೆ. ಕೊನೆಯದು ಮುಂಬದಿ ನೋಟದಲ್ಲಿದೆ. ಮೊದಲನೇ ಎರಡು ಚಿತ್ರಗಳಲ್ಲಿ ಸ್ತ್ರೀ ಆಕೃತಿಗಳು ಅವುಗಳಿಗೆ ಸ್ಪಷ್ಟವಾಗಿ ಉಬ್ಬಿದ ಸ್ತನಗಳಿವೆ. ಮೂರನೆಯದು ಸಣ್ಣ ಪುರುಷಾಕೃತಿ. ತಲೆಯ ಭಾಗ ಅಳಿಸಿ ಹೋಗಿದೆ. ಈ ಮೂರು ಸ್ವಲ್ಪ ಕುಗ್ಗಿ ನಿಂತ ಭಂಗಿಯಲ್ಲಿವೆ. ಮುಂಡದ ಭಾಗವು ಸ್ವಲ್ಪ ಮುಂದೆ ಬಾಗಿದೆ. ಕೈಗಳನ್ನು ನೆಟ್ಟಗೆ ಮುಂಚಾಚಿದೆ. ಬೆರಳುಗಳನ್ನು ಬಿಡಿಸಲಾಗಿದೆ. ಮುಖವನ್ನು ಬಲಕ್ಕೆ ತಿರುಗಿಸಿದೆ. ಮೈಮೇಲೆಲ್ಲಾ ರೇಖಾಚಿತ್ರಗಳಿವೆ. ಮುಖದ ಮೇಲೆ ಗುಣಾಕಾರ ಆಕೃತಿಯಿದ್ದು ಪ್ರತಿಯೊಂದೂ ಕವಲಿನಲ್ಲಿಯೂ ಒಂದೊಂದು ಅರ್ಧ ಕಂಸವಿದೆ. ನಾಲ್ಕನೆಯ ವ್ಯಕ್ತಿಯ ಎರಡೂ ಕೈಗಳು ಆಕಡೆ ಈ ಕಡೆ ಮುಂಚಾಚಿವೆ. ತಲೆ ಸ್ಪಷ್ಟವಿಲ್ಲ. ಎದೆಯ ಭಾಗ ತೀರ ಸಣ್ಣದಾಗಿದ್ದು ಹೊಟ್ಟೆಯ ಭಾಗ ಅತಿರೇಕವಾಗಿ ಉಬ್ಬಿದೆ. ಕಾಲುಗಳು ಅಗಲಿಸಿದ್ದು ಕೈಗಳಂತೆ ತೆಳ್ಳಗಿವೆ. ಇದು ಗರ್ಭಿಣಿ ಸ್ತ್ರೀ ಚಿತ್ರದ್ದಾಗಿರಬಹುದು.

ಈ ರೀತಿಯ ಚಿತ್ರಗಳು ಮಾಂತ್ರಿಕ ಆಚರಣೆಗೆ ಸಂಬಂಧಿಸಿದವೆಂದು ಹೇಳಬಹುದು. ಈಗಲೂ ಆದಿವಾಸಿಗಳಲ್ಲಿ ಈ ರೀತಿಯ ಆಚರಣೆಗಳಿವೆ. ಆಫ್ರಿಕಾ ದೇಶದ ಸಹರಾದಲ್ಲೂ ಮೈಮೇಲೆ ರೇಖಾಕೃತಿಗಳಿರುವ ಇದೇ ತರಹದ ಕೊರೆದ ಮನುಷ್ಯ ಚಿತ್ರಗಳು ದೊರೆತಿವೆ. ಅಲ್ಲಿಯ ಬುಡಕಟ್ಟು

ಜನಾಂಗದಲ್ಲೂ ಅದೇ ರೀತಿ ಮೈಮೇಲೆ ರೇಖೆಗಳನ್ನು ಹಾಕಿಕೊಂಡು ಮಾಂತ್ರಿಕ ವಿಧಿಗಳಲ್ಲಿ ಈಗಲೂ ತೊಡಗುವ ಆಚರಣೆಗಳಿವೆ.

**ಶವಸಂಸ್ಕಾರ :** ಚಿಕ್ಕರಾಂಪುರದ ಒಂದನೇ ಕಲ್ಲಾಸರೆಯಲ್ಲಿ ಅತ್ಯಂತ ಅಪರೂಪದ ಬೃಹತ್ ಶಿಲಾಸಂಸ್ಕೃತಿಯ ಕಲ್ಲುಗುಂಡು ವೃತ್ತದ ಶವಸಂಸ್ಕಾರದ ಚಿತ್ರವಿದೆ. ವೃತ್ತಾಕಾರದ ಶವಗುಣಿಯಲ್ಲಿ ಮಧ್ಯದಲ್ಲಿ ಪ್ರಾಯಶ: ಕಲ್ಲುಗಳನ್ನಿಟ್ಟು ೨ ಭಾಗಗಳನ್ನಾಗಿ ಮಾಡಲಾಗಿದೆ. ಒಂದು ಭಾಗದಲ್ಲಿ ಶವವನ್ನು ಇರಿಸಿ ಪಾತ್ರೆಗಳನ್ನು (?) ಇರಿಸಲಾಗಿದೆ. ಇನ್ನೊಂದು ಭಾಗದಲ್ಲಿ ಅಲೆಯಾಕಾರದ ಗೆರೆಗಳನ್ನು ಹಾಕಲಾಗಿದೆ. ಶವ ಸುತ್ತಲೂ ೧೩ ಕಲ್ಲುಗುಂಡುಗಳನ್ನು ಇಡಲಾಗಿದೆ. ಬೃಹತ್ ಶಿಲಾಯುಗದ ಜನರ ಶವಸಂಸ್ಕಾರದ ಬಗ್ಗೆ ತಿಳಿಸುವ ಮಹತ್ವದ ಚಿತ್ರವಿದು.

## ೫.೭. ಮಂಡಲ, ವೃತ್ತ, ಹಸ್ತ ಮತ್ತು ರೇಖಾ ಸಂಕೇತ ಚಿತ್ರಗಳು

ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳಲ್ಲಿ ಅಪರೂಪವಾಗಿ ಅಲ್ಲಲ್ಲಿ ಕುತೂಹಲಕಾರಿಯಾದ ಒಗಟಿನ ರೇಖಾಕೃತಿಗಳಿವೆ. ಕೆಲವು ಕೆಂಪು ಮತ್ತು ಬಿಳಿ ವರ್ಣದವು. ಮತ್ತೆ ಕೆಲವು ಬಂಡೆಯ ಮೇಲೆ ಗೀರು ಚಿತ್ರಗಳು. ಇವುಗಳಲ್ಲಿ ಮಂಡಲ, ವೃತ್ತ, ಹಸ್ತಮುದ್ರೆ, ರೇಖಾ ಸಂಕೇತಗಳು ಹಾಗೂ ಕುಳಿ ಚಿತ್ರಗಳೆಂದು ವಿಂಗಡಿಸಬಹುದು.

**ಮಂಡಲಗಳು :** ಮಂಡಲ ಚಿತ್ರಗಳು ಹಿರೇಬೆಣಕಲ್ (೬) ಚಿಕ್ಕಬೆಣಕಲ್ (೧) ಆನೆಗುಂದಿ (೨,೩) ಚಿಕ್ಕರಾಂಪುರ (೬) ಬಿಳೇಭಾವಿ(೧,೨) ಮತ್ತು ಮಲ್ಲಾಪುರಗಳಲ್ಲಿ (೬) ಇವೆ. ಮಂಡಲ ಚಿತ್ರಗಳಲ್ಲಿ ಮೂರು ರೀತಿ ಇವೆ. ಚಿಕ್ಕರಾಂಪುರದಲ್ಲಿ ಎರಡು ಮತ್ತು ಬಿಳೇಭಾವಿ, ಮಲ್ಲಾಪುರದಲ್ಲಿ ಒಂದರೊಳಗೊಂದಿರುವ ನಾಲ್ಕು ಮೂಲೆ ಗಂಟಿನ, ಒಟ್ಟು ಎಂಟು ಗಂಟಿನ ರೀತಿಯವು. ಒಂದನ್ನೊಂದು ಛೇದಿಸುವ ಎರಡು ಸಮ ಚತುರ್ಭುಜಗಳು ಇವುಗಳ ಕೆಳಗೆ ನಾಲ್ಕು ಮೂಲೆಗಳಲ್ಲಿ ತಿರುಗಂಟುಗಳಿರುತ್ತವೆ. ಹೀಗಾಗಿ ಈ ರೇಖಾ ಮಂಡಲಕ್ಕೆ ಕೊನೆ ಮೊದಲಿರುವುದಿಲ್ಲ. ಮಲ್ಲಾಪುರದಲ್ಲಿ ಬಾಹ್ಯ ಮಂಡಲ ಮೂರು ರೇಖೆಯದು. ಒಳಗಿನದು ದ್ವಿರೇಖೆಯದು. ಉಳಿದವೆಲ್ಲವೂ ದ್ವಿರೇಖೆಯವು. ಚಿಕ್ಕರಾಂಪುರದ ಮಂಡಲಗಳಲ್ಲಿ ಒಂದರಲ್ಲಿ ಪುನ: ಒಂದು ಅಸಮ ಗಂಟು ಇನ್ನೊಂದರಲ್ಲಿ ಮೂರು ಅಸಮ ಗಂಟಿನ ರೇಖೆಗಳಿವೆ. ಹಾಗೆ ಈ ಮಂಡಲದ ಸುತ್ತಲೂ ಚೌಕಗಳಿದ್ದು ಅದಕ್ಕೆ ಸುತ್ತಲೂ ಸಣ್ಣ ಸಣ್ಣ ರೇಖೆಗಳನ್ನು ಹಾಕಿ ಅಲಂಕರಿಸಲಾಗಿದೆ. ಈ ಮಂಡಲಗಳಿವೆ ಹೊಂದಿಕೊಂಡಂತೆ ಗೂಳಿಯ ಚಿತ್ರಗಳಿವೆ. ಇಲ್ಲಿಯೇ ನಾಲ್ಕು ಗಂಟಿನ ದ್ವಿರೇಖಾ ಮಂಡಲವನ್ನು ಹೊಂದಿರುವ ವೃತ್ತ ಹಾಗೂ ಇಂತಹದೇ ಮಂಡಲದಲ್ಲಿ ಪ್ರಾಯಶ: ದಂಪತಿಗಳೆಂದು ತೋರುವ ವ್ಯಕ್ತಿ ಚಿತ್ರಗಳಿವೆ.

ಎರಡನೆಯ ರೀತಿಯ ಮಂಡಲಗಳು ಮೂಲೆ ಗಂಟಿರದ ಚೌಕ, ಆಯತ ಮಂಡಲಗಳು ಇವುಗಳ ಒಳಗೆ ಅಡ್ಡ ಉದ್ದ ಮತ್ತು ವಕ್ರವಾಗಿ ನೇರ ರೇಖೆಗಳಿರುತ್ತವೆ. ಈ ರೀತಿಯ ಮಂಡಲಗಳು ಚಿಕ್ಕಬೆಣಕಲ್, ಬಿಳೇಭಾವಿ(೨) ಹಿರೇಬೆಣಕಲ್ (೬.೯) ಮತ್ತು ಚಿಕ್ಕರಾಂಪುರಗಳಲ್ಲಿವೆ. ಬಿಳೇವಿಯಲ್ಲಿ ಒಂದು ಆಯತವಿದ್ದು ಅದರ ಮಧ್ಯ ಒಂದು ಸಣ್ಣ ವೃತ್ತವಿದೆ. ಅದರಿಂದ ಎಂಟು ದಿಕ್ಕಿಗೂ ರೇಖೆ ಎಳೆಯಲಾಗಿದೆ. ಆ ರೇಖೆಗಳ ತುದಿಯಲ್ಲಿ ಆಯತದ ಹೊರಗೆ ಚಿಕ್ಕ ಚಿಕ್ಕ ವೃತ್ತಗಳಿವೆ. ಎರಡನೆಯದು ಲಂಬ ಮತ್ತು ಉದ್ದದ ೩ ರೇಖೆಗಳು ಪರಸ್ಪರ ಛೇದಿಸಿದ ಆಯತವಿದ್ದು, ಎಲ್ಲಾ ರೇಖೆಗಳು ಆಯತದಿಂದ ಸ್ವಲ್ಪ ಹೊರಕ್ಕೆ ಚಾಚಿವೆ. ಒಳಗೆ ವಕ್ರವಾಗಿ ಎರಡು ಮೂಲೆಯಿಂದ ರೇಖೆ ಎಳೆಯಲಾಗಿದೆ. ಮತ್ತು ಆಯತದ ನಾಲ್ಕು ಭುಜಗಳನ್ನು ಸ್ಪರ್ಶಿಸುವಂತೆ ವಜ್ರಾಕೃತಿಯನ್ನು ಹಾಕಲಾಗಿದೆ. ಇನ್ನೊಂದು ಸ್ವಲ್ಪ ಚೌಕಾಕಾರವಾಗಿದೆ. ಅದರಲ್ಲಿ ಸಂಕಲನ ಮತ್ತು ಗುಣಕಾರ ಚಿನ್ಹೆ ರೀತಿ ಹಾಕಿದ್ದು ಚೌಕದ ನಾಲ್ಕು ಮೂಲೆಯಲ್ಲಿ ಹೂವಿನಂತೆ ಎರಡು ಗಂಟಿನ ಅಲಂಕರಣೆಗಳಿವೆ.

ಹಿರೇಬೆಣಕಲ್ಲಿನಲ್ಲಿ ಮೂರು ಅಡ್ಡ ಮೂರು ಉದ್ದ ಸಮಾನಾಂತರ ರೇಖೆಗಳು ೯೦ ಕೋನದಲ್ಲಿ ಛೇದಿಸಿವೆ. ಇವುಗಳ ತುದಿಯನ್ನು ಏರಿಳಿತದ ಗೆರೆಯಿಂದ ಸೇರಿಸಿದೆ. ಚಿಕ್ಕಬೆಣಕಲ್ಲಿನಲ್ಲಿ ಚೌಕ ಅಂಕಣದ ಮಂಡಲವಿದೆ. ಅದರಲ್ಲಿ ಸರಿಯಾಗಿ ಎರಡು ಅಡ್ಡಗೆರೆಗಳಿವೆ. ಇದರಿಂದ ಅಂಕಣವು ಮೂರು ಭಾಗವಾಗಿದೆ. ಈ ಅಡ್ಡ ರೇಖೆಗಳನ್ನು ಎರಡೂ ತುದಿಯಲ್ಲಿ ಅರೆ ತ್ರಿಕೋನಾಕಾರದ ಗೆರೆಯಿಂದ ಸೇರಿಸಲಾಗಿದೆ. ಹಾಗೂ ಚೌಕ ಅಂಕಣದ ಮಧ್ಯದ ಆಯಾತಾಕಾರದ ಮಧ್ಯ ಮೇಲೆ ಕೆಳಗೆ ದ್ವಿರೇಖಾ ಪಟ್ಟಿಯಿದೆ. ಇದರ ಎರಡೂ ಬದಿಯ ತುದಿಯು ಚೂಪಾಗಿದೆ.

ಚಿಕ್ಕರಾಂಪುರದಲ್ಲಿ ಒಂಭತ್ತು ವೃತ್ತಗಳ ಒಂದು ವಿಶಿಷ್ಟ ರೇಖಾ ಮಂಡಲವಿದೆ. ಮೂರು ಸಾಲಿನಲ್ಲಿ ಮೇಲೆ ಮಧ್ಯ ಕೆಳಗೆ ಸಮಾನಾಂತರದಲ್ಲಿ ಒಂಭತ್ತು ಚಿಕ್ಕ ವೃತ್ತಗಳಿವೆ. ಈ ಎಲ್ಲ ವೃತ್ತಗಳನ್ನು ಜೋಡಿಸುವ ಮೂರು ಲಂಬ ರೇಖೆಗಳು ಎರಡು ವಕ್ರರೇಖೆಗಳಿವೆ. ಕೊನೆಯ ನಾಲ್ಕು ವೃತ್ತಗಳನ್ನು ಬಿಟ್ಟು ಉಳಿದವುಗಳನ್ನು ಕೂಡ ರೇಖೆಯಿಂದ ಸೇರಿಸಲಾಗಿದ್ದು ಮಧ್ಯದಲ್ಲಿ ವಜ್ರಾಕೃತಿ ಉಂಟಾಗಿದೆ.

ಆನೆಗುಂದಿಯ ಒಂದು ಮೂರನೇ ಗವಿಯಲ್ಲಿ ಒಂದೇ ರೀತಿಯ ವೃತ್ತ ಮಂಡಲವಿದೆ. ವೃತ್ತದಲ್ಲಿ ಮೊದಲು ಅಡ್ಡ ಎರಡು ಉದ್ದ ರೇಖೆಗಳನ್ನು ಸಮನಾಂತರದಲ್ಲಿ ಹಾಕಲಾಗಿದೆ. ಇದರಿಂದ ಒಂಭತ್ತು ಅಂಕಣಗಳಾಗಿವೆ. ಮಧ್ಯ ಅಂಕಣದಲ್ಲಿ ಒಳಗೆ ಗುಣಾಕಾರ ಚಿನ್ಹೆ ಹಾಕಿ ಅಲ್ಲಿ ನಾಲ್ಕು ಅಂಕಣಗಳನ್ನು ಹೊರಗೆ ನಾಲ್ಕು ಭುಜಗಳಿಂದ ತ್ರಿಕೋನಾಕಾರದ ಅಂಕಣಗಳನ್ನು ಒಟ್ಟು ಮಾಡಿ ಒಟ್ಟು ಇಪ್ಪತ್ತು ಅಂಕಣಗಳ ವೃತ್ತವನ್ನಾಗಿಸಿದೆ.

ಮೂರನೆಯ ರೀತಿಯ ಮಂಡಲಗಳು ಸಂಪೂರ್ಣ ರಂಗೋಲಿ ರೀತಿಯವು. ಆನೆಗುಂದಿಯ ೫ನೇ ಕಲ್ಲಾಸರೆಯಲ್ಲಿವೆ. ಇಡೀ ಕಲ್ಲಾಸರೆಯ ತುಂಬೆಲ್ಲಾ ಬಿಳಿ ಮತ್ತ ಕೆಂಪು ಬಣ್ಣದಲ್ಲಿ ವಿವಿಧ ರೀತಿಯ ರಂಗೋಲಿ ಚಿತ್ರಗಳಿವೆ.

ಮಂಡಲ ಚಿತ್ರಗಳಿಗೆ ಧಾರ್ಮಿಕ ಅರ್ಥಗಳಿರಬಹುದೆಂದು ಊಹಿಸಬಹುದು. ಹಾಗೂ ಇವು ಬಹುಮಟ್ಟಿಗೆ ಬೃಹತ್ ಶಿಲಾಯುಗದ ಸಂಸ್ಕೃತಿಯ ಜನರಿಗೆ ಸೇರಿದವು. ಹಿರೇಬೆಣಕಲ್ ಚಿಕ್ಕರಾಂಪುರ ಬಿಳಿಭಾವಿ ಮತ್ತು ಮಲ್ಲಾಪುರದ ಮಂಡಲ ಚಿತ್ರಗಳಿರುವ ಗವಿಗಳ ಸಮೀಪದಲ್ಲಿ ಈ ಸಂಸ್ಕೃತಿಯ ಜನ ವಾಸ್ತವ್ಯದ ನೆಲೆಗಳು ಮತ್ತು ಶಿಲಾ ಸಮಾಧಿಗಳಿವೆ.

**ವೃತ್ತಗಳು :** ಗವಿವರ್ಣ ಚಿತ್ರಗಳಲ್ಲಿಯೇ ಅಲ್ಲಲ್ಲಿ ವಿವಿಧ ರೀತಿಯ ವೃತ್ತಗಳ ಚಿತ್ರಗಳಿವೆ. ವೃತ್ತಗಳಲ್ಲಿ ಒಟ್ಟು ಹತ್ತು ರೀತಿಯ ವೃತ್ತ ಚಿತ್ರಗಳನ್ನು ಗುರುತಿಸಬಹುದು.

ಹಿರೇಬೆನಕಲ್ಲಿನ ೪ನೇ ಕಲ್ಲಾಸರೆಯಲ್ಲಿ ಪರಸ್ಪರ ಭೇದಿಸುವ ೨ ವೃತ್ತಗಳ ಒಂದು ಆಕೃತಿಯಿದೆ. ಅಲ್ಲಿಯ ೫ನೇ ಗವಿಯಲ್ಲಿ ಉದ್ದ ಅಡ್ಡವಾಗಿ ಒಂದೊಂದು ಪರಸ್ಪರ ಭೇದಿಸುವ ೨ ರೇಖೆಗಳ ಸಹಿತ ೪ ರೇಖೆಗಳನ್ನು ಒಳಗೊಂಡ ವೃತ್ತಗಳಿವೆ. ಇವು ಎರಡನೆಯ ರೀತಿ. ಮೂರನೇ ಪ್ರಕಾರದವು ಅಗೋಲಿಯಲ್ಲಿ (೨) ಮತ್ತು ತಂಬಾ (೪)ದಲ್ಲಿವೆ. ಇವು ಎರಡನೆಯ ಪ್ರಕಾರದಂತಿದ್ದರೂ ವೃತ್ತದ ಮಧ್ಯದಲ್ಲಿ ಮತ್ತೊಂದು ಚಿಕ್ಕ ವೃತ್ತವಿದೆ. ಅದರ ಸುತ್ತಲೂ ರೇಖೆಗಳಿವೆ. ಇದೇ ರೀತಿಯಲ್ಲಿ ದ್ವಿಬಾಹ್ಯ ರೇಖೆಗಳನ್ನು ಒಳಗೊಂಡ ಒಂದು ವೃತ್ತ ಅಗೋಲಿಯಲ್ಲಿ (೪) ಇದೆ. ನಾಲ್ಕನೆಯ ರೀತಿಯವು ೨ ವೃತ್ತಗಳು ಮಲ್ಲಾಪುರದ ೭ನೇ ಗವಿಯಲ್ಲಿದೆ. ಇಲ್ಲಿ ಮಧ್ಯದಲ್ಲಿ ಒಂದು ವೃತ್ತವಿದ್ದು ಅದರ ಒಳಗೆ ಹಾಗೂ ಹೊರಗೆ ತ್ರಿಕೋನಾಕಾರದಲ್ಲಿ ಸುತ್ತಲೂ ಹಾಕಿರುವ ರೇಖೆಗಳಿವೆ. ೫ನೇ ವಿಧ ಬಿಳೀಭಾವಿಯಲ್ಲಿದೆ. ವೃತ್ತದ ಮಧ್ಯದಲ್ಲಿ ಚೌಕವಿದೆ. ಅದಕ್ಕೆ ಲಂಬವಾಗಿ ಮತ್ತು ಅಡ್ಡವಾಗಿ ದ್ವಿರೇಖೆಗಳು ಮತ್ತು ವಕ್ರವಾಗಿ ಏಕರೇಖೆಗಳನ್ನು ಹಾಕಲಾಗಿದೆ. ಗಡ್ಡಿಯಲ್ಲಿ (೩) ೬ನೇ ರೀತಿಯ ಒಂದು ವೃತ್ತವಿದೆ. ಅದರಲ್ಲಿ ಸ್ವಲ್ಪ ವಕ್ರವಾಗಿರುವ ೩ ಲಂಬ ರೇಖೆಗಳು ಸಮಾನಾಂತರದಲ್ಲಿವೆ. ೭ನೇ ರೀತಿಯ ವೃತ್ತ ಅಗೋಲಿಯಲ್ಲಿದೆ. ವೃತ್ತದಲ್ಲಿ ಸಂಕಲನ ಚಿನ್ಹೆಯಂತೆ ರೇಖೆ ಇದೆ. ೮ನೇ ರೀತಿಯದು ಅಗೋಲಿಯ ಕಲ್ಲಾಸರೆಯಲ್ಲಿದೆ. ದ್ವಿಬಾಹ್ಯ ರೇಖೆಯ ವೃತ್ತವಿದು. ಅದರಲ್ಲಿ ದ್ವಿರೇಖೆಯ ರೋಮನ್ ಲಿಪಿನಂತೆ ರೇಖಾಕೃತಿಯಿದೆ. ೯ನೇ ರೀತಿಯ ವೃತ್ತಗಳು ಕೊರೆದ ಚಿತ್ರಗಳು. ಇವು ಹಿರೇಬೆಣಕಲ್ ಮತ್ತು ಮಲ್ಲಾಪುರ (೧,೨)ಗಳಲ್ಲಿವೆ. ಒಂದರೊಳಗೊಂದು ಎರಡು ವೃತ್ತಗಳು

ಮಧ್ಯದಲ್ಲಿ ಅಗಲದ ಬಿಂದು ಇರುವುದು ಇದರ ವಿಶೇಷ. ಈ ರೀತಿ ಹಿರೇಬೆಣಕಲ್ಲಿನಲ್ಲಿ ಒಂದು ವೃತ್ತಾಕಾರದ ಬಂಡೆಯಲ್ಲಿ ಕೊರೆಯಲಾಗಿದೆ. ಉಳಿದವು ಚಿಕ್ಕ ವೃತ್ತಗಳು.

**ಇತರ ವೃತ್ತಾಕೃತಿಗಳು :** ಮಲ್ಲಾಪುರ ೨ನೇ ಬಂಡೆ ಚಿತ್ರದ ನೆಲೆಯಲ್ಲಿ ಒಂದು ವಿಶಿಷ್ಟವಾದ ಕೊರೆದ ವೃತ್ತಚಿತ್ರವಿದೆ. ಅದರಲ್ಲಿ ಅಸಮವಾಗಿ ಎಳೆದ ಪರಸ್ಪರ ಛೇದಿಸುವ ಮೂರು ರೇಖೆಗಳಿವೆ. ವೃತ್ತದ ಹೊರ ಮೇಲಿನ ಮೂಲೆಯಲ್ಲಿ ಅರೆ ವೃತ್ತದ ರೇಖೆ ಅದರೊಳಗೆ ಒಂದು ಅಡ್ಡ ರೇಖೆ ಇದೆ. ಕಮಲಾಪುರದ ಒಂಟಿ ಗುಂಡಿನಲ್ಲಿ ವರ್ಣಚಿತ್ರದ ಜೊತೆಗೆ ಒಂದು ಕೊರೆದ ವೃತ್ತಚಿತ್ರವಿದೆ. ಅದರ ಮಧ್ಯದಲ್ಲಿ ಎಳೆದ ರೇಖೆಯು ವೃತ್ತದವರೆಗೆ ದೀರ್ಘವಾಗಿದೆ. ಸಿದ್ದಿಕೇರಿಯ ವೃತ್ತವು ಚಿಕ್ಕ ಕುಳಿಗಳಿಂದ ರಚಿಸಲಾಗಿದೆ. ಅದರೊಳಗೆ ಅದೇ ರೀತಿಯ ಸಂಕಲನ ಚಿನ್ಹೆ ರೀತಿ ರೇಖೆ ಇವೆ.

**ಸೂರ್ಯ ಚಿನ್ಹೆಗಳು :** ಕೊಪ್ಪಳ ನಾರಾಯಣ ಪೇಟೆ ಮತ್ತು ಬಿಳೇಭಾವಿಗಳಲ್ಲಿ ಸೂರ್ಯ ಚಿನ್ಹೆಗಳಿವೆ. ಮೊದಲಿನೆರಡು ವೃತ್ತದ ಸುತ್ತಲೂ ಕಿರಣಗಳಂತೆ ರೇಖೆಗಳಿವೆ. ಬಿಳೇವಿಯಲ್ಲಿ ಮೂರು ವೃತ್ತಗಳು ಒಂದರೊಳಗೊಂದರಂತೆ ೩ ಇವೆ. ಹೊರ ವೃತ್ತಕ್ಕೆ ವಕ್ರವಾಗಿ ಎಳೆದ ರೇಖೆಗಳಿವೆ.

**ಹಸ್ತ ಮುದ್ರಿಕೆಗಳು :** ಅಗೋಲಿಯ ೨ನೇ ಕಲ್ಲಾಸರೆಯಲ್ಲಿ ಒಂದು ಮತ್ತು ಐದನೇ ಕಲ್ಲಾಸರೆಯಲ್ಲಿ ೧೦ ಕೆಂಪು ವರ್ಣದ ಹಸ್ತ ಮುದ್ರಿಕೆಗಳಿವೆ. ಎಮ್ಮಿಗುಡ್ಡ (೨) ದಲ್ಲಿ ೩ ಬಿಳಿ ಬಣ್ಣದ ಮಲ್ಲಾಪುರ (೧೩) ದಲ್ಲಿ ಬೂದು ಬಣ್ಣದ ಐದು ಹಸ್ತ ಮುದ್ರಿಕೆಗಳಿವೆ.

**ಇತರ ಚಿನ್ಹೆ ರೇಖಾಕೃತಿಗಳು :** ವಿವಿಧ ರೀತಿಯ ನಕ್ಷತ್ರಾಕಾರಗಳ (ಹಂಪಿ, ಸಂಗಾಪುರ-೧) ಆಯತಾಕಾರಗಳ ಚಿಕ್ಕಬೆಣಕಲ್ (೧) ಮಲ್ಲಾಪುರ (೮) ಆನೆಗುಂದಿ (೯) ಲಿಂಗದಳ್ಳಿ (೧) ಮತ್ತು ಅಗೋಲಿ (೨) ಗಳಲ್ಲಿ ಅರ್ಥವಾಗದ ಅನೇಕ ರೇಖಾಚಿನ್ಹೆಗಳು ಚಿಕ್ಕಬೆಣಕಲ್ (೨) ಎಮ್ಮಿಗುಡ್ಡ, ಹಂಪಸದುರ್ಗ(೨) ಮಲ್ಲಾಪುರ (೬) ಆನೆಗುಂದಿ (೨) ಸಿದ್ದಿಕೇರಿ, ಇಂದರಗಿಗಳಲ್ಲಿವೆ. ಕೆಲವು ಲಿಪಿಗಳಂತೆ ಕೆಲವು ಸಂಕೇತ ಚಿತ್ರಗಳಂತಿವೆ.

**ಇತರ ಚಿತ್ರಗಳು**

**ಹಡಗು :** ಕಟ್ಟಿಗೆಯ ಹಡಗಿನ ಮಾದರಿಯ ಚಿತ್ರಗಳು ಅಂಜನಹಳ್ಳಿ ಮತ್ತು ಹಂಪಿಯಲ್ಲಿ (೧) ಕಂಡು ಬಂದಿವೆ. ತುಂಗಭದ್ರಾ ನದಿಯ ದಡದಲ್ಲಿರುವ ಈ ನೆಲೆಗಳಲ್ಲಿಯ ಹಡಗಿನ ಚಿತ್ರಗಳು ಸಹಜವಾದರೂ ಹಡಗಿನ ಮಾದರಿ ಮಾತ್ರ ಕುತೂಹಲ ಮೂಡಿಸುತ್ತದೆ. ಅಂಜನಹಳ್ಳಿಯ ಹಡಗು ೬.೪೨ಮೀ ಉದ್ದ ೧ ಮೀ ಎತ್ತರವಿದೆ. ಹಡಗಿನ ಮೇಲೆ ರೇಖೆಗಳು ನವಿಲು ಗೂಳಿಗಳು ನಾಯಿಯ ಚಿಕ್ಕ ಚಿತ್ರಗಳಿವೆ.

ಅವು ಅಲಂಕರಣ ಚಿತ್ರಗಳಾಗಿರಬಹುದು. ಹಂಪಿಯಲ್ಲಿ ಇದೇ ರೀತಿಯ ಹಡಗಿನ ಅರ್ಧಭಾಗದ ಚಿತ್ರವಿದೆ.

**ಗಿಡಗಳು :** ಮರದ ದೊಡ್ಡ ಕಾಂಡದ ಚಿತ್ರ ಮಲ್ಲಾಪುರದ ೩ನೇ ಗವಿಯಲ್ಲಿದೆ. ಸು.೪ಮೀ ಎತ್ತರವಿದ್ದು ಟೊಂಗೆಗಳೂ ಇವೆ. ಎಲೆಗಳಿಲ್ಲ. ಕಾಂಡ ಟೊಂಗೆಯ ಮೇಲೆಲ್ಲಾ ರೇಖಾಚಿತ್ರಗಳನ್ನು ಬರೆಯಲಾಗಿದೆ. ಪ್ರಾಯಶ: ಇದು ಮಾಂತ್ರಿಕ ವಿಧಿಯಲ್ಲಿ ಉರುವಲಾಗಿ ಬಳಸಿಕೊಂಡಿರಬಹುದಾದ ಮರದ ಚಿತ್ರವೆಂದು ತೋರುತ್ತದೆ.

ಸಂಗಾಪುರ (೭) ಮತ್ತು ಬಿಳೇಭಾವಿ(೨)ಗಳಲ್ಲಿ ಹೂ ಗಿಡಗಳ ಚಿತ್ರಗಳಿವೆ. ಸಂಗಾಪುರದಲ್ಲಿ ಆನೆ ಚಿತ್ರದ ಪಕ್ಕದಲ್ಲಿ ೩ ಹೂವಿನ ಗಿಡಗಳಿವೆ. ಹೂವಿನ ಲಕ್ಷಣದಿಂದ ಅದು ಸೂರ್ಯಕಾಂತಿ ಹೂವಿನ ಗಿಡವೆಂದು ತೋರುತ್ತದೆ. ಎತ್ತರವಾದ ಕಾಂಡ ೨ ಬದಿ ಇಳಿ ಬಿದ್ದ ಕಾಂಡಗಳ ತುದಿಯಲ್ಲಿ ಮೊಗ್ಗು ಮತ್ತು ಅರಳಿದ ಹೂವಿನ ಚಿತ್ರಗಳಿವೆ. ಒಂದೂ ಎಲೆಗಳಿಲ್ಲ. ೨ನೇ ಗಿಡದಲ್ಲಿ ಒಂದೇ ಮೊಗ್ಗು ಇದ್ದು, ಎಲೆಗಳೆಲ್ಲ. ಉದುರಿದಂತಿರುವ ಕಾಂಡಗಳಿವೆ. ಇನ್ನೊಂದು ಗಿಡ ಇದೇ ರೀತಿ ಇದೆ.

ಬಿಳೇಭಾವಿಯಲ್ಲಿ ಹೂಗುಚ್ಛದಂತೆ ತೋರುವ ೨ ಗಿಡಗಳಿವೆ. ಒಂದರಲ್ಲಿ ೫ ಮತ್ತೊಂದರಲ್ಲಿ ೬ ಉದ್ದವಾದ ಕಾಂಡಗಳಿದ್ದು ಅವುಗಳ ತುದಿಯಲ್ಲಿ ಮೊಗ್ಗು ಮತ್ತು ಅರಳಿದ ಹೂಗಳಿವೆ. ಇದೇ ರೀತಿ ಗಿಡ ತಿರುಮಲಾಪುರದಲ್ಲಿದೆ.

# ಅಧ್ಯಾಯ ೬

## ಚಿತ್ರಗಳ ತಾಂತ್ರಿಕ ವಿಶ್ಲೇಷಣೆ

## ೬.೧. ನೆಲೆಯ ಆಯ್ಕೆ(ಗವಿ/ಕಲ್ಲಾಸರೆಗಳ ಸ್ವರೂಪ)

ಪ್ರಾಗಿತಿಹಾಸ ಕಾಲದ ಕಲೆಯ ಒಂದು ಪ್ರಕಾರವಾದ ವರ್ಣ, ಕೊರೆದ ಮತ್ತು ಕುಟ್ಟಿದ ಚಿತ್ರಗಳು ನಿರ್ದಿಷ್ಟವಾದ ನೆಲೆಗಳಲ್ಲಿರುತ್ತವೆ. ಅಂದರೆ ಸಾಮಾನ್ಯವಾಗಿ ವರ್ಣಚಿತ್ರಗಳು ಗವಿ ಮತ್ತು ಕಲ್ಲಾಸರೆಗಳಲ್ಲಿ ಹಾಗೂ ಕೊರೆದ/ಕುಟ್ಟಿದ ಚಿತ್ರಗಳು ಬಯಲು ಬಂಡೆಗಳಲ್ಲಿ ಇರುತ್ತವೆ. ಈ ಗವಿ ಮತ್ತು ಕಲ್ಲಾಸರೆಗಳನ್ನು ಅಲ್ಲಿಯ ಚಿತ್ರಿತ ಭಾಗಗಳನ್ನು ಗಮನಿಸಲಾಗಿ ಚಿತ್ರಕ್ಕಾಗಿಯೇ ಅವುಗಳನ್ನು ಆಯ್ದುಕೊಂಡಿರುವುದು ಸ್ಪಷ್ಟವಾಗುತ್ತದೆ. ಕೊರದ/ಕುಟ್ಟು ಚಿತ್ರಗಳನ್ನು ಕೂಡ ಆಯ್ದ ಬಂಡೆಗಳಲ್ಲಿ ಮೂಡಿಸಲಾಗಿದೆ.

ಗವಿ/ಕಲ್ಲಾಸರೆಗಳು ನೈಸರ್ಗಿಕ ರಚನೆಗಳಾಗಿರುತ್ತವೆ. ಮಳೆಗಾಳಿಯಿಂದ ರಕ್ಷಿಸಿಕೊಳ್ಳಲು ಉತ್ತಮ ಆಶ್ರಯ ತಾಣಗಳಾಗಿದ್ದು, ಶಿಲಾಯುಗದ ಜನರು ಗವಿಗಳನ್ನು ಖಾಯಂ ವಾಸಕ್ಕಾಗಿ ಕಲ್ಲಾಸರೆಗಳನ್ನು ತಾತ್ಕಾಲಿಕವಾಗಿ ಬಳಸಿಕೊಳ್ಳುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಅವರು ಇಂಥ ಗವಿ/ಕಲ್ಲಾಸರೆಗಳಲ್ಲಿ ಚಿತ್ರಗಳನ್ನು ಬಿಡಿಸಿದ್ದಾರೆ. ಚಿತ್ರಕ್ಕಾಗಿ ಅವರು ಎಲ್ಲಾ ರೀತಿಯ ಗವಿ/ಕಲ್ಲಾಸರೆಗಳನ್ನು ಬಳಸಿಕೊಂಡಿಲ್ಲ. ಯಾವ ಗವಿ/ಕಲ್ಲಾಸರೆಗಳ ಒಳಗೋಡೆಗಳೋ ಛಾವಣಿಯೋ ಒರಟಲ್ಲದೇ ತಕ್ಕಮಟ್ಟಿಗೆ ನುಣುಪಾಗಿದ್ದು ಮಳೆ ನೀರಿನಿಂದ ತೋಯಲ್ಪಡುವುದಿಲ್ಲವೋ ಅಂಥ ಗವಿ/ಕಲ್ಲಾಸರೆಗಳಲ್ಲಿ ಚಿತ್ರಗಳನ್ನು ಬಿಡಿಸಿದ್ದಾರೆ. ತೀರ ಆಳವಲ್ಲದ ಕಲ್ಲಾಸರೆಗಳು ಇದಕ್ಕೆ ಅಪವಾದ ಎನ್ನಬಹುದು. ಇಂಥ ಕಲ್ಲಾಸರೆಯ ಚಿತ್ರಗಳು ಮಳೆ, ಗಾಳಿ, ಬಿಸಿಲಿಗೆ ಸಿಲುಕಿ ತೀರಾ ಮಾಸಿ ಹೋಗಿವೆ. ಪ್ರಾಗಿತಿಹಾಸ ಕಾಲದ ಜನ ತಾವು ವಾಸಿಸಿದ ಎಲ್ಲಾ ಗವಿಗಳಲ್ಲಿ ಚಿತ್ರಗಳನ್ನು ಬಿಡಿಸಿಲ್ಲ. ಚಿತ್ರಕ್ಕೆ ಸೂಕ್ತವಾದ ಭಾಗವಿದ್ದಲ್ಲಿ ಮಾತ್ರ ಬಿಡಿಸಿದ್ದಾರೆ. ಸಂಗಾಪುರದ ಕರಡಿವಟ್ಲ ಬೆಟ್ಟದಲ್ಲಿ ಅನೇಕ ಚಿಕ್ಕ ದೊಡ್ಡ ಗವಿಗಳಿವೆ. ಅವುಗಳಲ್ಲಿ ಪ್ರಾಗಿತಿಹಾಸ ಕಾಲದ ಮಡಕೆ ಚೂರುಗಳು, ಶಿಲಾಯುಧಗಳು ದೊರೆತಿವೆ. ಆದರೆ ಅವುಗಳಲ್ಲಿ ಒಂದೆರಡು ಗವಿಗಳಲ್ಲಿ ಮಾತ್ರ ಚಿತ್ರಗಳಿವೆ. ಚಿತ್ರಿತ ಭಾಗವು ಬಹಿರಂಗವಾಗಿ ಕಾಣುವಂತಿದ್ದರೂ ಮಳೆ, ಗಾಳಿ, ಬಿಸಿಲಿನಿಂದ ಸಂಪೂರ್ಣ ರಕ್ಷಿತಗೊಂಡು ಉತ್ತಮ ಸ್ಥಿತಿಯಲ್ಲಿವೆ.

ದೊಡ್ಡ ದೊಡ್ಡ ಗವಿಗಳ ನುಣುಪಾದ ಛಾವಣಿಗಳಲ್ಲಿ ಚಿತ್ರಗಳನ್ನು ಬಿಡಿಸಿದ್ದಾರೆ. ಉದಾಹರಣೆಗೆ ಮಲ್ಲಾಪುರದ ಮೂರನೇ ಗವಿ (ಖಾನಾಸಾಬನ ಗವಿ) ಹಿರೇಬೆನಕಲ್ಲಿನ ಎರಡನೇ ಗವಿ (ರಕ್ಕಸ ಗವಿ) ಮತ್ತು ಆಗೋಲಿಯ ಮೂರನೆಯ ಗವಿಗಳ ವಿಶಾಲವಾದ ಛಾವಣಿಗಳಲ್ಲಿ ದೊಡ್ಡ ಮತ್ತು ಚಿಕ್ಕ ಪ್ರಮಾಣದ ಚಿತ್ರಗಳಿವೆ. ಈ ಛಾವಣಿಗಳು ನೆಲದಿಂದ ಸುಮಾರು ೬ ರಿಂದ ೮ ಮೀ. ಎತ್ತರದಲ್ಲಿವೆ. ಕೆಲವು ಗವಿಗಳ ಮುಖಭಾಗ ಒಳಗೋಡೆಭಾಗ, ಛಾವಣಿಗಳಲ್ಲಿ ಚಿತ್ರಗಳಿರುತ್ತವೆ. ಚಿಕ್ಕರಾಂಪುರದ ೧ನೇ ಗವಿಯು ಇದಕ್ಕೆ ಉತ್ತಮ ಉದಾಹರಣೆ

ಕೆಲವು ಕಲ್ಲಾಸರೆಗಳು ಚಿತ್ರಫಲಕದಂತಿದ್ದು, ಬಹಿರಂಗವಾಗಿ ಕಾಣುವಂತಿವೆ. ಕೆಲವು ಚಿತ್ರಗಳನ್ನು ಗುರುತಿಸುವುದೇ ಕಠಿಣ. ಬಂಡೆ ಮೇಲಿನ ಆಸರೆ ಕಲ್ಲಿನ ಛಾವಣಿಯಲ್ಲೊ, ಬೃಹತ್ ಬಂಡೆಯ ಸವೆದ/ ಒಡೆದ ಆಸರೆಯಲ್ಲೊ, ಬೆಟ್ಟದ ಬುಡದ ಶಿಲಾ ಪೊಟರೆಗಳಲ್ಲೊ, ಇಂಥ ಚಿತ್ರಗಳನ್ನು ಬಿಡಿಸಲಾಗಿರುತ್ತದೆ. ಕೆಲವು ಕಲ್ಲಾಸರೆಗಳು ಕೂಡ ಕೈಗೆ ನಿಲುಕದಷ್ಟು ಎತ್ತರದಲ್ಲಿದ್ದು ಅದರಲ್ಲಿ ಚಿತ್ರಗಳನ್ನು ಬಿಡಿಸಿರುವುದು ವಿಶೇಷ. ಕೊರೆದ ಮತ್ತು ಕುಟ್ಟು ಚಿತ್ರಗಳಿಗಾಗಿ ಸಾಮಾನ್ಯವಾಗಿ ಕಪ್ಪುಶಿಲೆಯ ಬಂಡೆಗಳನ್ನು ಬಳಸಿಕೊಳ್ಳಲಾಗಿದೆ. ಬೆಟ್ಟದ ನಿರ್ದಿಷ್ಟ ಭಾಗದಲ್ಲಿ ಕಪ್ಪು ಶಿಲೆಯ ಬಂಡೆಗಳಿರುತ್ತವೆ. ಸುತ್ತಲೂ ಬಯಲು ಪ್ರದೇಶವಿದ್ದು ಒಂದು ರೀತಿ ಅನುಕೂಲವಿರುವ ಬಂಡೆಗಳಲ್ಲಿ ಮಾತ್ರ ಚಿತ್ರಗಳನ್ನು ಕೊರೆದು/ಕುಟ್ಟಲಾಗಿದೆ. ಬಿಳಿ ಕಣಶಿಲೆಯಲ್ಲೂ ಕುಳಿ, ತಿರುಗುಳಿಗಳನ್ನು ಕಾಣಬಹುದು.

ಕೊಪ್ಪಳ ಹಂಪಿ ಪ್ರದೇಶದ ಚಿತ್ರಿತ ಗವಿ ಕಲ್ಲಾಸರೆಗಳ ರಚನೆ ಮತ್ತು ವಿಧಗಳನ್ನು ಪರಿಶೀಲಿಸುವ ಮೂಲಕ ಈ ಪ್ರದೇಶದ ಶಿಲಾಯುಗದ ಮಾನವ ಚಿತ್ರ ರಚನೆಗಾಗಿ ಎಂಥ ನೆಲೆಗಳನ್ನು ಆಯ್ದುಕೊಂಡ ಎನ್ನುವುದನ್ನು ಇಲ್ಲಿ ಗಮನಿಸಬಹುದು.

**ಗವಿಗಳು :** ಕೊಪ್ಪಳ - ಹಂಪಿ ಪ್ರದೇಶದಲ್ಲಿ ಚಿತ್ರಿತ ಗವಿಗಳು ಕಲ್ಲಾಸರೆಯಂತೆ ಅಧಿಕ ಪ್ರಮಾಣದಲ್ಲಿಲ್ಲ. ಆಗೋಲಿ (೩), ಆನೆಗುಂದಿ (೭), ಮಲ್ಲಾಪುರ (೩,೬,೮) ಚಿಕ್ಕರಾಂಪುರ (೧) ಮತ್ತು ಹಿರೇಬೆಣಕಲ್ (೯,೧೨,೧೭)ಗಳಲ್ಲಿ ಮಾತ್ರ ಕೆಲವು ಗವಿಗಳಿವೆ. ಇವುಗಳಲ್ಲಿ ಆಗೋಲಿ ಮಲ್ಲಾಪುರ (೩) ಮತ್ತು ಹಿರೇಬೆಣಕಲ್ಲಿನ ಗವಿಗಳು ದೊಡ್ಡ ಪ್ರಮಾಣದಲ್ಲಿವೆ.

ಮಲ್ಲಾಪುರದ ೩ನೇ ಗವಿ (ಖಾನಾಸಾಬ ಗವಿ) ಬೃಹತ್ ಪ್ರಮಾಣದಲ್ಲಿದೆ. ಇಡೀ ಗವಿಗೆ ಒಂದೇ ವಿಶಾಲವಾದ ಛಾವಣಿ ಬಂಡೆ ಇದ್ದು, ಒಳಭಾಗದಲ್ಲಿ ನುಣುಪಾಗಿದೆ. ಆ ಬಂಡೆಗೆ ಅನುಗುಣವಾಗಿ ಅದರ ಮೇಲೆ ಚಿತ್ರಗಳನ್ನು ಬಿಡಿಸಲಾಗಿದೆ. ೬ನೇ ಮತ್ತು ೮ನೇ ಗವಿಗಳು ಬೃಹತ್ ಬಂಡೆಗಳು ಸೀಳಿ ಮಧ್ಯದಲ್ಲಿ ಉಂಟಾಗಿದ್ದು, ಇವು ಕ್ರಮವಾಗಿ ೭ ಮತ್ತು ೫ ಮೀಟರ್ ಉದ್ದವಾಗಿವೆ. ೬ನೇ

ಗವಿಯ ಎಡಗೋಡೆಯ ಹೊರಭಾಗದಲ್ಲಿ ಚಿತ್ರಗಳಿವೆ. ಆ ಭಾಗ ಹೊರಗೆ ಎದ್ದು ಕಾಣುವುದರ ಜೊತೆಗೆ ಸೂಕ್ತ ರಕ್ಷಿತ ಭಾಗವಾಗಿದೆ. ಆನೆಯದು ಅರ್ಧವೃತ್ತಾಕಾರದಲ್ಲಿ ಪೊಳ್ಳಾದ ಗವಿ ಅದರ ಒಳಗೋಡೆಗಳು ಅತ್ಯಂತ ನುಣುಪಾಗಿದ್ದು ಅಲ್ಲಿ ಚಿತ್ರಗಳಿವೆ. ಗವಿ ನೆಲದಿಂದ ಸುಮಾರು ೧೦ ಮೀಟರ್ ಎತ್ತರದಲ್ಲಿದ್ದು ವಾಸಕ್ಕೆ ಯೋಗ್ಯವಾಗಿಲ್ಲ.

ಚಿಕ್ಕರಾಂಪುರದ ಗವಿಯು ಬೃಹತ್ ಬಂಡೆಕಲ್ಲೊಂದರ ಕೆಳಭಾಗದಲ್ಲಿ ಉಂಟಾಗಿದೆ. ಈ ಗವಿಯ ಪ್ರವೇಶದಲ್ಲಿ ಛಾವಣಿ ಬಂಡೆಯ ಕೆಳಭಾಗ ತುಂಡಾಗಿ ಒಂದು ಸೊಗಸಾದ ಆಸರೆ ಉಂಟಾಗಿದೆ. ಆ ಭಾಗದಲ್ಲಿ ಮತ್ತು ಒಳಗೆ ಗೋಡೆಯ ಮೇಲೆ ಚಿತ್ರಗಳನ್ನು ಬಿಡಿಸಲಾಗಿದೆ. ಅಗೋಲಿ ಗವಿ ಕೂಡ ಮಲ್ಲಾಪುರದ ೩ನೇ ಗವಿಗಿಂತ ಸ್ವಲ್ಪ ಚಿಕ್ಕದಾಗಿದ್ದು ಛಾವಣಿಯ ಒಂದು ಭಾಗದಲ್ಲಿ ಮಾತ್ರ ಚಿತ್ರಗಳಿವೆ.

ಹಿರೇಬೆನಕಲ್ಲಿನ ೯ ಮತ್ತು ೧೭ನೇ ಗವಿಗಳನ್ನು ಎರಡನೆಯ ಪ್ರಕಾರದವೆಂದು ಗುರುತಿಸಬಹುದು. ಇವುಗಳಿಗೆ ಎರಡೂ ಬದಿ ಪ್ರವೇಶಗಳುಂಟು. ಇವುಗಳಲ್ಲಿ ೧೭ನೇ ಗವಿ ಗಮನಾರ್ಹವಾಗಿದೆ. ಅಡ್ಡವಾಗಿರುವ ಭಾರೀ ಬಂಡೆಯ ಕೆಳಭಾಗದಲ್ಲಿ ಈ ಬೃಹತ್ ಗವಿ ಉಂಟಾಗಿದೆ. ಇದಕ್ಕೆ ರಕ್ಕಸ ಗವಿ ಎಂದು ಹೆಸರು ಛಾವಣಿ ತಕ್ಕಮಟ್ಟಿಗೆ ನುಣುಪಾಗಿದೆ. ಇಲ್ಲಿ ಕೇವಲ ಎರಡೇ ಚಿತ್ರಗಳಿದ್ದರೂ ಅವು ಒಂದು ೫ ಮೀಟರ್ ಮತ್ತೊಂದು ೭ ಮೀಟರ್ ಉದ್ದವಾಗಿದ್ದು ಗವಿಗೆ ತಕ್ಕಪ್ರಮಾಣದಲ್ಲಿವೆ. ಗವಿ ನೆಲಕ್ಕಿಂತ ಸ್ವಲ್ಪ ಕೆಳಮಟ್ಟದಲ್ಲಿದ್ದು ವಿಶಾಲವಾದ ಸಭಾಂಗಣ (ಹಾಲ್)ದಂತಿದೆ. ಈ ಗವಿಗಳ ಚಿತ್ರಗಳು ಸಂಖ್ಯೆ ಮತ್ತು ವೈವಿಧ್ಯತೆ ದೃಷ್ಟಿಯಿಂದ ಶ್ರೀಮಂತವಾಗಿವೆ.

**ಕಲ್ಲಾಸರೆಗಳು :** ಗವಿಗಳಿಗಿಂತ ಕಲ್ಲಾಸರೆಗಳು ಹೆಚ್ಚಿನ ಪ್ರಮಾಣದಲ್ಲಿವೆ. ಮೇಲೆ ಉಲ್ಲೇಖಿಸಿದ ಕೆಲವು ಗವಿಗಳನ್ನು ಹೊರತುಪಡಿಸಿ ಉಳಿದಂತೆ ಎಲ್ಲ ಚಿತ್ರಿತ ನೆಲೆಗಳು ಕಲ್ಲಾಸರೆಗಳೆನ್ನಬಹುದು. ಕೊಪ್ಪಳ ಹಂಪಿ ಪ್ರದೇಶದ ಚಿತ್ರಿತ ಕಲ್ಲಾಸರೆಗಳನ್ನು ಅವುಗಳ ನೈಸರ್ಗಿಕ ರಚನೆಯ ದೃಷ್ಟಿಯಿಂದ ಈ ರೀತಿಯಲ್ಲಿ ವರ್ಗೀಕರಿಸಬಹುದು.

**೧. ಮುಂಚಾಚಿದ ತಲೆಬಂಡೆ ಆಸರೆ :** ಕೆಳಗೆ ದೊಡ್ಡ ಬಂಡೆಯಿದ್ದು ಅದರ ತಲೆಯ ಮೇಲೆ ಕೆಳಗಿನ ಬಂಡೆಯಿಂದ ಮುಂಚಾಚಿದ ಮತ್ತೊಂದು ಬಂಡೆ ಇರುತ್ತದೆ. ಮುಂಚಾಚಿದ ಬಂಡೆಯ ಛಾವಣಿಯಲ್ಲಾಗಲಿ (ಹಿರೇಬೆಣಕಲ್ ೧೬, ಚಿಕ್ಕರಾಂಪುರ ೪, ನಾರಾಯಣಪೇಟೆ ೧) ಇಲ್ಲವೇ ಮುಂಚಾಚಿದ ಬಂಡೆಯ ಆಶ್ರಯ ಪಡೆದ ಕೆಳಗಿನ ಕಲ್ಲಿನ ಮುಖಭಾಗದಲ್ಲಿ (ಗಡ್ಡಿ ೪, ಹೊಸಬಂಡಿಹರ್ಲಾಪುರ ೧) ಚಿತ್ರಗಳಿರುತ್ತವೆ. ಹಿರೇಬೆಣಕಲ್ಲಿನ ೨ನೇ ಕಲ್ಲಾಸರೆಯು ಈ ಪ್ರಕಾರದಲ್ಲಿ ಒಂದು ಅಪರೂಪವಾದ

ಕಲ್ಲಾಸರೆಯಾಗಿದೆ. ಒಂದೇ ಬೃಹತ್ ಬಂಡೆಯೊಂದರಲ್ಲಿ ಮೇಲಿನ ಸುಮಾರು ೨ ಮೀಟರ್ ಭಾಗ ಆಸರೆಯಾಗಿ ಉಳಿದಂತೆ ಸುಮಾರು ೧೦ ಮೀಟರ್ ಭಾಗ ಒಳಸರಿದ ಚಿತ್ರ ಫಲಕವಾಗಿದೆ. ಇದು ಸುಮಾರು ೧೩ ಮೀಟರ್ ಅಗಲ ಮತ್ತು ೧೦ ಮೀಟರ್ ಎತ್ತರವಾಗಿದೆ. ಇಡೀ ಫಲಕದ ಅಳತೆಗೆ ತಕ್ಕಂತೆ ಅಲ್ಲಿ ದೊಡ್ಡ ಚಿತ್ರವನ್ನು ಬಿಡಿಸಲಾಗಿದೆ. ಕಲ್ಲಾಸರೆ ಆಳವಾಗಿಲ್ಲದಿರುವುದರಿಂದ ಚಿತ್ರಗಳು ಬಹಳಷ್ಟು ಮಾಸಿವೆ.

ಚಿಕ್ಕರಾಂಪುರ(೪) ಮತ್ತು ನಾರಾಯಣಪೇಟೆ(೧) ಕಲ್ಲಾಸರೆಗಳಲ್ಲಿ ಛಾವಣಿ ಕಲ್ಲಿನಲ್ಲಿ ಚಿತ್ರಗಳಿದ್ದು ನೆಲದಿಂದ ಸುಮಾರು ೫ ಮೀಟರ್ ಎತ್ತರದಲ್ಲಿವೆ. ಆಸರೆಯ ಕೆಳಗಿನ ನೆಲ ನಿಲ್ಲಲು ಕೂಡ ಸಾಧ್ಯವಾಗದಷ್ಟು ಇಳಿಜಾರಾಗಿದೆ. ಮಲ್ಲಾಪುರದ ೨ನೇ ಕಲ್ಲಾಸರೆ ಕೂಡ ಇದೇ ರೀತಿಯದು. ಆದರೆ ಇಲ್ಲಿ ಛಾವಣಿ ಕೈಗೆ ನಿಲುಕುವಷ್ಟು ಹತ್ತಿರದಲ್ಲಿದೆ.

**೨. ಸೀಳು ಬಂಡೆ ಆಸರೆ :** ಸಾಮಾನ್ಯವಾಗಿ ಈ ಪ್ರಕಾರದ ಕಲ್ಲಾಸರೆಗಳು ಅಧಿಕವಾಗಿವೆ. ಬೃಹತ್ ಅಥವಾ ಮಧ್ಯಮ ಗಾತ್ರದ ಬಂಡೆಗಳಲ್ಲಿ ಮೂಲೆಭಾಗದಲ್ಲೊ ಬದಿಯಲ್ಲೊ ಒಂದು ಭಾಗ ಸೀಳಿ ತುಂಡು ಕೆಳಬಿದ್ದು ಆಸರೆ ಉಂಟಾಗಿರುತ್ತದೆ. ಈ ಆಸರೆ ಭಾಗದಲ್ಲಿ ಚಿತ್ರಗಳನ್ನು ಬಿಡಿಸಲಾಗಿರುತ್ತದೆ. ಇಂದರಗಿ (೧), ಚಿಕ್ಕಬೆಣಕಲ್ (೧), ಆಗೋಲಿ (೨), ನಾಗೇನಹಳ್ಳಿ (೧), ಕೊಪ್ಪಳ (೪), ಹೊಸಬಂಡಿಹರ್ಲಾಪುರ(೧) ಗಳಲ್ಲಿ ಮೂಲೆ ಕಲ್ಲಾಸರೆಗಳು ಎಮ್ಮಿಗುಡ್ಡ (೨), ತೆಂಬಾ (೪) ಗಡ್ಡಿ (೪), ಹಿರೇಬೆಣಕಲ್ (೧), ಹಂಪಿ (೫) ಕಮಲಾಪುರ (೧) ಹಾಗೂ ಇತರ ನೆಲೆಗಳಲ್ಲಿ ಬದಿಯ ಕಲ್ಲಾಸರೆಗಳಿವೆ. ಮೂಲೆ ಆಸರೆಗಳಿಗಿಂತ ಬದಿಯ ಆಸರೆಗಳು ಚಿತ್ರ ರಚನೆಗೆ ಪ್ರಶಸ್ತವಾಗಿವೆ. ಆನೆಗುಂದಿಯ ೬ನೇ ನೆಲೆಯಲ್ಲಿ ೩ ಸ್ವತಂತ್ರ ಗುಂಡುಗಳಿವೆ. ಅವುಗಳ ಮೂಲೆ ಭಾಗದಲ್ಲಿ ಒಡೆದ ಸಣ್ಣ ಕಲ್ಲಾಸರೆಗಳಿದ್ದು ಅದರಲ್ಲೂ ಚಿಕ್ಕ ಪ್ರಮಾಣದ ಚಿತ್ರಗಳಿವೆ.

**೩. ವಾರೆ ಸವಕಳಿ ಬಂಡೆ ಆಸರೆ :** ಸಾಮಾನ್ಯವಾಗಿ ಇವು ಸ್ವತಂತ್ರವಾಗಿರುವ ಬೃಹತ್ ಬಂಡೆಗಳು ಈ ಬಂಡೆಗಳ ತುದಿಯಲ್ಲಿ ಒಂದೆರಡು ಮೀಟರ್ ಹೊರತುಪಡಿಸಿ ಉಳಿದಂತೆ ಭಾಗವು ಮೇಲಿನಿಂದ ಕೆಳಕ್ಕೆ ವಾರೆಯಾಗಿ ಸವೆದಂತಿರುತ್ತದೆ. ಈ ವಾರೆ ಸವೆದ ಭಾಗವು ನುಣುಪಾಗಿದ್ದರೂ ಚಿತ್ರಗಳಿಗೆ ಹೆಚ್ಚು ರಕ್ಷಿತವಲ್ಲ. ಈ ರೀತಿಯ ಕಲ್ಲಾಸರೆಗಳು ಹೊಸ ಬಂಡಿಹರ್ಲಾಪುರ (೫) ತೆಂಬಾ (೬) ಚಿಕ್ಕಬೆಣಕಲ್ (೨) ಮತ್ತು ಹಂಪಸದುರ್ಗ(೨) ಗಳಲ್ಲಿವೆ. ಈ ನಾಲ್ಕರಲ್ಲಿ ರೇಖಾ ಸಂಕೇತ ಚಿತ್ರಗಳಿರುವುದು ಕುತೂಹಲದಾಯಕ.

**೪. ಹಾಸಲು ಬಂಡೆ ಆಸರೆ :** ಬೃಹತ್ ಬಂಡೆ(ಗುಂಡು)ಗಳು ಚಿಕ್ಕ ಗುಂಡುಗಳ ಮೇಲೆ ಉದ್ದವಾಗಿ ಹಾಸಿದಂತಿರುತ್ತದೆ. ಈ ಹಾಸಲು ಬಂಡೆಯ ಕೆಳಭಾಗದಲ್ಲಿ (ಭಾವಣಿಯಲ್ಲಿ) ಚಿತ್ರಗಳಿರುತ್ತವೆ. ಮಲ್ಲಾಪುರ (೫) ತೆಂಬಾ(೭) ಮತ್ತು ಅಗೋಲಿ (೨) ಗಳಲ್ಲಿ ಈ ರೀತಿಯ ಕಲ್ಲಾಸರೆಗಳಿವೆ. ಇಲ್ಲಿಯ ಚಿತ್ರಿತ ಭಾಗವು ಅಷ್ಟು ನುಣುಪಾಗಿರುವುದಿಲ್ಲ. ಮತ್ತು ಚಿತ್ರಗಳ ಸಂಖ್ಯೆಯೂ ಕಡಿಮೆ ಇರುತ್ತದೆ.

**೫. ವಾರೆ ಬಂಡೆ ಆಸರೆ :** ಎರಡು ಬಂಡೆಗಳು ಪರಸ್ಪರ ಒಂದಕ್ಕೊಂದು ವಾರೆಯಾಗಿ ನಿಂತು ಜೋಪಡಿ ಆಕಾರದಲ್ಲಿ ಆಸರೆ ಉಂಟಾಗಿರುತ್ತದೆ. ಎರಡೂ ಬಂಡೆಗಳ ಒಳ ಭಾಗದ ಮುಖದಲ್ಲಿ ಚಿತ್ರಗಳಿರುತ್ತವೆ. ಅಥವಾ ಒಂದು ಎತ್ತರವಾದ ಗುಂಡಿನ ಮೇಲೆ ಬೃಹತ್ ಬಂಡೆಯೊಂದು ವಾರೆಯಾಗಿ ಮಲಗಿದಂತಿರುತ್ತದೆ. ವಾರೆ ಬಂಡೆಯ ಆಸರೆಯಲ್ಲಿ ಚಿತ್ರಗಳಿರುತ್ತವೆ. ಚಿಕ್ಕ ಬೆಣಕಲ್(೩) ಹಂಪಿ(೪), ಸಂಗಾಪುರ (೭) ಬೃಹತ್ ವಾರೆ ಬಂಡೆ ಆಸರೆಗಳು ಇವೆ. ಕಾಲಕ್ರಮೇಣ ತುದಿಯಲ್ಲಿ ಸೀಳುಗಳುಂಟಾಗಿ ಮಳೆಯ ನೀರು ಇಳಿದಿರುವುದರಿಂದ ಇಂಥ ಆಸರೆಗಳ ಚಿತ್ರಗಳು ಸಾಕಷ್ಟು ಮಾಸಿವೆ. ಚಿಕ್ಕಬೆಣಕಲ್ಲಿನ ಕಲ್ಲಾಸರೆಯಲ್ಲಿ ಕೈಗೆ ನಿಲುಕದಷ್ಟು ಎತ್ತರದಲ್ಲಿ ಚಿತ್ರಗಳಿವೆ.

**೬. ಬೆಟ್ಟದ ಪೊಟರೆ ಆಸರೆ :** ಇವು ಬೆಟ್ಟದ ಬುಡದಲ್ಲಿ ಇರುತ್ತವೆ. ಕೊರಕಲಿನಂತೆ ಸುಮಾರು ೪೦ ಮೀಟರ್ ವರೆಗೂ ಬೆಟ್ಟದಲ್ಲಿ ಪೊಟರೆಗಳುಂಟಾಗಿರುತ್ತವೆ. ಇದು ಉದ್ದಕ್ಕೂ ಮುಂಬದಿಯಲ್ಲಿ ತೆರೆದಿರುತ್ತದೆ. ಈ ಪೊಟರೆಗಳಲ್ಲಿ ಚಿತ್ರಗಳಿರುತ್ತವೆ. ತಿರುಮಲಾಪುರ (೧) ಆನೆಗುಂದಿ(೫) ಹೊಸ ಬಂಡಿಹರ್ಲಾಪುರ (೩) ಮತ್ತು ನಾರಾಯಣಪೇಟೆಗಳಲ್ಲಿ (೨) ಇಂಥ ಕಲ್ಲಾಸರೆಗಳಿವೆ. ತಿರುಮಲಾಪುರದಲ್ಲಿ ಬೇರೆ ಬೇರೆ ಕಾಲದಲ್ಲಿ ರಚಿತವಾದ ಹೆಚ್ಚು ಚಿತ್ರಗಳಿದ್ದರೆ ಉಳಿದೆರಡು ಕಡೆ ಒಂದೆರಡು ಚಿತ್ರಗಳು ಮಾತ್ರ ಇವೆ.

**೭. ಪೊಳ್ಳು ಬಂಡೆ ಆಸರೆ :** ಇವು ಕೂಡ ವಿಶಿಷ್ಟವಾದ ರಚನೆಗಳು ಬೆಟ್ಟದ ಮೇಲಿರುವ ಬೃಹತ್ ಬಂಡೆಗಳ ಒಳಭಾಗ ಪೊಳ್ಳಾಗಿ ಸೊಗಸಾದ ಆಸರೆ ಉಂಟಾಗಿರುತ್ತದೆ. ಇದಕ್ಕೆ ಒಂದು ಅಥವಾ ಎರಡು ಕಡೆ ಅರೆವೃತ್ತಾಕಾರದ ಬಾಗಿಲುಗಳಿರುತ್ತವೆ. ಈ ಪೊಳ್ಳಿನ ಒಳ ಗೋಡೆಗಳ ಮೇಲೆ ಚಿತ್ರಗಳಿರುತ್ತವೆ. ರಾಂಪುರ(೨) ಕಳ್ಳರಗವಿ ಮತ್ತು ತೆಂಬಾದ (೮) ಚಿತ್ರ ಪಡಿ ಇಂಥ ಕಲ್ಲಾಸರೆಗಳು ಚಿತ್ರಪಡಿಯ ಇಡೀ ಭಾಗದಲ್ಲಿ ಪಕ್ಷಿಗಳು ಮಣ್ಣಿನ ಗೂಡು ಕಟ್ಟಿರುವುದರಿಂದ ಚಿತ್ರಗಳು ಗೋಚರಿಸುವುದಿಲ್ಲ. ನಾರಾಯಣಪೇಟೆಯ ಈ ರೀತಿಯ ಬಂಡೆಯ ಪೊಳ್ಳು ಎತ್ತರದಲ್ಲಿಲ್ಲ. ಮಲಗಿಕೊಂಡೇ ಮಾತ್ರ ಚಿತ್ರಗಳನ್ನು ನೋಡಬಹುದು.

**೮. ಅರೆ ವೃತ್ತಾಕಾರ (ಕಮಾನಿನಾಕಾರ) ಬಾಗಿದ ಬಂಡೆ ಆಸರೆ :** ಬಂಡೆಯೊಂದರ ಎರಡು ತುದಿಗಳು ನೆಲಕ್ಕೆ ತಾಗಿ ಮಧ್ಯ ಭಾಗದಲ್ಲಿ ಅರೆವೃತ್ತಾಕಾರದಲ್ಲಿ ಮೇಲೆದ್ದಿರುತ್ತದೆ. ಅದರ ಒಳಭಾಗದಲ್ಲಿ ಚಿತ್ರಗಳನ್ನು ಬಿಡಿಸಲಾಗುತ್ತದೆ. ಇಂಥ ಕಲ್ಲಾಸರೆಗಳು ಕೊಪ್ಪಳ (೨) ಬಿಳಿಭಾವಿ (೧) ಹಿರೇಬೆಣಕಲ್ (೮ ಮತ್ತು ೧೩)ಗಳಲ್ಲಿವೆ. ಬಿಳಿಭಾವಿಯಲ್ಲಿ ಹೆಚ್ಚು ಚಿತ್ರಗಳಿದ್ದರೆ, ಹಿರೇಬೆಣಕಲ್ಲಿನ (೧೩)ಲ್ಲಿ ಕೇವಲ ಮೂರು ಚಿತ್ರಗಳಿವೆ.

**ಬಯಲು ಬಂಡೆ ಚಿತ್ರ ನೆಲೆಗಳು :** ಬಯಲು ಬಂಡೆ ಚಿತ್ರಗಳು ಮುಖ್ಯವಾಗಿ ಪಶುಪಾಲಕರ ರಚನೆಗಳೆಂದು ಹೇಳಬಹುದು. ಅವು ಪಶುಪಾಲನೆಯ ಸಂದರ್ಭದಲ್ಲಿ ರಚಿತವಾಗಿರುವ ಸಾಧ್ಯತೆಯನ್ನು ಚಿತ್ರನೆಲೆಗಳ ಹಿನ್ನಲೆಯಲ್ಲಿ ತರ್ಕಿಸಬಹುದು.

ಕೊಪ್ಪಳ-ಹಂಪಿ ಪ್ರದೇಶಕ್ಕೆ ಸಂಬಂಧಿಸಿದಂತೆ ಬಂಡೆ ಚಿತ್ರಗಳು ಎರಡು ರೀತಿಯ ನೆಲೆಗಳಲ್ಲಿ ರಚಿತವಾಗಿರುವುದನ್ನು ಗುರುತಿಸಬಹುದು. ಅವುಗಳೆಂದರೆ ಮೊದಲನೆಯ ನೆಲೆ ನೀರು ಸಂಗ್ರಹಣೆಯ ಕೆರೆಗಳ (ನೈಸರ್ಗಿಕ) ಬದಿಯ ಬಂಡೆಗಳಲ್ಲಿ ಇರುವುದು ಉದಾಹರಣೆಗೆ ಕಮಲಾಪುರ (ವಿದ್ಯಾರಣ್ಯ) ಮತ್ತು ಬಸಾಪಟ್ಟಣ ವಿಶೇಷವೆಂದರೆ ಈ ಎರಡೂ ನೆಲೆಗಳ ಚಿತ್ರಗಳು ಒಂದೇ ಬಗೆಯಾಗಿರುವುದು (ಎತ್ತರ ಇಣಿಯ ಎತ್ತುಗಳು ಮತ್ತು ಅಶ್ವಸವಾರರ ಚಿತ್ರಗಳು)

ಎರಡನೇ ನೆಲೆಗಳು ಸುತ್ತಲೂ ಹುಲ್ಲುಗಾವಲಿದ್ದು ಮಧ್ಯದಲ್ಲಿ ಬಂಡೆಗಳ ಮೇಲೆ ರಚಿತವಾಗಿರುವುದು ಉದಾಹರಣೆಗೆ ಮಲ್ಲಾಪುರ ೧ ಮತ್ತು ೨ನೇ ನೆಲೆಗಳು ಇಲ್ಲಿ ಕೊರೆದ ಮತ್ತು ಕುಟ್ಟು ಚಿತ್ರಗಳು ಎರಡೂ ಇವೆ. ಇವು ಕಪ್ಪುಬಂಡೆಗಳು. ಕಮಲಾಪುರದ ೨ನೇ ನೆಲೆಯಲ್ಲಿ (ಒಂಟಿಕಲ್ಲು ಗುಂಡು) ವರ್ಣಚಿತ್ರದ ಜೊತೆಗೆ ಕೊರೆದ ಚಿತ್ರಗಳಿರುವುದು ವಿಶೇಷ ಇದು ಕಣಶಿಲೆಯ ಬಂಡೆಯಾಗಿದೆ.

## ೬.೨. ಚಿತ್ರರಚನಾ ಸಾಮಗ್ರಿಗಳು ಮತ್ತು ವಿಧಾನ

ಪ್ರಾಚೀನ ಜನರ ಚಿತ್ರ ರಚನಾ ತಂತ್ರ ಸಾಮಗ್ರಿಗಳು ಕುತೂಹಲದಾಯಕವಾಗಿವೆ. ಗವಿವರ್ಣ ಮತ್ತು ಬಂಡೆ ಚಿತ್ರಗಳ ರಚನೆಯಲ್ಲಿ ಬಳಕೆಯಾದ ಸಾಮಗ್ರಿಗಳನ್ನು ಆಯಾ ಚಿತ್ರ ಪ್ರಕಾರಗಳ ಸ್ವರೂಪಕ್ಕನುಗುಣವಾಗಿ ತರ್ಕಿಸಬಹುದು.

**ವರ್ಣಚಿತ್ರಗಳು**

**ಬಣ್ಣಗಳು :** ಗವಿ ಮತ್ತು ಕಲ್ಲಾಸರೆಗಳ ಚಿತ್ರಗಳನ್ನು ಬಣ್ಣಗಳಿಂದ ರಚಿಸಲಾಗಿದೆ. ವಿಶ್ವದಾದ್ಯಂತ ಪ್ರಧಾನವಾಗಿ ಕೆಮ್ಮಣ್ಣು ವರ್ಣ (Red ochre)ವನ್ನು ಬಳಸಲಾಗಿದೆ. ಫ್ರಾನ್ಸ ಮತ್ತು ಸ್ಪೇನಿನ

ಮೂರ್ ಸಾಲಾಸ್, ಅಲ್ ಮೀರಾ ನೌಸ್ಕ್ಸ್, ಲಾಸ್ಕಾಕ್ಸ್, ಇಟಲಿಯ ಲಾಪಿಲೇಟಾ, ಎಲೆಕ್ಯಾಸ್ಟಿಲೋ ಲಾ ರೋಶೇ ಬೋರ್ತಿಯಾಕ್ಸ್ , ಬ್ಲಾಂಚಾರ್ಡ್ ಮುಂತಾದ ಗವಿಗಳ ಚಿತ್ರಗಳನ್ನು ಕೆಂಪು ಕಪ್ಪು ಹಳದಿ ಕಂದು ಮುಂತಾದ ಬಣ್ಣಗಳಿಂದ ಚಿತ್ರಿಸಲಾಗಿದೆ. ಭಾರತದ ಗವಿ, ಕಲ್ಲಾಸರೆಗಳಲ್ಲಿ ಬೇರೆ ಬೇರೆ ಬಣ್ಣಗಳ ಬಳಕೆಯನ್ನು ಕಾಣಬಹುದು. ತಿಳಿಕೆಂಪು (ಹೊಸಂಗಾಬಾದ್, ಭೂಪಾಲ್, ರೈಸಿನ್) ಕೆಂಪು (ಸಾಗರ್, ಫನ್ನಾ, ಮಿರ್ಜಾಪುರ, ಆಗ್ರಾ), ಕಡುಕೆಂಪು (ಸಿಂಗನ್ ಪುರ) ಭಿಂಬೇಟ್ಕಾ IIA.೧, IIA, ೨, ಕಾನ್ಸಮದಕಲ್ ಬುಗ್ಗ (ಅ.ಪ್ರ.ಪಿಕ್ಲಿಹಾಳ, ಮಸ್ಕಿ) ಕಂದು (ಭೂಪಾಲ್ ೧೭), ಕರಿಗಂದು (ಹೊಸಂಗಾಬಾದ್ VI, ವಾರಾಣಾಸಿ) ಕಪ್ಪು (ರೈಸಿನ್, ಭೂಪಾಲ-೧೭, ಕರ್ನೂಲ್‌ನ ಬಿಲ್ಲಾಸುರಗಾಂ, ಆಗ್ರಾ), ಹಳದಿ (ಫನ್ನಾ-ಬೃಹಸ್ಪತೀಕುಂಡ, ಭೂಪಾಲ-೧೭), ಕಿತ್ತಳೆ (ಸಿಂಗನ್ ಪುರ, ಭೂಪಾಲ-೨, ರೈಸಿನ್, ಫತಾನಿ ಕಿ ಪಹಾರಿ, ಭಿಂಬೇಟ್ಕಾ IIA.೫. ಮಿರ್ಜಾಪುರ), ತಿಳಿಗಂಪಿನ ಕಿತ್ತಳೆ (ಕಾನ್ಸಮದಕಲ್ ಬುಗ್ಗ (ಆ.ಪ್ರ) ನೇರಳೆ (ರಾಯಘುರ್, ಪಾಚಮಾರಿ ಮಿರ್ಜಾಪುರ) ಹಸಿರು (ಭೂಪಾಲ್ ೨ ಸಾಗರ್, ಫನ್ನಾ, ಭಿಂಬೇಟ್ಕಾ) ಬಣ್ಣಗಳು ಬಳಕೆಯಾಗಿವೆ. ಮತ್ತು ಬಹುಮಟ್ಟಿಗೆ ಎಲ್ಲೆಡೆ ಬಿಳಿ ಬಣ್ಣದ ಚಿತ್ರಗಳನ್ನು ಕಾಣಬಹುದು.[೧]

ವಿವಿಧ ಕಾಲಘಟ್ಟಗಳಲ್ಲಿ ಬೇರೆ ಬೇರೆ ಬಣ್ಣಗಳು ಬಳಕೆಯಾಗಿರುವುದು ಕಂಡು ಬರುತ್ತದೆ. ಸೂಕ್ಷ್ಮ ಶಿಲಾಯುಗದಲ್ಲಿ ಕೆಂಪು, ಕಂದು, ಕಪ್ಪು ಬಣ್ಣಗಳು, ನವಶಿಲಾಯುಗ ಶಿಲಾತಾಮ್ರಯುಗದಲ್ಲಿ ಕೆಂಪು ಅಥವಾ ಕಂದು, ಕೆಂಪು, ಬಿಳುಪು, ತಿಳಿಹಳದಿ, ಹಳದಿಮಿಶ್ರಿತ ಬಿಳುಪು ಬಣ್ಣದ ಚಿತ್ರಗಳು ಇತಿಹಾಸ ಆರಂಭಕಾಲದಲ್ಲಿ ಕೆಂಪು ಬಿಳುಪು ಅಪರೂಪಕ್ಕೆ ಹಸಿರು ಅಥವಾ ಹಳದಿ ಬಣ್ಣಗಳು ಮಧ್ಯಕಾಲೀನ ಯುಗದಲ್ಲಿ ಬುಡಕಟ್ಟು ಚಿತ್ರಗಳು ಕೆಂಪು ಬಿಳುಪು ಕಿತ್ತಳೆ ನಂತರದಲ್ಲಿ ಕೆಂಪು ಕಂದು ಬಳಪದ ಬಣ್ಣಗಳಲ್ಲಿ ರಚಿತವಾಗಿವೆ.

ಕರ್ನಾಟಕದಲ್ಲಿ ಬಾದಾಮಿ ಹತ್ತಿರದ ಹಿರೇಗುಡ್ಡ ಮತ್ತು ಅರೆಗುಡ್ಡದ ಪ್ರಾಯಶ: ಸೂಕ್ಷ್ಮ ಶಿಲಾಯುಗದ ಚಿತ್ರಗಳಿಂದ ಹಿಡಿದು ನವಶಿಲಾ-ಶಿಲಾತಾಮ್ರಯುಗದ ಮಸ್ಕಿ, ಪಿಕ್ಲಿಹಾಳದ ಚಿತ್ರಗಳು ಕಬ್ಬಿಣ ಯುಗ ಬೃಹತ್ ಶಿಲಾಯುಗದ ಹಿರೇಬೆಣಕಲ್ ನ ಚಿತ್ರಗಳು ಹಾಗು ಇತಿಹಾಸ ಆರಂಭಕಾಲ ಮತ್ತು ಇತಿಹಾಸ ಕಾಲದಲ್ಲಿ ಪ್ರಧಾನವಾಗಿ ಕೆಮ್ಮಣ್ಣಿನ ಬಣ್ಣವನ್ನು ಬಳಸಲಾಗಿದೆ. ಬಣ್ಣದ ಛಾಯೆಯ ಕಾಲಮಾನದ ವೈಪರೀತ್ಯದಿಂದಾಗಿ ಹಾಗೂ ಇತರ ಕಾರಣಗಳಿಂದಾಗಿ ಒಂದೇ ಸಮನಾಗಿರುವುದಿಲ್ಲ. ಅಪರೂಪವಾಗಿ ಕಾಡಿಗೆ, ಕಪ್ಪು ಹಾಗೂ ಮಿಶ್ರಿತಹಳದಿ ಮುಸುಕು ಬಿಳಿಯ ದ್ವಿವರ್ಣಗಳನ್ನು ಬಳಸಲಾಗಿದೆ. ಬಾದಾಮಿಯ ೩ನೇ ಗವಿಯ ಚಿತ್ರಗಳು ದ್ವಿವರ್ಣದಲ್ಲಿವೆ.

ಮಧ್ಯಯುಗೀನ ಕಾಲದ ಚಿತ್ರಗಳು ಸುಣ್ಣದಂತಹ ಬಿಳಿಯ ಬಣ್ಣದಲ್ಲಿವೆ. ಬ್ರಹ್ಮಗಿರಿ ಮತ್ತು ಚಿತ್ರದುರ್ಗದ ಹಲವಾರು ಚಿತ್ರಗಳೂ ಬಿಳಿಯ ಬಣ್ಣದಲ್ಲಿವೆ.[೨]

ಕೊಪ್ಪಳ-ಹಂಪಿ ಪ್ರದೇಶದಲ್ಲಿ ಮುಖ್ಯವಾಗಿ ಕೆಮ್ಮಣ್ಣು ಬಣ್ಣದ ಚಿತ್ರಗಳು ಸಾಮಾನ್ಯವಾಗಿವೆ. ಜೊತೆಗೆ ದಟ್ಟಕೆಂಪು, ನೇರಳೆ ಕೆಂಪು ಮತ್ತು ಕಿತ್ತಳೆಗಂಪಿನ ಚಿತ್ರಗಳೂ ಇವೆ. ವಿರಳವಾಗಿ ಬಿಳಿಬಣ್ಣಗಳನ್ನು ಅಲ್ಲಲ್ಲಿ ಬಳಸಲಾಗಿದೆ.

**ಕೆಂಪುಬಣ್ಣ :** ಕೆಂಪುವರ್ಣ ಸಾಮಾನ್ಯವಾಗಿದ್ದು ಅದರಲ್ಲಿ ನೇರಳೆಗಂಪಿನ ಬಣ್ಣವನ್ನು ಹಿರೇಬೆಣಕಲ್ಲಿನ ೧೭ನೇ ಗವಿ ಚಿಕ್ಕಬೆಣಕಲ್ಲಿನ ಮೂರನೇ ಕಲ್ಲಾಸರೆ, ಮಲ್ಲಾಪುರದ ೬ನೇ ಕಲ್ಲಾಸರೆಗಳ (ಮಂಡಲ ಚಿತ್ರ ಮಾತ್ರ) ಚಿತ್ರ ರಚನೆಯಲ್ಲಿ ಬಳಸಲಾಗಿದೆ. ಕುಂಕುಮದಂತಹ ದಟ್ಟ ಕೆಂಪುವರ್ಣವನ್ನು ಚಿಕ್ಕರಾಂಪುರದ ೫ನೇ ಕಲ್ಲಾಸರೆ ನಾಗೇನಹಳ್ಳಿ ಮತ್ತು ತಿರುಮಲಾಪುರದ ಕಲ್ಲಾಸರೆಗಳಲ್ಲಿ ಕಿತ್ತಳೆ ಕೆಂಪುವರ್ಣವನ್ನು ಸಂಗಾಪುರದ ೮ನೇ ಕಲ್ಲಾಸರೆ ಬಿಳೇಭಾವಿಯ ೨ನೇ ಕಲ್ಲಾಸರೆ ಮತ್ತು ಆನೆಗುಂದಿಯ ೭ನೇ ಗವಿ (ಆನೆ ಚಿತ್ರ)ಗಳಲ್ಲಿ ಚಿತ್ರಕ್ಕಾಗಿ ಬಳಸಲಾಗಿದೆ.

**ಬಿಳಿಬಣ್ಣ :** ಸುಣ್ಣದಂತಹ ಬಿಳಿ ಬಣ್ಣವನ್ನು ಚಿತ್ರಗಳಿಗೆ ಬಳಸಲಾಗಿದೆ. ಆದರೆ ಇದು ಕೆಂಪು ಬಣ್ಣದಷ್ಟು ವ್ಯಾಪಕವಾಗಿ ಬಳಕೆಯಾಗಿಲ್ಲ. ಇತಿಹಾಸ ಕಾಲದಲ್ಲಿ ಇದರ ಬಳಕೆಯಾಗಿದೆ. ಹಂಪಸದುರ್ಗ (೧), ಅಗೋಲಿ (೧), ತೆಂಬಾ (೧,೨), ಕೊಪ್ಪಳ (೮), ಬಂಡಿಹರ್ಲಾಪುರ (೧, ಸಮಕಾಲೀನ)ಗಳಲ್ಲಿ ಬಿಳಿಬಣ್ಣದ ಚಿತ್ರಗಳಿವೆ. ತಿರುಮಲಾಪುರ (೧), ಎಮ್ಮಿಗುಡ್ಡ (೨), ಆನೆಗುಂದಿ (೪,೫) ಮತ್ತು ಚಿಕ್ಕರಾಂಪುರ (೩)ಗಳಲ್ಲಿ ಬಿಳಿ ಮತ್ತು ಕೆಂಪು ಬಣ್ಣದ ಚಿತ್ರಗಳು ಇವೆ.

**ದ್ವಿವರ್ಣ :** ತೀರ ವಿರಳವಾಗಿ ದ್ವಿವರ್ಣದ ಚಿತ್ರಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಕೆಂಪು-ಬಿಳಿ ಮಿಶ್ರದ ಮನುಷ್ಯ ಚಿತ್ರಗಳು ಆನೆಗುಂದಿಯ ೪ನೇ ಮತ್ತು ೮ನೇ ಕಲ್ಲಾಸರೆ ಮತ್ತು ಕೊಪ್ಪಳದ ೯ನೇ ಕಲ್ಲಾಸರೆ (ಸ್ತ್ರೀ ಚಿತ್ರ?) ಗಳಲ್ಲಿ ಇವೆ. ಇದೇ ರೀತಿ ಹಳದಿ ಮಿಶ್ರಿತ ತಿಳಿ ಬಣ್ಣದ ಗಂಡು ಹೆಣ್ಣಿನ ಚಿತ್ರ ಕೊಪ್ಪಳದ ೫ನೇ ಕಲ್ಲಾಸರೆಯಲ್ಲಿದೆ.

**ಬೂದಿ ಬಣ್ಣ :** ಮಲ್ಲಾಪುರದ ೧೩ನೇ ಕಲ್ಲಾಸರೆಯಲ್ಲಿ ಬೂದಿಬಣ್ಣದಲ್ಲಿ ಎದ್ದು ಮೂಡಿಸಿದ ಹಸ್ತಮುದ್ರೆಗಳಿವೆ.

**ಬಣ್ಣದ ತಯಾರಿಕೆ :** ಪ್ರಾಚೀನ ಜನರ ಬಣ್ಣಗಳನ್ನು ನೈಸರ್ಗಿಕವಾಗಿ ದೊರೆಯುವ ವಸ್ತುಗಳಿಂದ ವಿಶೇಷವಾಗಿ ಖನಿಜ ಶಿಲೆಗಳಿಂದ ತಯಾರಿಸಿಕೊಳ್ಳುತ್ತಿದ್ದರು. ನೇರಳೆ ಬಣ್ಣಕ್ಕಾಗಿ ಮ್ಯಾಂಗನೀಸ್

ಆಕ್ಸೈಡ್‌ನ್ನು ಕಪ್ಪುಬಣ್ಣಕ್ಕೆ ಪ್ರಾಣಿಗಳ ಎಲುಬಿನ ಮರದ ಕಾಂಡದ ಇದ್ದಿಲುಗಳನ್ನು ಹಾಗೂ ಕಲ್ಲಿದ್ದಲುಗಳನ್ನು, ಕಂದು, ಕೆಂಪು, ಹಳದಿ, ಕಿತ್ತಳೆ ಬಣ್ಣಗಳಿಗೆ ಕಬ್ಬಿಣದ ಆಕ್ಸೈಡ್‌ನ್ನು ಬಳಸುತ್ತಿದ್ದರೆಂದು ಹೇಳಲಾಗಿದೆ.[೩]

ಈ ಖನಿಜಗಳಿಗೆ ಪ್ರಾಣಿಗಳ ರಕ್ತ ಕೊಬ್ಬು ಮತ್ತು ಮೂತ್ರಗಳನ್ನು ಕೆಲವು ಸಸ್ಯರಸಗಳನ್ನು ಕಲಸಿ ಬಣ್ಣಗಳನ್ನು ಸಿದ್ಧಪಡಿಸಿಕೊಂಡಿದ್ದಾರೆ.[೪] ಕೊಪ್ಪಳ ಹಂಪಿ ಪ್ರದೇಶದ ಗವಿ ಚಿತ್ರಗಳನ್ನು (ಕೆಂಪುವರ್ಣದ) ಸ್ಥಳೀಯ ಗ್ರಾಮಾಂತರ ಜನತೆ ಸುರಮದ ಚಿತ್ರಗಳೆಂದು ಹೇಳುತ್ತಾರೆ. ಸುರಮ ಎಂಬುದು ಒಂದು ಖನಿಜ ಅದಕ್ಕೆ ವೈಜ್ಞಾನಿಕವಾಗಿ ಆಂಟಿಮನಿ ಎಂದು ಕರೆಯುತ್ತಾರೆ. ಸ್ಟಿಬೆನೈಟ್ ಎನ್ನುವುದು ಆಂಟಿಮನಿಯ ಒಂದು ಅದುರು. ಇದು ಉಕ್ಕಿನ ಅಥವಾ ಬೂದು ಬಣ್ಣದಲ್ಲಿರುವ ಮೆದುವಿನ ಖನಿಜ ಇದು ತ್ರಿಜ್ಯಾಕಾರದ ಎಳಸುಗಳಂತೆ ದೊರೆಯುತ್ತದೆ. ಇದನ್ನು ಈಗಲೂ ಬಣ್ಣಗಳ ತಯಾರಿಕೆಯಲ್ಲಿ ಬಳಸುತ್ತಾರೆ. ಈ ಸುರಮವನ್ನು ಕೆಂಪುವರ್ಣಕ್ಕಾಗಿ ಬಳಸಿರಬಹುದು. ಆಂಟಿಮನಿ ಸಲ್ಫೈಡ್ ಅದುರಿನ ಕಣಗಳು ಬಳ್ಳಾರಿ ಜಿಲ್ಲೆಯ ರಾಮನದುರ್ಗ ಪ್ರದೇಶದಲ್ಲಿ ಇರುವುದಾಗಿ ವರದಿಯಾಗಿದೆ.[೫] ಇದರ ಒಂದು ಎಳಸು ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ತೆಂಬಾದ ಅನೇ ಕಲ್ಲಾಸರೆಯಲ್ಲಿ ಮಡಕೆಚೂರುಗಳು ಮತ್ತು ಚರ್ಟಶಿಲೆಯ ಚಕ್ಕೆಗಳೊಂದಿಗೆ ದೊರೆತಿದೆ. ಇದು ತ್ರಿಜ್ಯಾಕಾರದಲ್ಲಿದ್ದು ೨ ಸೆಂ.ಮೀ ಅಳತೆಯಲ್ಲಿದೆ. ಆದರೆ ಆ ಕಲ್ಲಾಸರೆಯಲ್ಲಿ ಯಾವುದೇ ಚಿತ್ರಗಳಿಲ್ಲವಾದರೂ ಈ ಪ್ರದೇಶದ ಚಿತ್ರಗಳಿಗಾಗಿ ಸುರಮವನ್ನು ಬಳಸಿರುವ ಸಾಧ್ಯತೆ ಇದೆ. ಅಲ್ಲದೇ ಬೆಟ್ಟಗಳಲ್ಲಿ ಅಲ್ಲಲ್ಲಿ ಕೆಮ್ಮಣ್ಣಿನ ಹಳದಿ ಬಣ್ಣದ ಮಟ್ಟಿಗಳಿವೆ. ಈಗಲೂ ಹಳ್ಳಿಯ ಜನ ಹಬ್ಬ ಉತ್ಸವಗಳ ಸಂದರ್ಭದಲ್ಲಿ ಮನೆ ಗುಡಿಸಲುಗಳನ್ನು ಸಾರಿಸಿ ಅಲಂಕರಿಸಲು ಇಂಥ ಮಟ್ಟಿಯ ಮಣ್ಣನ್ನು ಬಳಸುತ್ತಾರೆ. ಪ್ರಾಚೀನ ಕಾಲದಲ್ಲೂ ಈ ಮಣ್ಣುಗಳನ್ನು ಬಣ್ಣಕ್ಕಾಗಿ ಬಳಸಿದ್ದಾರೆಂದು ತರ್ಕಿಸಬಹುದು. ಕೆಲವು ಹಳ್ಳಿಯ ಜನ ಈ ಚಿತ್ರಗಳನ್ನು ಹೆಣ್ಣಿನ ಹೆರಿಗೆ ಸಮಯದ ರಕ್ತವನ್ನು ಕೆಮ್ಮಣ್ಣಿಗೆ ಬೆರೆಸಿ ತಯಾರಿಸಿ ಕೆಂಬಣ್ಣದಿಂದ ಬರೆಯಲಾಗಿದೆ ಎಂದು ಹೇಳುತ್ತಾರೆ. ಹಂಪಿ ಮಲ್ಲಾಪುರಗಳಲ್ಲಿ ಮೈ ಮೇಲೆ ಗೆರೆಗಳಿರುವ ವ್ಯಕ್ತಿಗಳ ನಗ್ನ ಚಿತ್ರಗಳಿವೆ. ಇವರಲ್ಲಿ ಗರ್ಭಿಣಿ ಸ್ತ್ರೀಯರು ಇರುವುದುಂಟು. ಇವು ಒಂದು ರೀತಿಯ ಮಾಂತ್ರಿಕ ಕಟ್ಟಳೆಗೆ ಸಂಬಂಧಿಸಿದ ಚಿತ್ರಗಳೆಂದು ತೋರುತ್ತವೆ. ಇಂಥ ಚಿತ್ರಗಳನ್ನು ಮೇಲೆ ಹೇಳಿದ ರಕ್ತ ಬಳಸಿ ಬಿಡಿಸಿರಬಹುದಾದ ಸಾಧ್ಯತೆ ಇದೆ. ಬಿಳಿ ಬಣ್ಣಕ್ಕಾಗಿ ಸುಣ್ಣವನ್ನು (ಸುಣ್ಣದ ಕಲ್ಲು) ಬಳಸಲಾಗಿದೆ. ಸುಣ್ಣದಲ್ಲಿ ಬೂದಿಯನ್ನು ಬೆರೆಸಿ ಕೆಲವು ಚಿತ್ರಗಳನ್ನು ಬಿಡಿಸಲಾಗಿದೆ. ಟಾಲ್ಕ್ ಎಂದು ಕರೆಯುವ ಒಂದು ರೀತಿಯ ಮೆದು ಬಿಳಿ

ಶಿಲೆಯು ಈ ಪ್ರದೇಶದಲ್ಲಿ ಅಲ್ಲಲ್ಲಿ ದೊರೆಯುತ್ತದೆ. ಅದನ್ನು ಬಿಳಿ ಬಣ್ಣಕ್ಕಾಗಿ ಬಳಸಿರುವ ಸಾಧ್ಯತೆಯು ಇದೆ.

**ಕುಂಚಗಳು :** ಬಣ್ಣದ ದ್ರವದಲ್ಲಿ ಅದ್ದಿ ಬರೆಯಲು ಪ್ರಾಚೀನ ಜನರ ಒಂದು ರೀತಿಯ ಕುಂಚಗಳನ್ನು ಮಾಡಿಕೊಳ್ಳುತ್ತಿದ್ದರು. ಗಿಡದ ರೆಂಬೆಯ ತುದಿಯನ್ನು ಸರಿಯಾಗಿ ಜಜ್ಜಿ ತೊಗಟೆಯು ಹೋಗುವಂತೆ ಮಾಡಿ ಕೂದಲಿನಂತಹ ನಾರುಗಳನ್ನು ಬಿಡಿಸಿ ಅದನ್ನು ಕುಂಚದಂತೆ ಬಣ್ಣದ ರೇಖೆಗಳನ್ನು ಎಳೆಯಲು ಉಪಯೋಗಿಸಿದ್ದಿರಬೇಕು.[೬] ಚಿತ್ರಗಳ ಪ್ರಮಾಣಕ್ಕನುಗುಣವಾಗಿ ಬೇರೆ ಬೇರೆ ಅಳತೆಯ ಕುಂಚಗಳನ್ನು ಮಾಡಿಕೊಳ್ಳುತ್ತಿದ್ದರು. ಹಿರೇಬೆಣಕಲ್ಲಿನ ೧೭ನೇ ಗವಿಯ ಚಿತ್ರಗಳ ರೇಖೆಗಳು ಸುಮಾರು ಮೂರು ಸೆಂ.ಮೀ ದಪ್ಪವಿದ್ದು, ಆ ಅಳತೆಯ ಕುಂಚಗಳಿಂದ ಹಿಡಿದು ಸುಮಾರು ೧/೨ ಸೆಂ.ಮೀ ವರೆಗಿನ ದಪ್ಪದ ಕುಂಚಗಳನ್ನು ಮಾಡಿಕೊಂಡಿರಬೇಕು. ಅರ್ಧ ಸೆಂ.ಮೀ ಒಳಗಿನ ಚಿತ್ರಗಳಿಗಾಗಿ ಕಡ್ಡಿಗಳ ಇಲ್ಲವೇ ಪಕ್ಷಿಗಳ ಪುಕ್ಕದ ಕಡ್ಡಿಯನ್ನು ತುದಿಯಲ್ಲಿ ಸ್ವಲ್ಪ ಜಜ್ಜಿ ಕುಂಚಗಳನ್ನು ಮಾಡಿಕೊಂಡಿರಬೇಕೆನಿಸುತ್ತದೆ. ಹಿರೇಬೆನಕಲ್ಲಿನ ೧,೧೧, ಮತ್ತು ೧೨ನೇ ಗವಿಗಳ, ಚಿಕ್ಕರಾಂಪುರದ ೧ನೇ ಗವಿಯ ಚಿತ್ರಗಳ ಗುಂಪಿನಲ್ಲಿರುವ ಸಣ್ಣ ಸಣ್ಣ ನಾಯಿ, ಮನುಷ್ಯ, ನವಿಲುಗಳ ಚಿತ್ರಗಳನ್ನು ಇಂಥ ಕುಂಚಗಳಿಂದ ಮಾತ್ರ ರಚಿಸಲು ಸಾಧ್ಯ. ಹಾಗೆ ಕೆಲವು ವ್ಯಕ್ತಿಚಿತ್ರಗಳ ತಲೆಯ ಸುತ್ತಲೂ ಹರಡಿದ ಕೂದಲುಗಳನ್ನು ತೋರಿಸಲಾಗಿದೆ. ಇವುಗಳನ್ನು ಬಿಡಿಸಲು ಕಡ್ಡಿಗಳನ್ನು ಬಳಸಿಕೊಂಡಿರಬೇಕು.

ಹಿರೇಬೆಣಕಲ್ಲಿನ ೧, ೬,೧೧,೧೨ ಚಿಕ್ಕರಾಂಪುರದ ೧ನೇ ಗವಿಯ ಚಿತ್ರ ಫಲಕದಲ್ಲಿ ದೊಡ್ಡ, ಮಧ್ಯಮ, ಚಿಕ್ಕ ಮತ್ತು ಸೂಕ್ಷ್ಮ ಪ್ರಮಾಣದ ಛಾಯಾ ಹಾಗೂ ಬಾಹ್ಯರೇಖಾ ಚಿತ್ರಗಳಿವೆ. ಇಂಥ ಚಿತ್ರಫಲಕದ ರಚನೆಗಾಗಿ ಹಲವು ಅಳತೆಯ ಕುಂಚಗಳು ಅವಶ್ಯವಾಗಿರುತ್ತವೆ. ಹಾಗಾಗಿ ಏಕಕಾಲದಲ್ಲಿ ಅವುಗಳನ್ನು ಸಿದ್ಧಮಾಡಿಕೊಂಡು ಚಿತ್ರರಚನೆಯಲ್ಲಿ ತೊಡಗುತ್ತಿದ್ದರೆಂದು ತರ್ಕಿಸಬಹುದು. ಸಿದ್ಧವಾದ ವರ್ಣವನ್ನು ಮಡಕೆಯ ಪಾತ್ರೆಯಲ್ಲಿ ಹಾಕಿಕೊಂಡು ಅದರಲ್ಲಿ ಕುಂಚಗಳನ್ನು ಅದ್ದಿಕೊಂಡು ಚಿತ್ರ ಬಿಡಿಸುತ್ತಿದ್ದರು. ಹಿರೇಬೆಣಕಲ್ಲಿನ ೧ನೇ ಕಲ್ಲಾಸರೆಯು ಒಂದು ಬೃಹತ್ ಬಂಡೆಯಾಗಿದ್ದು, ಅದರ ಪೂರ್ವಬದಿಯ ಮುಖದಲ್ಲಿ ಚಿತ್ರಗಳಿವೆ. ದೊಡ್ಡ ಬಂಡೆಯ ಮುಂದೆ ಮತ್ತೊಂದು ಚಿಕ್ಕ ಗುಂಡು ಇದೆ. ಅದರ ಮೇಲ್ಭಾಗ ಸಮವಾಗಿದ್ದು, ಅದರ ಮೇಲೆ ನಿಂತು ಚಿತ್ರಗಳನ್ನು ಬಿಡಿಸಲಾಗಿದೆ. ಹಾಗೂ ಆ ಗುಂಡಿನ ಮಧ್ಯದಲ್ಲಿ ಆಳವಲ್ಲದ ಸುಮಾರು ೨೦ ಸೆಂ.ಮೀ ವ್ಯಾಸದ ಒಂದು ಕುಳಿ ಇದೆ. ಇಡೀ ಬಂಡೆಯಲ್ಲಿ ಕುಳಿ ಮಾತ್ರ ಕೆಂಪುವರ್ಣದಲ್ಲಿದೆ. (ಛಾಯಾಚಿತ್ರ ಸಂಖ್ಯೆ ೭೨) ಅದರ ಬಣ್ಣ ಮತ್ತು ಬೃಹತ್ ಬಂಡೆಯ ಚಿತ್ರಗಳ ಬಣ್ಣ ಒಂದೇ ಆಗಿದೆ. ಇದರಿಂದ ಸ್ಪಷ್ಟವಾಗುವ

ಸಂಗತಿಯೆಂದರೆ, ಕೆಲವು ಸಲ ಚಿತ್ರಗಳನ್ನು ಬಿಡಿಸುವಾಗ ನಿಲ್ಲುವ ಗುಂಡಿನ ಮೇಲೆ(ಕುಳಿಯಲ್ಲಿ) ಬಣ್ಣವನ್ನು ಸುರುವಿಕೊಂಡು ಕೂಡ ಚಿತ್ರಗಳನ್ನು ಬಿಡಿಸುತ್ತಿರೆಂದು ಸ್ಪಷ್ಟವಾಗುತ್ತದೆ.

**ಹಸ್ತಗಳು :** ತನ್ನ ಕೈಯ ಹಸ್ತವನ್ನು ಕೂಡ ಚಿತ್ರರಚನಾ ಸಾಮಗ್ರಿಯಾಗಿ ಪ್ರಾಚೀನ ಮಾನವ ಉಪಯೋಗಿಸಿದ್ದಾನೆ. ಹಸ್ತದ ಚಿತ್ರಗಳನ್ನು ಬಿಡಿಸಬೇಕಾದ ಸಂದರ್ಭದಲ್ಲಿ ತನ್ನ ಹಸ್ತಗಳನ್ನು ಬಣ್ಣದ ದ್ರಾವಣದಲ್ಲಿ ಅದ್ದಿ ನೇರವಾಗಿ ಗೋಡೆಗೆ ಮುದ್ರೆ ಒತ್ತಿ ಚಿತ್ರಗಳನ್ನು ಮೂಡಿಸುತ್ತಿದ್ದನು. ಇಂಥ ಹಸ್ತಮುದ್ರಿಕೆಗಳು ತಾಮ್ರಯುಗದ ನವಶಿಲಾಸಂಸ್ಕೃತಿ ಮತ್ತು ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ನೆಲೆಯಾದ ಅಗೋಲಿಯಲ್ಲಿ ಕೆಂಪು ವರ್ಣದಲ್ಲಿದೆ. ಈಗಲೂ ಈ ಪ್ರದೇಶದಲ್ಲಿ ಮದುವೆಯ ಸಂದರ್ಭದಲ್ಲಿ ಮನೆಯ ಸುತ್ತ ಹಸ್ತಮುದ್ರಿಕೆಗಳನ್ನು (ಚಟ್ಟು ಬಡಿಯುವುದು) ಇದೇ ಪ್ರಕಾರದಲ್ಲಿ ಹಾಕುತ್ತಾರೆ.

**ಮರದ ಎಲೆ ಅಥವಾ ಚರ್ಮ :** ಹಿರೇಬೆಣಕಲ್ಲಿನ ೧೧ನೇ ಗವಿಯಲ್ಲಿ ಮತ್ತು ಹೊಸ ಬಂಡಿಹರ್ಲಾಪುರದ ೧ನೇ ಕಲ್ಲಾಸರೆಯಲ್ಲಿ ಜಿಂಕೆಗಳ ಸಾಲು ಚಿತ್ರಗಳಿವೆ. ಸಾಲಿನ ಪ್ರತಿಯೊಂದು ಜಿಂಕೆಯು ಒಂದೇ ಪ್ರಮಾಣ ಮತ್ತು ರೀತಿಯಲ್ಲಿವೆ. ಇಂಥ ಚಿತ್ರಗಳನ್ನು ಮರದ ದಪ್ಪ ಎಲೆಯಲ್ಲಿಯೋ, ಚರ್ಮದಲ್ಲಿಯೋ, ಚಿತ್ರವನ್ನು ಕತ್ತರಿಸಿಕೊಂಡು ಅದನ್ನು ಬಂಡೆಯ ಮೇಲಿಟ್ಟು ಕತ್ತರಿಸಿದ ಭಾಗದಲ್ಲಿ ಬಣ್ಣವನ್ನು ತುಂಬುತ್ತಿದ್ದರಬೇಕೆಂದು ಡಾ.ಅ.ಸುಂದರವರು ಅಭಿಪ್ರಾಯಪಟ್ಟಿದ್ದಾರೆ. ಚಿತ್ರಗಳು ಅಷ್ಟು ಸರಿಯಾಗಿ ಒಂದೇ ಪ್ರಕಾರದಲ್ಲಿ ಇರುವುದರಿಂದ ಅವರ ಅಭಿಪ್ರಾಯ ಸಮಂಜಸವೆನ್ನಬಹುದು.

**ಬೆರಳುಗಳು :** ಈಚಿನ ಕಾಲದ ಕೆಲವು ಬಿಳಿಬಣ್ಣದ ಚಿತ್ರಗಳಲ್ಲಿ ಬೆರಳಿನ ರೇಖೆಗಳೂ ಮೂಡಿರುವುದರಿಂದ ಬೆರಳುಗಳಿಂದಲೂ ರೇಖೆಗಳನ್ನು ಎಳೆಯಲಾಗುತ್ತಿತ್ತೆಂದು ತಿಳಿಯಬಹುದು. ವಿಶೇಷವಾಗಿ ಕಡ್ಡಿಯಾಕಾರದ ಸಣ್ಣ ಮನುಷ್ಯಾಕೃತಿಗಳನ್ನು ಬೆರಳುಗಳಿಂದ ಮೂಡಿಸಲಾಗಿದೆ. ಇಂಥ ಚಿತ್ರಗಳು ತೆಂಬಾದ ೧,೨ ಹಂಪಸದುರ್ಗ ೧, ಎಮ್ಮಿಗುಡ್ಡ ೨ ಮತ್ತು ತಿರುಮಲಾಪುರದ ಕಲ್ಲಾಸರೆಗಳಲ್ಲಿವೆ.

ಹಿರೇಬೆಣಕಲ್ (೨ನೇ ಕಲ್ಲಾಸರೆ), ಗಡ್ಡಿ (೧) ನಾರಾಯಣಪೇಟೆ(೧) ಮತ್ತು ಚಿಕ್ಕರಾಂಪುರ (೫)ದ ಕಲ್ಲಾಸರೆಗಳ ಚಿತ್ರಿತ ಸ್ಥಳಗಳು ನೆಲದಿಂದ ಸುಮಾರು ೮ ರಿಂದ ೧೦ ಮೀಟರ್ ಎತ್ತರದಲ್ಲಿವೆ. ಇಂಥ ಎಡೆಗಳಲ್ಲಿ ಚಿತ್ರಗಳನ್ನು ಬಿಡಿಸುವಾಗ ಪ್ರಾಯಶ: ಅಟ್ಟಣಿಗೆಗಳನ್ನು ಕಟ್ಟಿಕೊಂಡಿರಬೇಕೆಂದು ತರ್ಕಿಸಬಹುದು.

**ಬಂಡೆ ಚಿತ್ರಗಳ ಉಪಕರಣಗಳು :** ಬಂಡೆ ಚಿತ್ರಗಳಲ್ಲಿ ಕೊರೆದ, ಕುಟ್ಟಿದ, ಚಿಕ್ಕ ಕುಳಿಯ ಹಾಗೂ ತಿರುಗುಳಿ (Cup marks) ಗಳು ಕಂಡುಬಂದಿವೆ. ಇಂಥ ಚಿತ್ರಗಳನ್ನು ಕೊರೆಯಲು ಲೋಹದ ಉಳಿ

ಇಲ್ಲವೇ ಗಟ್ಟಿಶಿಲೆಯ ದಪ್ಪಚೂಪಾದ ಆಯುಧಗಳನ್ನು ಬಳಸಿದ್ದಾರೆಂದು ಹೇಳಬಹುದು. ಸಣ್ಣ ಸಣ್ಣ ಕುಳಿಗಳನ್ನು ಒಂದರ ಪಕ್ಕ ಒಂದರಂತೆ ಹಾಕಿ ಕೆಲವು ಚಿತ್ರಗಳನ್ನು ಮೂಡಿಸಲಾಗಿದೆ. ಅಂಥವನ್ನುಕೂಡ ಲೋಹದ ಆಯುಧದಿಂದ ಮೂಡಿಸಿರಬಹುದು. ತಿರುಗುಳಿಗಳನ್ನು ಚೂಪಾದ ಉಳಿಯಂತಹ ಉಪಕರಣದಿಂದ ಸತತವಾಗಿ ಒಂದೇ ಕಡೆ ತಿರುಗಿಸಿ ಮೂಡಿಸಲಾಗಿದೆ.

## ೬.೩. ಚಿತ್ರಗಳ ಶೈಲಿ ಮತ್ತು ಪ್ರಮಾಣ

ಪ್ರಾಗಿತಿಹಾಸ ಕಾಲದ ಚಿತ್ರಗಳು ಮೊದಲ ನೋಟಕ್ಕೆ ಚಿಕ್ಕಮಕ್ಕಳ ರಚನೆಗಳಂತೆ ತೋರಿದರೂ, ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಅವು ಶೈಲಿ, ಭಾವ ಮತ್ತು ಭಂಗಿಯ ದೃಷ್ಟಿಯಿಂದ ಸಮರ್ಥವಾದ ರಚನೆಗಳೆಂದು ತಿಳಿಯುತ್ತದೆ. ಚಿತ್ರಗಳಲ್ಲಿ ಕೇವಲ ಆಕೃತಿಯಷ್ಟೆ ಮುಖ್ಯವಾಗಿಲ್ಲ. ಜೀವಂತಿಕೆ ಎದ್ದು ಕಾಣುತ್ತದೆ. ಮನುಷ್ಯ ಮತ್ತು ಪ್ರಾಣಿಯ ಬಿಡಿ ಚಿತ್ರಗಳಾಗಲಿ, ನೃತ್ಯ ಬೇಟೆ ಮುಂತಾದ ದೃಶ್ಯ ಚಿತ್ರಗಳಾಗಲಿ ಅವುಗಳ ರಚನಾ ಉದ್ದೇಶ ಸಶಕ್ತವಾಗಿ ಚಿತ್ರಗಳಲ್ಲಿ ಬಿಂಬಿತವಾಗಿದೆ. ಸಾಮಾನ್ಯವಾಗಿ ಕಣ್ಣು, ಮೂಗು, ಬಾಯಿ, ಕಿವಿ, ಹಸ್ತ, ಪಾದಗಳಂತಹ ಸೂಕ್ಷ್ಮ ಅಂಗಗಳ ರಚನೆಯ ಗೋಜಿಗೆ ಪ್ರಾಗಿತಿಹಾಸ ಕಾಲದ ಕಲಾವಿದ ಹೋಗದೆ ಇದ್ದರೂ ಚಿತ್ರಗಳು ಭಾವ ಪ್ರಧಾನವಾಗಿವೆ ಎಂದು ಹೇಳಬಹುದು. ಕೇವಲ ಬಾಹ್ಯ ರೇಖಾ ಇಲ್ಲವೇ ಛಾಯಾರೂಪದಲ್ಲೇ ಅವನು ಚಿತ್ರಗಳಿಗೆ ಜೀವಂತಿಕೆಯನ್ನು ತುಂಬಿದ್ದಾನೆ ಎನ್ನಬಹುದು. ಎಲ್ಲ ಚಿತ್ರಗಳು ಈ ದೃಷ್ಟಿಯಿಂದ ಉತ್ತಮ ರಚನೆಗಳೆಂದು ಹೇಳಲಾಗದು. ಆದರೆ ಕೆಲವಂತೂ ರಚನಾ ಶೈಲಿಯ ದೃಷ್ಟಿಯಿಂದ ಉತ್ತಮ ಮಟ್ಟದ್ದಾಗಿವೆ. ಕೊಪ್ಪಳ-ಹಂಪಿ ಪ್ರದೇಶದ ಕೆಲವು ಚಿತ್ರಗಳ ಶೈಲಿಯನ್ನು ಈ ಮುಂದಿನಂತೆ ಗುರುತಿಸಬಹುದು.

**ಮನುಷ್ಯ ಚಿತ್ರಗಳು :** ಅನೇಕ ಬಿಡಿ ಇಲ್ಲವೇ ಸಮೂಹದ ಮನುಷ್ಯ ಚಿತ್ರಗಳಿರುವುದನ್ನು ನಾವು ಈಗಾಗಲೇ ಗಮನಿಸಿದ್ದೇವೆ. ಮನುಷ್ಯ ಚಿತ್ರಗಳಲ್ಲಿ ಕೆಲವು ಶೈಲಿಯ ದೃಷ್ಟಿಯಿಂದ ಕ್ರಿಯಾಶಿಲತೆಯನ್ನು ಬಿಂಬಿಸುವಲ್ಲಿ ಸಮರ್ಥವಾಗಿವೆ ಎಂದು ಗುರುತಿಸಬಹುದು.

ರಾಂಪುರದ ೧ನೇ ಕಲ್ಲಾಸರೆಯಲ್ಲಿರುವ ನಿಂತ ಮನುಷ್ಯನ ಚಿತ್ರ ಒಂದು ಅಪೂರ್ವ ಸೃಷ್ಟಿ. ದುರಾದೃಷ್ಟವಶಾತ್ ಅದರ ಕೆಳಭಾಗ ಮಳೆಗೆ ಸಿಲುಕಿ ಬಹಳಷ್ಟು ಮಾಸಿಹೋಗಿದೆ. ಚಿತ್ರ ಛಾಯಾರೂಪದ್ದು. ಕಲಾವಿದನಿಗೆ ದೇಹದ ರಚನೆಯ ಸ್ಪಷ್ಟ ಪರಿಕಲ್ಪನೆ ಇದೆ. ಅಗಲವಾದ ಭುಜ, ತೆಳುವಾದ ಸೊಂಟ, ಅಗಲ ಅಷ್ಟೆ ಸಹಜವಾದ ಪುಷ್ಠ ಎಲ್ಲವೂ ಪ್ರಮಾಣಬದ್ಧವೆನಿಸುತ್ತವೆ. ಬಲಗೈ

ಭುಜದ ಸಮಾನಾಂತರದಲ್ಲಿ ಮುಂಚಾಚಿದೆ. ಎಡಗೈ ಸ್ವಲ್ಪ ಕೆಳಕ್ಕಿಳಿಸಿ ಮೊಣಕೈಯಿಂದ ಉಳಿದ ಭಾಗವನ್ನು ಪಕ್ಕಕ್ಕೆ ಎತ್ತಿ ಹಿಡಿದಿದೆ. ತೋಳು ದಪ್ಪವಾಗಿದ್ದು, ಮೊಣಕೈವರೆಗೆ ಕಿರಿದಾಗಿ ಮುಂದೆ ಸಹಜವಾಗಿದೆ. ಹಸ್ತ ಮತ್ತು ಬೆರಳುಗಳು ಅತ್ಯಂತ ಸಹಜವಾಗಿವೆ. ಕೊರಳಲ್ಲಿ ಸರದಂತಹ ಆಭರಣವಿರುವುದು ಗಮನಾರ್ಹ. ಸರವನ್ನು ತೋರಿಸಿರುವ ರೀತಿಯು ವಿಶೇಷವಾಗಿದೆ. ಕಂಠ ಮತ್ತು ಎದೆ ಭಾಗವನ್ನು ಜೋಡಿಸದೇ ಖಾಲಿಬಿಟ್ಟು ಅಲ್ಲಿ ಸರವನ್ನು ತೋರಿಸಲಾಗಿದೆ. ಸರಕ್ಕೆ ಸುತ್ತಲೂ ತ್ರಿಕೋನಾಕಾರದ ಆರು ಎಸಳುಗಳಿವೆ. ಇವೆಲ್ಲವನ್ನು ಕೇವಲ ಬಾಹ್ಯ ರೇಖೆಯಲ್ಲಿ ತೋರಿಸಿ ಆಭರಣ ಧರಿಸುವಿಕೆಯ ಸೌಂದರ್ಯವನ್ನು ಸಹಜವಾಗಿರಿಸಲಾಗಿದೆ. ಇದಕ್ಕೆ ಪಾದಗಳಿದ್ದವೋ ಇಲ್ಲವೋ ತಿಳಿಯುವುದಿಲ್ಲ. ಮುಖ ವಾನರಸಂತಿದ್ದು, ಇದೊಂದು ಅಪರೂಪದ ಚಿತ್ರವಾಗಿದೆ. ಇದೇ ರೀತಿಯ ಚಿತ್ರಗಳು ಆನೆಗುಂದಿ (೨) ಮತ್ತು ಗೂಗಿ ಬಂಡೆಯಲ್ಲಿದ್ದು ಅವು ಕ್ರಮವಾಗಿ ಮಾಸಿ, ಪುನರ್ ತಿದ್ದುವಿಕೆಗೆ ಒಳಗಾಗಿವೆ. ಆನೆಗುಂದಿಯನ್ನು ವಾನರ ರಾಜ್ಯ ಕಿಷ್ಕಿಂದೆ ಎಂದು ನಂಬಲಾಗಿದ್ದು, ಅದರ ಹಿನ್ನೆಲೆಯಲ್ಲಿ ಈ ವಾನರ ರೀತಿಯ ಚಿತ್ರಗಳು ಗಮನಾರ್ಹವಾಗಿವೆ.

ಸಂಗಾಪುರದ ಮೂರನೆಯ ಕಲ್ಲಾಸರೆಯಲ್ಲಿ ಪಶುವಿನ ಹಿಂದೆ (ಪ್ರಾಯಶ: ಹೊಡೆದುಕೊಂಡು ಹೊರಟಿರುವ) ಒಬ್ಬ ಮನುಷ್ಯನ ಚಿತ್ರವಿದೆ. ದೇಹ ದ್ವಿತ್ರಿಕೋನಾಕಾರ ಶೈಲಿಯಲ್ಲಿದೆ. ದೇಹದ ಆಂಗೀಕ ರಚನೆಯ ಬಗ್ಗೆ ಮೊದಲಿನ ಚಿತ್ರದ ಕಲಾವಿದನಷ್ಟು ಈ ಚಿತ್ರದ ರಚನಕಾರ ನಿಖರನಾಗಿಲ್ಲ. ಕೈ ಕಾಲುಗಳು ಕೇವಲ ಸಾಂಕೇತಿಕ ಮಾತ್ರ. ಆದರೂ ಈ ಚಿತ್ರ ಒಂದು ಕ್ರಿಯೆಯನ್ನು ಸ್ಪಷ್ಟವಾಗಿ ನಿದರ್ಶಿಸುತ್ತದೆ. ಇಲ್ಲಿ ವ್ಯಕ್ತಿ ಪಶುವನ್ನು ತೆಗೆದುಕೊಂಡು ಹೊರಟಿದ್ದು ಅವನ ಚಿತ್ರ ಕೇವಲ ಆಕೃತಿಯಾಗದೇ ನಡಿಗೆಯ ಚಲನಶೀಲತೆಯನ್ನು ಅಭಿವ್ಯಕ್ತಿಸುತ್ತದೆ. ನಡೆಯುವಾಗ ಮುಂದಿನ ಕಾಲನ್ನು ಊರಿ ಹಿಂದಿನ ಕಾಲನ್ನು ಮೇಲಕ್ಕೆತ್ತಿರುವ ಭಂಗಿ ತುಂಬ ಸಹಜವಾಗಿದೆ. ದೇಹವು ಕೂಡ ಆ ಭಂಗಿಗೆ ಪೂರಕವಾಗಿದೆ. ಕಟಿಯಿಂದ ಎದೆ, ಭುಜದ ಭಾಗ ಕೆಳ ದೇಹಕ್ಕಿಂತ ಸ್ವಲ್ಪ ಮುಂದಕ್ಕೆ ಬಾಗಿದಂತೆ ರಚಿತವಾಗಿದೆ. ಇಲ್ಲಿ ಚಿತ್ರದ ರಚನಾಕಾರನಿಗೆ ಭಂಗಿಗಳ ಬಗೆಗೆ ಕಲ್ಪನೆ ಇದ್ದು, ಅದನ್ನು ಚಿತ್ರದಲ್ಲಿ ಮೂಡಿಸುವ ಪ್ರಯತ್ನ ಮಾಡಿದ್ದಾನೆ ಎನ್ನಬಹುದು. ಇದರಂತೆ ತೆಂಬಾದ ೪ನೇ ಕಲ್ಲಾಸರೆ ಮತ್ತು ಚಿಕ್ಕರಾಂಪುರದ ೧ನೇ ಗವಿಯ ಪಶುಪಾಲಕ ಮನುಷ್ಯ ಚಿತ್ರಗಳು ಚಲನಶೀಲ ಅಂಶದಿಂದ ಗಮನ ಸೆಳೆಯುತ್ತವೆ. ಕೈಯಲ್ಲಿ ಉದ್ದವಾದ ಕೋಲು ಅಥವಾ ಭರ್ಚಿಯನ್ನು ಹಿಡಿದುಕೊಂಡು ಪಶುಗಳನ್ನು ತೆಗೆದುಕೊಂಡು ಹೊರಟಿರುವ ಮನುಷ್ಯನ ಚಿತ್ರ (ಚಿಕ್ಕರಾಂಪುರ) ಅತ್ಯಂತ ಸಹಜವಾಗಿದೆ. ಹಿಂದಿನ ಕಾಲು ಎತ್ತಿದ ಭಂಗಿಯಲ್ಲಿದ್ದು, ಓಟದ ಶೈಲಿಯನ್ನು ತುಂಬಾ ಸಮರ್ಥವಾಗಿ ಬಿಂಬಿಸುತ್ತದೆನ್ನಬಹುದು.

ಮನುಷ್ಯ ಚಿತ್ರಗಳಲ್ಲಿ ಪುರುಷ-ಸ್ತ್ರೀ ಚಿತ್ರಗಳನ್ನು ಸ್ಪಷ್ಟವಾಗಿ ಗುರುತಿಸುವಂತೆ ಆ ಕಾಲದ ಚಿತ್ರ ರಚನೆಕಾರ ಯೋಚಿಸಿದ ರೀತಿ ಅಪೂರ್ವವಾಗಿದೆ. ಮಲ್ಲಾಪುರ, ಹಂಪಿ, ಹಿರೇಬೆಣಕಲ್, ಚಿಕ್ಕಬೆಣಕಲ್‌ಗಳ ಕೆಲವು ಗವಿ ಕಲ್ಲಾಸರೆಗಳಲ್ಲಿ ಮೈಮೇಲೆ ಗೆರೆಗಳನ್ನು ಹಾಕಿಕೊಂಡು ನಗ್ನರಾಗಿ ಕುಣಿಯುತ್ತಿರುವ ಮನುಷ್ಯ ಚಿತ್ರಗಳಿವೆ. ಇವುಗಳಲ್ಲಿ ಪುರುಷ ಹಾಗೂ ಸ್ತ್ರೀಯರಿದ್ದಾರೆ. ಸ್ತ್ರೀ ಪುರುಷರನ್ನು ಸ್ಪಷ್ಟವಾಗಿ ಗುರುತಿಸಬಹುದಾದ ರೀತಿಯಲ್ಲಿ ದೇಹದ ರಚನೆ ಇದೆ. ಪುರುಷ ನಗ್ನನಾಗಿ ಕುಣಿಯುತ್ತಿದ್ದಾನೆ ಎಂದು ತೋರಿಸುವ ಕ್ರಮ ತುಂಬ ಸರಳ. ಎರಡೂ ಕೈಗಳನ್ನು ಮೇಲೆಕ್ಕೆತ್ತಿ, ಕಾಲುಗಳನ್ನು ಅಗಲಿಸಿದ ಭಂಗಿಯ ವ್ಯಕ್ತಿ ಚಿತ್ರದಲ್ಲಿ ಕಾಲುಗಳ ನಡುವೆ ಶಿಶ್ನವನ್ನು (ಸಾಂಕೇಂತಿಕ)ತೋರಿಸಿದರಾಯ್ತು. ಆದರೆ ಈ ವಿಧಾನದ ಮೂಲಕ ನಗ್ನ ಸ್ತ್ರೀಯನ್ನು ಸಂಕೇತಿಸಲು ಸಾಧ್ಯವಿಲ್ಲ. ಅದಕ್ಕಾಗಿ ಸ್ತ್ರೀಯನ್ನು ಪಾರ್ಶ್ವಭಂಗಿಯಲ್ಲಿ ಚಿತ್ರಿಸಲಾಗಿದೆ. ಇದರಿಂದ ಸಹಜವಾಗಿ ಅವಳ ಸ್ತನಗಳನ್ನು ತೋರಿಸಬಹುದು. ಇಂಥ ಚಿತ್ರಗಳು ಮಲ್ಲಾಪುರದ ಖಾನಸಾಬನ ಗವಿ(೩) ಹಿರೇಬೆಣಕಲ್ಲಿನ ರಕ್ಕಸಕುಟ್ರಿ, (ಕಲ್ಲಾಸರೆ -೨), ಹಂಪಿಯ ಭರಮದೇವರ ಗುಂಡು(೫)ಗಳಲ್ಲಿವೆ.ನಾರಾಯಣಪೇಟೆಯ ಸ್ತ್ರೀಚಿತ್ರ ಮತ್ತೊಂದು ರೀತಿಯ ಅಭಿವ್ಯಕ್ತಿ. ಕಾಲುಗಳನ್ನು ಅಗಲಿಸಿ ನಿಂತಿರುವ ವ್ಯಕ್ತಿ ಸ್ತ್ರೀ ಎಂಬುದಕ್ಕೆ ಅವಳ ಯೋನಿ ಭಾಗವನ್ನು ತ್ರಿಕೋನಾಕಾರದಲ್ಲಿ ಸ್ವಲ್ಪ ಕೆಳಕ್ಕೆ ತೋರಿಸಿ ಸಂಕೇತಿಸಲಾಗಿದೆ. ನಗ್ನ ಪುರುಷ ಗುಂಪಿನಲ್ಲಿ ಇಂಥಹ ಸ್ತ್ರೀ ಚಿತ್ರಗಳು ಗೊಂದಲಕ್ಕೆಡೆಮಾಡುವ ಸಾಧ್ಯತೆ ಇರುವುದರಿಂದ ಈ ಭಂಗಿಯ ಸ್ತ್ರೀ-ಪುರುಷ ಚಿತ್ರಗಳನ್ನು ಒಂದೇ ಕಡೆ ಚಿತ್ರಿಸಿಲ್ಲ.

ಗುಂಪು ವ್ಯಕ್ತಿಗಳಲ್ಲಿ ತಲೆಯ ಸುತ್ತಲೂ ಕೂದಲುಗಳನ್ನು ಚಿತ್ರಿಸಿ ಸ್ತ್ರೀಯನ್ನು ಸೂಚಿಸಲಾಗಿದೆ. ಈ ರೀತಿಯ ಚಿತ್ರಗಳು ಹಿರೇಬೆಣಕಲ್ಲಿನ ೧, ೬ನೇ ಗವಿಯಲ್ಲಿವೆ. ೬ನೇ ಗವಿಯಲ್ಲಿ ಪರಸ್ಪರ ಎದುರುಬದುರಾಗಿ ಕುಣಿಯುತ್ತಿರುವ ೨ ಸಾಲಿನ ಮನುಷ್ಯ ಚಿತ್ರಗಳಲ್ಲಿ ಒಂದು ಸಾಲಿನ ಎಲ್ಲರ ತಲೆಯಲ್ಲೂ ಕೂದಲನ್ನು ತೋರಿಸಲಾಗಿದೆ. ಹಾಗಾಗಿ ಅದು ಸ್ತ್ರೀಯರ ಸಾಲು ಎನ್ನುವುದು ಸ್ಪಷ್ಟ.

**ಪ್ರಾಣಿ ಚಿತ್ರಗಳು :** ಪಶು-ಪಕ್ಷಿಗಳ ಚಿತ್ರ ರಚನೆಯೂ ಕೂಡ ಸಹಜವಾಗಿರುವುದನ್ನು ಕಾಣಬಹುದು. ಇವು ಕೂಡಾ ಛಾಯಾ ಹಾಗೂ ಬಾಹ್ಯ ರೇಖಾ ರೂಪದಲ್ಲಿವೆ. ಕೆಲವು ಸಹಜ ರೂಪದ ಚಿತ್ರಗಳು ಇಂತಿವೆ.

ಮಲ್ಲಾಪುರದ ೯ನೇ ಕಲ್ಲಾಸರೆಯಲ್ಲಿಯ ಗೂಳಿಯಚಿತ್ರ ರಚನೆಯ ದೃಷ್ಟಿಯಿಂದ ಒಂದು ಉತ್ತಮ ಕಲಾಕೃತಿ ಎನ್ನಬಹುದು. ಇದು ಛಾಯಾರೂಪದಲ್ಲಿದೆ. ಮುಂಡ, ಕಾಲು, ಮುಖ, ಕತ್ತು, ಕೋಡು,

ಕಿವಿ ಎಲ್ಲವೂ ಪ್ರಮಾಣಬದ್ಧವಾಗಿವೆ. ಬಲಿಷ್ಠ ಗೂಳಿಯ ದಷ್ಟಪುಷ್ಟತೆಯನ್ನು ಚಿತ್ರದಲ್ಲಿ ನೈಜವಾಗಿ ಬಿಂಬಿಸಲಾಗಿದೆ. ಕೊಪ್ಪಳ-ಹಂಪಿ ಪ್ರದೇಶದ ಗೂಳಿ ಚಿತ್ರಗಳಲ್ಲಿಯೇ ಇದು ಶ್ರೇಷ್ಠ ಚಿತ್ರವೆನ್ನಬಹುದು.

ಮಲ್ಲಾಪುರದ ೨ನೇ ಗವಿ ಮತ್ತು ಅಂಜನಹಳ್ಳಿಯ ಗೂಳಿಯ ಚಿತ್ರಗಳು ದೇಹದಲ್ಲಿ ಪ್ರಮಾಣಬದ್ಧವಾಗಿರದಿದ್ದರೂ ಗೂಳಿಯ ಬಲಿಷ್ಠತೆ ಗಾಂಭೀರ್ಯವನ್ನು ಪ್ರಕಟಿಸುವಲ್ಲಿ ಯಶಸ್ವಿಯಾಗಿವೆ. ಅದೇ ರೀತಿ ಕೋಣದ ಚಿತ್ರಗಳು ಗಮನ ಸೆಳೆಯುತ್ತವೆ. ಹೊಸಬಂಡಿಹರ್ಲಾಪುರ, ಚಿಕ್ಕಬೆಣಕಲ್ ಮತ್ತು ಮಲ್ಲಾಪುರಗಳಲ್ಲಿ ಬೃಹತ್ ಪ್ರಮಾಣದ ಚಿತ್ರಗಳಿವೆ. ಎಲ್ಲವೂ ಬಾಹ್ಯ ರೇಖೆಯವು. ಮಲ್ಲಾಪುರದ ಕೋಣ ಚಿತ್ರದ ಮೈಮೇಲೆ ರೇಖೆಗಳಿವೆ. ಈ ಚಿತ್ರಗಳು ಪ್ರಬುದ್ಧ ಕಲಾವಿದನ ರಚನೆಗಳಂತೆ ಇವೆ. ಕೋಣದ ಬಲಿಷ್ಠತೆ ಚಿತ್ರದಲ್ಲಿ ನೈಜವಾಗಿದೆ. ಹೀಗೆ ಈ ಚಿತ್ರಗಳು ಭಂಗಿ ಮತ್ತು ಭಾವವನ್ನು ಸಮರ್ಪಕವಾಗಿ ಅಭಿವ್ಯಕ್ತಿಸುತ್ತಿವೆ.

ಹಂಪಿಯ ೨ನೇ ಕಲ್ಲಾಸರೆಯ ಹುಲಿ ಮತ್ತು ಗೂಳಿಯ ಚಿತ್ರಗಳು ಕೂಡ ರಚನಕಾರನ ಚಿತ್ರ ಪರಿಜ್ಞಾನಕ್ಕೆ ಸಾಕ್ಷಿಯಾಗಿವೆ. ಬಾಲವನ್ನು ಅರೆ ಎತ್ತಿ ಸಂಚಾರಕ್ಕೆ ಹೊರಟಂತಿರುವ ಹುಲಿಯ ಭಾವ ಮತ್ತು ಶೈಲಿ ಚಿತ್ರದಲ್ಲಿ ಸಹಜವಾಗಿ ವ್ಯಕ್ತವಾಗಿದೆ. ಅದೇ ರೀತಿ ಬಾಲವನ್ನು ಮೇಲಕ್ಕೆತ್ತಿ ತಲೆ ಬಗ್ಗಿಸಿರುವ ಗೂಳಿಯ ಇರಿವ ಭಂಗಿಯ ಭಾವ ಚಿತ್ರದಲ್ಲಿ ನೈಜವಾಗಿ ಮೂಡಿದೆ.

ಹಿರೇಬೆಣಕಲ್ಲಿನ ೧ನೇ ಕಲ್ಲಾಸರೆಯಲ್ಲಿ ೨ ನವಿಲಿನ ಚಿತ್ರಗಳಿವೆ. ಅವು ಛಾಯಾರೂಪದಲ್ಲಿದ್ದು, ಯಾವುದೇ ದೃಷ್ಟಿಯಿಂದ ಅವುಗಳ ಬಾಹ್ಯ ಆಕಾರ ಸ್ವಲ್ಪವೂ ಬದಲಾಗದಂತೆ ಅಪೂರ್ವವಾಗಿ ಮೂಡಿ ಬಂದಿವೆ. ಅವುಗಳಲ್ಲಿ ಒಂದು ನವಿಲಿನ ಮೇಯುವ ಭಂಗಿ ತುಂಬಾ ಸಹಜವಾಗಿದೆ.

ಹೊಸಬಂಡಿಹರ್ಲಾಪುರದ ೨ನೇ ಕಲ್ಲಾಸರೆಯ ಕವಲಿನ ಕೋಡುಗಳ (ಗಂಡು) ಜಿಂಕೆಗಳು ಕೂಡ ಸುಂದರವಾದ ರಚನೆಗಳು. ಅವುಗಳ ದೇಹ ವಿನ್ಯಾಸ, ಭಂಗಿ ಮತ್ತು ರಚನೆ ನೈಜವಾಗಿದೆ. ಎಮ್ಮೆ, ಎತ್ತು ಮತ್ತು ಹಸು ಒಂದೇ ರೀತಿ ಕಾಣುತ್ತವೆಯಾದರೂ ಸುತ್ತಲಿನ ಚಿತ್ರಗಳ ಅವಲೋಕನದಿಂದ ಅವುಗಳ ಪ್ರತ್ಯೇಕತೆಯನ್ನು ಗುರುತಿಸಬಹುದು. ಕೊಪ್ಪಳದ ೧ನೇ ಗವಿಯಲ್ಲಿ ಜಿಂಕೆ, ಗೂಳಿ, ಹಸು, ಟಗರು, ಮೊಲ ಮುಂತಾದ ಪ್ರಾಣಿಗಳ ಚಿತ್ರಗಳಿವೆ. ನೋಡಿದ ತಕ್ಷಣ ಆ ಪ್ರಾಣಿಗಳನ್ನು ಗುರುತಿಸಬಹುದು. ಟಗರಿನ ಕೊಂಬನ್ನು ಹೊರಭಾಗದಲ್ಲಿ ಸುರುಳಿಯಾಗಿ ಸುತ್ತಿರುವ ರೀತಿಯಲ್ಲಿ ತೋರಿಸಿರುವುದು ವಿಶೇಷ. ಹೀಗೆ ಪ್ರಾಗಿತಿಹಾಸ ಕಾಲದ ಚಿತ್ರಗಳು ಶೈಲಿ ಮತ್ತು ಭಂಗಿಯಲ್ಲಿ ಸಮರ್ಥ ರೂಪಕಗಳಾಗಿವೆ ಎನ್ನಬಹುದು.

## ಚಿತ್ರಗಳ ಪ್ರಮಾಣ

ಕೊಪ್ಪಳ-ಹಂಪಿ ಪ್ರದೇಶದ ಚಿತ್ರಗಳು ಪ್ರಮಾಣದಲ್ಲಿ ವೈವಿಧ್ಯಮಯವಾಗಿವೆ. ಚಿಕ್ಕ, ಮಧ್ಯಮ, ದೊಡ್ಡ ಮತ್ತು ಬೃಹತ್ ಪ್ರಮಾಣದಲ್ಲಿವೆ.

**ಚಿಕ್ಕ ಪ್ರಮಾಣದ ಚಿತ್ರಗಳು :** ಸಾಮಾನ್ಯವಾಗಿ ಬಿಡಿ ಚಿತ್ರಗಳಿಗಿಂತ ಗುಂಪಿನ ಚಿತ್ರಗಳು ಸಣ್ಣ ಪ್ರಮಾಣದಲ್ಲಿವೆ. ಒಂದೇ ಎಡೆಯಲ್ಲಿ ಅನೇಕ ಚಿತ್ರಗಳನ್ನು ಬಿಡಿಸುವ ಉದ್ದೇಶವಿರುವುದರಿಂದ ಚಿತ್ರಗಳನ್ನು ಸಣ್ಣ ಪ್ರಮಾಣದಲ್ಲಿ ಯೋಜಿಸಿಕೊಳ್ಳಲಾಗಿದೆ. ಬಿಡಿ ಚಿತ್ರಗಳು ಸ್ವತಂತ್ರವಾಗಿರುವುದರಿಂದ ಅವು ದೊಡ್ಡ ಇಲ್ಲವೇ ಮಧ್ಯಮ ಪ್ರಮಾಣದಲ್ಲಿರುತ್ತವೆ. ಚಿಕ್ಕ ಪ್ರಮಾಣದ ಚಿತ್ರಗಳು ಹಿರೇಬೆಣಕಲ್ ನ ೧,೬,೧೧ ಮತ್ತು ೧೨ನೇ ಗವಿಗಳಲ್ಲಿ ಚಿಕ್ಕರಾಂಪುರದ ೧ನೇ ಗವಿಯಲ್ಲಿ ಇವೆ. ಇಲ್ಲಿ ಒಂದೇ ಎಡೆ ಸಾಲು ಕುಣಿತಗಾರರ ನಾಲ್ಕೈದು ತಂಡಗಳು, ಬಿಡಿ ಮನುಷ್ಯರು, ಜಿಂಕೆಗಳ ಸಾಲು, ಗುಂಪುಗಳು, ಪಶು-ಪಕ್ಷಿಗಳು, ಅಶ್ವಸವಾರರು ಮುಂತಾದ ಚಿತ್ರಗಳಿವೆ. ಇಲ್ಲಿಯ ಚಿತ್ರಗಳು ಏಕಪ್ರಕಾರವಾಗಿರದೇ ಚೆಲ್ಲಾಪಿಲ್ಲಿಯಾಗಿವೆ. ಪ್ರಾಯಶ: ಇವು ಬೇರೆ ಬೇರೆ ಅವಧಿಯಲ್ಲಿ ರಚಿತವಾಗಿರಬಹುದೆಂದು ತೋರುತ್ತದೆ. ಇಲ್ಲಿ ಕೆಲವು ಸಣ್ಣ ಪ್ರಮಾಣದ ಬಿಡಿ ಚಿತ್ರಗಳಿವೆ. ನಂತರ ಕಾಲದ ಬಿಳಿವರ್ಣದ ಚಿತ್ರಗಳಲ್ಲಿ ಕಡ್ಡಿಯಾಕಾರದ ಮನುಷ್ಯಾಕೃತಿಗಳು ಮತ್ತು ಇತರ ಚಿತ್ರಗಳು ಕೂಡ ಸಣ್ಣಪ್ರಮಾಣದಲ್ಲಿವೆ. ಮಲ್ಲಾಪುರ, ವೆಂಕಟಾಪುರ, ಹಂಪಿಗಳಲ್ಲಿ ಸಣ್ಣಪ್ರಮಾಣದ ಚಿತ್ರಗಳಿವೆ. ಬಣ್ಣ ಚಿತ್ರಗಳು ಸಾಮಾನ್ಯವಾಗಿ ೧ ಸೆಂ.ಮೀ.ನಿಂದ ಹಿಡಿದು ೨೦ ಸೆಂ.ಮೀವರೆಗೆ ವಿವಿಧ ಅಳತೆಯಲ್ಲಿವೆ.

**ಮಧ್ಯಮ ಪ್ರಮಾಣದ ಚಿತ್ರಗಳು :** ಮಧ್ಯಮ ಪ್ರಮಾಣದ ಚಿತ್ರಗಳು ಸಾಮಾನ್ಯವಾಗಿ ಅಧಿಕವಾಗಿವೆ. ಎರಡು ಅಥವಾ ಮೂರ್ನಾಲ್ಕು ಚಿತ್ರಗಳಿದ್ದಲ್ಲಿ, ಅವು ಮಧ್ಯಮ ಪ್ರಮಾಣದಲ್ಲಿರುತ್ತವೆ. ಸಂಗಾಪುರ, ಕೊಪ್ಪಳ, ಚಿಕ್ಕರಾಂಪುರ, ರಾಂಪುರ, ಮಲ್ಲಾಪುರಗಳಲ್ಲಿ ಈ ಪ್ರಮಾಣದ ಚಿತ್ರಗಳಿವೆ. ಸಾಮಾನ್ಯವಾಗಿ ೨೦ ಸೆಂ.ಮೀ ನಿಂದ ೧ ಮೀಟರವರೆಗಿನ ಚಿತ್ರಗಳನ್ನು ಈ ಪ್ರಮಾಣದಲ್ಲಿ ಗುರುತಿಸಬಹುದು. ರಾಂಪುರ (೧), ಆನೆಗುಂದಿ (೧)ಯ ವಾನರ ರೀತಿಯ ಮನುಷ್ಯ ಚಿತ್ರಗಳು ಕ್ರಮವಾಗಿ ೦.೮೯ ಮೀ. ಮತ್ತು ೦.೫೮ ಮೀ ಎತ್ತರ ಇವೆ. ಸಂಗಾಪುರದ ಚಿತ್ರಗಳಲ್ಲಿ ಹೆಚ್ಚಿನವು ೩೦ ಸೆಂ.ಮೀ.ನಿಂದ ೪೫ ಸೆಂ.ಮೀ.ವರೆಗೆ ಇವೆ.

**ದೊಡ್ಡ ಪ್ರಮಾಣದ ಚಿತ್ರಗಳು :** ೧ ಮೀ ನಿಂದ ೫ ಮೀಟರ್ ವರೆಗಿನ ಚಿತ್ರಗಳನ್ನು ದೊಡ್ಡ ಪ್ರಮಾಣದ ಚಿತ್ರಗಳೆನ್ನಬಹುದು. ಇವು ವಿರಳವಾಗಿವೆ. ಸಾಮಾನ್ಯವಾಗಿ ಬಿಡಿ ಮನುಷ್ಯ ಅಥವಾ ಪ್ರಾಣಿಗಳವು. ಈ ಅಳತೆಯಲ್ಲಿರುತ್ತವೆ. ಮಲ್ಲಾಪುರದ ೩ನೇ ಗವಿಯಲ್ಲಿ (ಖಾನಾಸಾಬನ) ಈ

ಅಳತೆಯ ಅನೇಕ ಚಿತ್ರಗಳಿವೆ. ಅವುಗಳ ಪ್ರಮಾಣ ಇಂತಿದೆ. ಮನುಷ್ಯ ಚಿತ್ರಗಳು ೧ಮೀ ೧.೩೫ಮೀ. ೧.೬೬ ಮೀ. ೧.೭೬ ಮೀ, ೨.೪೫ಮೀ ಮತ್ತು ೧.೮೦ ಮೀ ಅಳತೆಯಲ್ಲಿದೆ. ಹಂದಿಯ ಚಿತ್ರ ೧.೩೯ ಮೀ ಎತ್ತರ ಮತ್ತು ೨.೬ ಮೀ ಉದ್ದ, ಕಾಡುಕೋಣ ೩.೧೦ಮೀ ಉದ್ದ ಮತ್ತು ೨.೧೫ಮೀ ಎತ್ತರವಿದೆ. ನವಿಲು ೨.೫ ಮೀ ಉದ್ದವಾಗಿದೆ. ಹಾಗೇ ಮರದ ಕಾಂಡವೊಂದರ ಚಿತ್ರ ೪ಮೀ ಎತ್ತರವಿದೆ.

ನಾರಾಯಣಪೇಟೆಯ ಮನುಷ್ಯ ಚಿತ್ರವು ಸು.೪ಮೀ ಎತ್ತರವಿದ್ದು ಹಿರೇಬೆಣಕಲ್ಲಿನ ೧೭ನೇ ಗವಿಯ ವಿಚಿತ್ರ ಮನುಷ್ಯಾಕೃತಿಯು ೫ಮೀ ಉದ್ದವಿದೆ. ಚಿಕ್ಕಬೆಣಕಲ್ಲಿನ ೩ನೇ ಕಲ್ಲಾಸರೆಯ ಕಾಡು ಕೋಣದ ಚಿತ್ರ ಸು.೨ಮೀ ಉದ್ದವಿದೆ. ರಾಮದುರ್ಗ ಮತ್ತು ಬೊಮ್ಮಸಾಗರ ತಾಂಡದ ಎತ್ತುಗಳ ಹಾಗೂ ನವಿಲಿನ ಚಿತ್ರಗಳು ಸುಮಾರು ೨ ಮೀಟರ್ ಉದ್ದ ಇವೆ. ಹೊಸಬಂಡಿಹರ್ಲಾಪುರದ ಕೋಣದ ಚಿತ್ರ ೨.೮೦ಮೂ ಉದ್ದ ಮತ್ತು ೧.೮೯ಮೀ ಎತ್ತರವಾಗಿದೆ.

**ಬೃಹತ್ ಪ್ರಮಾಣದ ಚಿತ್ರಗಳು :** ೫ಮೀ ಗಿಂತ ದೊಡ್ಡಪ್ರಮಾಣದ ಚಿತ್ರಗಳು ತೀರ ವಿರಳವಾಗಿವೆ. ಕೊಪ್ಪಳ-ಹಂಪಿ ಪ್ರದೇಶಕ್ಕೆ ಸಂಬಂಧಿಸಿದಂತೆ ಹಿರೇಬೆಣಕಲ್ ಮತ್ತು ಅಂಜನಹಳ್ಳಿಯಲ್ಲಿ ಈ ಪ್ರಮಾಣದ ಚಿತ್ರಗಳಿವೆ.

ಹಿರೇಬೆನಕಲ್ಲಿನ ೨ನೇ ಕಲ್ಲಾಸರೆಯ ೧೨.೫೦ ಮೀ ಅಗಲ ಹಾಗೂ ಸು.೧೦ಮೀ ಎತ್ತರದ ವಿಶಾಲ ಅಳತೆಯಲ್ಲಿ ೨ ಹೆಬ್ಬಾವಿನ ಚಿತ್ರಗಳಿವೆ. ಪ್ರತಿಯೊಂದು ಸು.೧೨ಮೀ ಉದ್ದವಾಗಿವೆ. ಇಲ್ಲಿಯವರೆಗೆ ತಿಳಿದಂತೆ ಮಧ್ಯಪ್ರದೇಶದ ರೈಸಿನ್ ಜಿಲ್ಲೆಯ ಗೋರಾಗಂಜ್ ತಹಶೀಲ್‌ನ ಸನಕುದ್ ಮತ್ತು ಭಾಗವಾನಿ ನದಿಗಳ ಮಧ್ಯದಲ್ಲಿರುವ ಜಾಹೋರಾ ಕಲ್ಲಾಸರೆಗಳಲ್ಲಿಯ ದ್ವಿವರ್ಣದ (ಬಿಳಿ,ಕೆಂಪು)ಕೋಣದ ಚಿತ್ರವನ್ನು (೩.೬೦ ಮೀ ಉದ್ದ ೧.೯೫ ಎತ್ತರ) ಭಾರತದ ಗವಿ ಪ್ರಾಣಿ ಚಿತ್ರಗಳಲ್ಲಿಯೇ ಅತ್ಯಂತ ದೊಡ್ಡದೆಂದು ತಿಳಿದುಬಂದಿದೆ.[೨] ಆದರೆ ಅದಕ್ಕೂ ದೊಡ್ಡದಾದ ಚಿತ್ರಗಳು ಇವಾಗಿದ್ದು, ಭಾರತದ ಗವಿವರ್ಣ ಚಿತ್ರಗಳಲ್ಲೇ ಅತೀ ದೊಡ್ಡ ಪ್ರಮಾಣದ ಚಿತ್ರಗಳೆಂದು ಹೇಳಬಹುದು. ಈ ಚಿತ್ರಗಳನ್ನು ಒಳಗೊಂಡ ಕಲ್ಲಾಸರೆ ಕೂಡ ಅತೀ ದೊಡ್ಡ ಚಿತ್ರಿತ ಕಲ್ಲಾಸರೆಯಾಗಿದೆ.

ಇಲ್ಲಿಯೇ ೧೭ನೇ ಗವಿಯಲ್ಲಿಯ ಒಂದು ವಿಚಿತ್ರ ಆಕೃತಿಯ ೭ಮೀ ಉದ್ದವಾಗಿದೆ. ಹಾಗೂ ಅಂಜನಹಳ್ಳಿಯ ಹಡಗಿನ ಚಿತ್ರವು ೬.೯೨ಮೀ ಉದ್ದ ಮತ್ತು ೧ಮೀ ಎತ್ತರವಿದೆ. ಒಟ್ಟಿನಲ್ಲಿ ಕರ್ನಾಟಕ ಹಾಗೂ ಭಾರದಲ್ಲಿಯೇ ದೊಡ್ಡ ದೊಡ್ಡ ಪ್ರಮಾಣದ ಮನುಷ್ಯ ಹಾಗೂ ಪ್ರಾಣಿಗಳ ಚಿತ್ರಗಳನ್ನು ಕೊಪ್ಪಳ-ಹಂಪಿ ಪ್ರದೇಶ ಒಳಗೊಂಡಿದೆ ಎಂದು ಹೇಳಬಹುದು.

## ೬.೪. ಚಿತ್ರ ರಚನೆಯ ಉದ್ದೇಶ

ಪ್ರಾಗಿತಿಹಾಸ ಕಾಲದ ಚಿತ್ರರಚನೆಯ ಉದ್ದೇಶಗಳ ಬಗೆಗೆ ಬೇರೆ ಬೇರೆ ಅಭಿಪ್ರಾಯಗಳಿವೆ.[೮] ಇವು ಪ್ರಾಚೀನ ಕಾಲದ ಸಾಮಾನ್ಯ ಜನತೆಯ ಭಾವಾನಾತ್ಮಕ ಅಭಿವ್ಯಕ್ತಿಯ ಫಲವಾಗಿ ರಚಿತವಾದವುಗಳೆಂದು, ಸೌಂದರ್ಯ ಪ್ರಜ್ಞೆಯುಳ್ಳ ಕೆಲವು ಜನರು ನಿಸರ್ಗದ ಚೆಲುವಿನಿಂದ ಪ್ರೇರಣೆ ಪಡೆದು ಅಲಂಕರಣೆಯ ಉದ್ದೇಶಕ್ಕಾಗಿ ರಚಸಿದವೆಂದು ಅಭಿಪ್ರಾಯ ಪಡಲಾಗಿದೆ. ಹಾಗೇ ಈ ಚಿತ್ರಗಳು ಯಶಸ್ವಿ ಬೇಟೆಯ ಸ್ಮರಣಾರ್ಥ ಉದ್ದೇಶಕ್ಕಾಗಿ ರಚಿಸಿದವೆಂದು ಮತ್ತು ನಿರಂತರ ಆಹಾರ ದೊರಕಿಸಿಕೊಳ್ಳುವ ಉದ್ದೇಶದ ಮಾಂತ್ರಿಕ ಸಂಬಂಧಿ ಚಿತ್ರಗಳೆಂದು ಹೇಳಲಾಗಿದೆ. ಕೊಪ್ಪಳ-ಹಂಪಿ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಮೂರು ಉದ್ಧೇಶಗಳನ್ನು ಗುರುತಿಸಬಹುದು. ಅವು ಭಾವಾನಾತ್ಮಕ ಪ್ರೇರಣೆ. ೨ ಅಲಂಕರಣೇಮತ್ತು ೩ ಮಾಂತ್ರಿಕ ಕಟ್ಟಳೆ.

**೧. ಭಾವಾನಾತ್ಮಕ ಪ್ರೇರಣೆ :** ಕೆಲವು ಚಿತ್ರಗಳು ಭಾವಾನಾತ್ಮಕ ಪ್ರೇರಣೆ ಫಲವಾಗಿ ರಚಿತವಾಗಿವೆ. ಚಿತ್ರದ ನೆಲೆ ವಿಷಯ ಹಾಗೂ ಸ್ವರೂಪವನ್ನು ಗಮನಿಸಿ ಇಂಥ ಚಿತ್ರಗಳನ್ನು ಗುರುತಿಸಬಹುದು. ಮನುಷ್ಯ ಭಾವನಾಜೀವಿ, ಭಾವನೆಗಳ ತೀವ್ರ ಅಭಿವ್ಯಕ್ತಿಯ ಪ್ರೇರಣೆಯಾದಾಗ ಅದನ್ನು ವಿವಿಧ ಮಾಧ್ಯಮದ ಮೂಲಕ ಅಭಿವ್ಯಕ್ತಿಸುತ್ತಾನೆ. ಇದು ಕ್ಷಣಿಕವಾದ ಮತ್ತು ತಕ್ಷಣವಾದ ಪ್ರೇರಣೆ. ಹಾಗಾಗಿ ಅವನು ಸ್ಥಳದಲ್ಲೇ ಲಭ್ಯವಿದ್ದ ವಸ್ತುಗಳಿಂದಲೇ ಯಾವುದಾದರೂ ಆಕೃತಿಯನ್ನೊ, ಚಿತ್ರವನ್ನೋ ಬಿಡಿಸಿ ಆ ಮೂಲಕ ತನ್ನ ಭಾವನೆಯನ್ನು ಪ್ರಕಟಪಡಿಸುತ್ತಾನೆ. ಅದೇ ರೀತಿಯಲ್ಲಿ ಪ್ರಾಗಿತಿಹಾಸಕಾಲದ ಚಿತ್ರರಚನೆಗೆ ಇಂಥ ತಕ್ಷಣದ ಭಾವನಾತ್ಮಕ ಅಭಿವ್ಯಕ್ತಿಯ ಪ್ರೇರಣೆಯನ್ನು ಗುರುತಿಸಬಹುದು. ಇಂಥ ಪ್ರೇರಣೆ ಸಾರ್ವತ್ರಿಕವಾದುದು. ಯಾವ ಸಾಮಾನ್ಯ ವ್ಯಕ್ತಿಗಾದರೂ ಮೂಡಬಹುದು. ಆ ವ್ಯಕ್ತಿ ಕಲಾಪ್ರಜ್ಞೆಯುಳ್ಳವನಾಗಿದ್ದರೆ ಅಭಿವ್ಯಕ್ತಗೊಂಡ ಯಾವುದೇ ಮಾಧ್ಯಮ ಅಥವಾ ಚಿತ್ರರಚನೆ ಮತ್ತು ಭಾವ ಪ್ರಕಟಣೆಯ ದೃಷ್ಟಿಯಿಂದ ಉತ್ತಮವಾಗಿರುತ್ತವೆ. ಅದರ ಸಾಮಾನ್ಯ ವ್ಯಕ್ತಿಯ ರಚನೆಗಳಾಗಿದ್ದರೇ ಅವು ರಚನೆಯಲ್ಲಿ ಅಷ್ಟೇನೂ ಉತ್ತಮವಾಗಿರುವುದಿಲ್ಲ. ಆದರೆ ಭಾವ ಪ್ರಕಟಣೆಯಲ್ಲಿ ಪ್ರಬಲವಾಗಿರುತ್ತವೆ.

ಕೊಪ್ಪಳ-ಹಂಪಿ ಪ್ರದೇಶದ ಮಲ್ಲಾಪುರ, ಹಂಪಿ, ಕೊಪ್ಪಳ, ಸಂಗಾಪುರ, ತೆಂಬಾ ಮುಂತಾದೆಡೆಗಳಲ್ಲಿನ ಕೆಲವು ಚಿತ್ರಗಳನ್ನು ಮಾಂತ್ರಿಕ ಉದ್ದೇಶದಿಂದ ರಚಿಸಿದವೆಂದು ಹೇಳಲಾಗದು. ಅಶ್ವಸವಾರ, ಬಿಡಿಯಾದ ಗೂಳಿ, ಹುಲಿ ವಿವಿಧ ರೀತಿಯ ಪ್ರಾಣಿಗಳ ಸಮೂಹ, ಆನೆಸವಾರ, ಅಲಂಕೃತ ಎತ್ತುಗಳು,

ಎದುರುಬದುರಾಗಿರುವ ಜೋಡಿ ಎತ್ತುಗಳು, ಅವುಗಳ ಕೊಂಬಿನ ತುದಿಯಲ್ಲಿ ಹೂವಿನ ಅಲಂಕರಣೆ, ಹೂ ಗಿಡಗಳ ಚಿತ್ರಗಳು ಮತ್ತು ವಿಶೇಷವಾಗಿ ಬಯಲು ಬಂಡೆಯಲ್ಲಿ ಕೊರೆದ/ಕುಟ್ಟಿದ ಎತ್ತಿನ, ಎತ್ತಿನ ಸವಾರನ, ಅಶ್ವಸವಾರನ ಮತ್ತು ಪಶುಗಳ ಚಿತ್ರಗಳು ಖಂಡಿತವಾಗಿ ತಕ್ಷಣದ ಅಭಿವ್ಯಕ್ತಿಯ ಉದ್ದೇಶದಿಂದ ರಚಿತವಾದವುಗಳೆಂದು ಹೇಳಬಹುದು.

**೨. ಅಲಂಕರಣೆ :** ಕೆಲವು ಚಿತ್ರಗಳು ಅಲಂಕರಣೆಯ ಉದ್ದೇಶದಿಂದ ರಚಿತವಾದವೆಂದು ಹೇಳಬಹುದು. ಮನುಷ್ಯ ಮೂಲತ: ನಿಸರ್ಗ ಜೀವಿ ಅವನಲ್ಲಿ ಸೌಂದರ್ಯಪ್ರಜ್ಞೆ ಸುಪ್ತವಾಗಿರುತ್ತದೆ. ಆದರೆ ಎಲ್ಲರಲ್ಲೂ ಜಾಗೃತವಾಗಿರುವುದಿಲ್ಲ. ಆ ರೀತಿಯ ಕಲಾವಂತಿಕೆಯ ಕೆಲವು ಪ್ರಾಗಿತಿಹಾಸ ಕಾಲದ ಜನರು ತಮ್ಮ ವಾಸದ ನೆಲೆಗಳನ್ನು ಅಲಂಕರಿಸುವ ಉದ್ದೇಶದಿಂದ ಚಿತ್ರಗಳನ್ನು ಬಿಡಿಸಿದ್ದಾರೆನ್ನಬಹುದು. ಹಳೆಯ ಶಿಲಾಯುಗದ ಒರಟು ಆಯುಧಗಳನ್ನು ನವಶಿಲಾಯುಗದಲ್ಲಿ ಸುಂದರವಾಗಿ ಮಾಡಿಕೊಂಡಿರುವುದು, ನಿತ್ಯ ಬಳಕೆಯ ಮಡಕೆಗಳನ್ನು ಅಲಂಕರಿಸಿಕೊಂಡಿರುವುದು ಅವನ ಕಲಾಪ್ರಜ್ಞೆಗೆ ಸಾಕ್ಷಿ.

ಅದೇ ರೀತಿ ಅಲಂಕರಣೆಯ ಉದ್ದೇಶದಿಂದ ಕೆಲವು ಚಿತ್ರಗಳನ್ನು ಬಿಡಿಸಿದ್ದಾನೆನ್ನಬಹುದು. ಸಾಮಾನ್ಯವಾಗಿ ಸ್ವಬಳಕೆಯ ಆಯುಧ, ಮಡಕೆ ಪಾತ್ರೆಗಳನ್ನು ಅಲಂಕರಿಸಿಕೊಂಡಂತೆ ಪ್ರಾಗಿತಿಹಾಸ ಕಾಲದ ಮಾನವ ಸ್ವವಾಸದ ಗವಿ ಕಲ್ಲಾಸರೆಗಳಲ್ಲಿ ಚಿತ್ರಗಳನ್ನು ಬರೆದಿದ್ದಾರೆ. ಅಲ್ಲಿಯ ಚಿತ್ರಗಳು ಸಾಮಾನ್ಯವಾಗಿ ಅವನ ಜನ, ಪಶುಪ್ರಾಣಿಗಳಿಗೆ ಸಂಬಂಧಿಸಿರುತ್ತವೆ. ಮತ್ತು ತನ್ನ ಎತ್ತು ಮುಂತಾದ ಸಾಕುಪ್ರಾಣಿಗಳನ್ನು ಕೂಡ ಅವನು ಚಿತ್ರಗಳ ಮೂಲಕ ಅಲಂಕರಿಸಿ ಸಂತಸಪಟ್ಟಿದ್ದಾನೆ. ಇಂಥ ಅನೇಕ ಚಿತ್ರಗಳನ್ನು ಕಾಣಬಹುದು.

ಕೊಪ್ಪಳ ಹಂಪಿ ಪ್ರದೇಶದ ಚಿಕ್ಕರಾಂಪುರದ ೧ನೇ ಗವಿ, ಸಂಗಾಪುರದ ೧ನೇ ಗವಿಯ ಮುಖಭಾಗ ಮತ್ತು ಒಳಭಾಗದಲ್ಲಿ ವಿವಿಧ ರೀತಿಯ ಚಿತ್ರಗಳಿವೆ. ಇಲ್ಲೆಲ್ಲಾ ಆದಿ ಮಾನವ ವಾಸಿಸಿದ್ದ. ಇವೆಲ್ಲಾ ಅಲಂಕರಣೆಯ ಉದ್ದೇಶವೆಂದು ಸ್ಪಷ್ಟವಾಗಿ ಹೇಳಬಹುದು. ಈಗಲೂ ಹಳ್ಳಿಗಳಲ್ಲಿ ಕೆಲವು ಜನ ತಮ್ಮ ಮನೆಗಳನ್ನು ಸಾರಿಸಿದಾಗ ಮನೆಯ ಗೋಡೆಗಳ, ಬಾಗಿಲುಗಳ ಮೇಲೆ ಅಲಂಕಾರಕ್ಕಾಗಿ ಅಲ್ಲಲ್ಲಿ ಕೆಮ್ಮಣ್ಣು ಇಲ್ಲವೇ ಸುಣ್ಣದಿಂದ ಚಿತ್ರಗಳನ್ನು ಬಿಡಿಸುತ್ತಾರೆ.

ಆನೆಗುಂದಿಯ ೧,೨,೩ನೇ ಕಲ್ಲಾಸರೆ ಗವಿಗಳು ಪ್ರಾಚೀನ ಮಾನವನ ವಾಸಸ್ಥಾನಗಳಾಗಿದ್ದವು. ಅಲ್ಲಿಯ ಚಿತ್ರಗಳಲ್ಲಿ ಒಂದು ಎತ್ತಿನ ಚಿತ್ರವಿದೆ. ಅದರ ಮೈಮೇಲೆ ವಿಶಿಷ್ಟವಾದ ರೇಖೆಗಳಿಂದ ಅಲಂಕರಿಸಲಾಗಿದೆ. ಸ್ಪಷ್ಟವಾಗಿ ಅಲಂಕರಣೆಯ ಉದ್ಧೇಶವೇ ಇಲ್ಲಿ ಪ್ರಧಾನವಾಗಿರುವುದನ್ನು

ಗುರುತಿಸಬಹುದು. ಸಂಗಾಪುರದ ೬ನೇ ಕಲ್ಲಾಸರೆಯಲ್ಲಿ ಎದುರುಬದುರಾಗಿ ನಿಂತ ಜೋಡಿ ಎತ್ತಿನ ಚಿತ್ರಗಳಿವೆ. ಕೆಲವು ಎತ್ತಿನ ಕೋಡಿನ ತುದಿಯಲ್ಲಿ ಹೂಗಳನ್ನಿಟ್ಟಿರುವಂತಹ ಅಲಂಕರಣೆಗಳು ಮತ್ತು ಹಿರೇಬೆನಕಲ್ಲಿನ ೧೬ನೇ ಕಲ್ಲಾಸರೆಯ ೫ ಹುಡಗಳ ಚಿತ್ರಗಳು ವಿಶೇಷ ರೀತಿಯ ಅಲಂಕರಣೆಗಳನ್ನು ಹೊಂದಿದ್ದು, ಗಮನ ಸೆಳೆಯುತ್ತವೆ. ಇಲ್ಲಿ ಸೌಂದರ್ಯ ಪ್ರಜ್ಞೆ ಕ್ರಿಯಾಶೀಲವಾಗಿರುವುದನ್ನು ಗುರುತಿಸಬಹುದು. ಚಿತ್ರಗಳನ್ನು ಬಿಡಿಸುವುದಷ್ಟೇ ಉದ್ದೇಶವಾಗಿದ್ದಲ್ಲಿ, ಈ ರೀತಿಯ ಅಲಂಕರಣೆ ಅಗತ್ಯವಿರಲಿಲ್ಲ. ಹಾಗಾಗಿ ಚಿತ್ರ ರಚನೆಯಲ್ಲಿ ಅಲಂಕರಣೆ (ಸೌಂದರ್ಯ ಪ್ರಜ್ಞೆ) ಉದ್ದೇಶವನ್ನು ಗುರುತಿಸಬಹುದು.

**೩. ಮಾಂತ್ರಿಕ ಕಟ್ಟಳೆ :** ಪ್ರಾಗಿತಿಹಾಸ ಕಾಲದ ಹೆಚ್ಚಿನ ಚಿತ್ರ ರಚನೆಗೆ ಮತ್ತೊಂದು ಮಹತ್ವದ ಉದ್ದೇಶವೆಂದರೆ ಒಂದು ರೀತಿಯ ಮಾಂತ್ರಿಕ ಕಟ್ಟಳೆ ಅಥವಾ ಆಚರಣೆ ಕಾರಣವೆನ್ನಬಹುದು.[೯] ಬೇಟೆ, ಪಶುಪಾಲನೆ, ಸಮೂಹ ಕುಣಿತ, ನಗ್ನ ಕುಣಿತ, ಮಂಡಲ ಇವೆಲ್ಲಾ ಮಾಂತ್ರಿಕ ಕಟ್ಟಳೆ ಉದ್ದೇಶಿತ ರಚನೆಗಳೆಂದು ಹೇಳಬಹುದು. ಸೂಕ್ಷ್ಮವಾಗಿ ಗಮನಿಸಿದಲ್ಲಿ ಇವೆಲ್ಲ ಪ್ರಾಚೀನ ಮಾನವನ ಆಹಾರ ಸಂಬಂಧಿ ವಿಷಯದ ಸುತ್ತ ಕೇಂದ್ರಿಕೃತವಾಗಿರುವುದನ್ನು ಗುರುತಿಸಬಹುದು. ಅಂದರೆ ಮನುಷ್ಯ ತನಗೆ ಆಹಾರವಾಗುವ ಪ್ರಾಣಿಗಳ ಅಭಿವೃದ್ಧಿ, ಇವುಗಳ ಯಶಸ್ವಿ ಬೇಟೆಯ ಉದ್ದೇಶಿತ ಮಾಂತ್ರಿಕ ಕಟ್ಟಳೆಗಳನ್ನು ಮಾಡಿ ಅವುಗಳ ವಿಧಿಯನ್ವಯ ಅದಕ್ಕೆ ಸಂಬಂಧಿಸಿದ ಚಿತ್ರಗಳನ್ನು ಬಿಡಿಸಿದ್ದಾನೆನ್ನಬಹುದು. ಒಬ್ಬ ಮನುಷ್ಯ ಅಥವಾ ಪ್ರಾಣಿಯ ಚಿತ್ರಗಳನ್ನು ತೆಗೆದು ಮಂತ್ರಿಸಿದರೆ ಅವನು ಅಥವಾ ಅದು ತನ್ನ ವಶವಾಗುವುದೆಂದು, ಅಥವಾ ಅವನು ಶತ್ರುವಾಗಿದ್ದರೆ ನಾಶವಾಗುವನೆಂಬ ನಂಬಿಕೆ ಬಹು ಪುರಾತನ ಕಾಲದಿಂದ ಉಳಿದು ಬಂದಿರುವಂತಹದು. ತನ್ನ ಶತ್ರುವಿನ ನಾಶಕ್ಕಾಗಿ ಅವನ ಗೊಂಬೆಯನ್ನು ಮಾಡಿ ಅದಕ್ಕೆ ಮಂತ್ರಪೂರಿತ ಸೂಜಿಗಳನ್ನು ಚುಚ್ಚುವುದು ಮೊದಲಾದ ಮಾಟ ಮಂತ್ರಗಳ ಆಚರಣೆ ಇಂದೂ ವ್ಯವಹಾರದಲ್ಲಿದೆ. ಇದರಿಂದ ಆ ಶತ್ರುವು ಕಷ್ಟ, ನಷ್ಟ, ಸಂಕಟವನ್ನು ಅನುಭವಿಸುವನು ಎಂಬ ಬಲವಾದ ನಂಬಿಕೆಯಿದೆ. ಹಾಗಾಗಿ ಬಹುಮಟ್ಟಿನ ಚಿತ್ರಗಳು ಈ ಉದ್ದೇಶಕ್ಕೆ ಸಂಬಂಧಿಸಿದವು ಎಂದು ಹೇಳಬಹುದು.

ಮಲ್ಲಾಪುರದ ೧,೩ ಮತ್ತು ೪ ಚಿಕ್ಕಬೆನಕಲ್ಲಿನ ೩, ಹಿರೇಬೆನಕಲ್ಲಿನ ೨,೩ ಮತ್ತು ಹಂಪಿಯ ೫ನೇ ಕಲ್ಲಾಸರೆಯಲ್ಲಿ ಮೈಮೇಲೆ ವಿಶಿಷ್ಟ ರೇಖೆಗಳನ್ನು ಹಾಕಿಕೊಂಡ ನಗ್ನ ಗರ್ಭಿಣಿ ಸ್ತ್ರೀ-ಪುರುಷರ ನೃತ್ಯಭಂಗಿಯ ಚಿತ್ರಗಳಿವೆ. ಅವುಗಳ ಜೊತೆ ಕೆಲವು ಪ್ರಾಣಿಗಳ ಪೂರ್ಣರೂಪದ, ರುಂಡದ, ಮುಂಡದ ಚಿತ್ರಗಳಿವೆ. ಅವುಗಳ ಮೇಲೂ ರೇಖೆಗಳಿವೆ. ಇವೆಲ್ಲಾ ಇಷ್ಟಾರ್ಥ ಸಿದ್ಧಿಗಾಗಿ ಕೆಲವು ಜನ ಮಾಂತ್ರಿಕರೊಡಗೂಡಿ ನಡೆಸಿದ ಮಾಂತ್ರಿಕ ಆಚರಣೆಗೆ ಸಂಬಂಧಿಸಿದ ಚಿತ್ರಗಳೆಂದು ಹೇಳಬಹುದು.

ಪ್ರಾಣಿಗಳ ಚಿತ್ರಗಳು ಆಚರಣೆಯಲ್ಲಿ ಬಲಿ ಕೊಟ್ಟ ಪ್ರಾಣಿಗಳವು ಎಂದು ತರ್ಕಿಸಬಹುದು. ಈಗಲೂ ಕೆಲವು ಮಂತ್ರವಾದಿಗಳು ನಗ್ನರಾಗಿ ಪ್ರಾಣಿಬಲಿಗಳೊಂದಿಗೆ ಮಾಂತ್ರಿಕ ಕಟ್ಟಳೆಗಳನ್ನು ಮಾಡುವ ಆಚರಣೆ ರೂಢಿಯಲ್ಲಿದೆ. ಇಂಥ ಆಚರಣೆಗಳಲ್ಲಿ ಗರ್ಭಿಣಿ ಸ್ತ್ರೀಗೆ ವಿಶೇಷ ಮಹತ್ವ ಉಂಟು. ಕೆಲವು ವಿಶೇಷ ಇಷ್ಟಾರ್ಥ ಸಿದ್ಧಿಗೆ ಅಂಥವಳನ್ನು ಬಲಿ ಕೊಟ್ಟ ಉದಾಹರಣೆಗಳು ಈಗಲೂ ದೊರೆಯುತ್ತವೆ.

ಇವಲ್ಲದೇ ಸಂಭೋಗ, ಕ್ರಿಯೆ ಬಹುಶಃ ಬೇಟೆಗೆ ಹೋಗುವ ಮುನ್ನ ಇಲ್ಲವೇ ಬೇಟೆ ನಂತರದ ಸಾಮೂಹಿಕ ನೃತ್ಯ ಮೊದಲಾದ ಚಿತ್ರಗಳು ತನ್ನ ಆಹಾರವನ್ನು ಒದಗಿಸುವ ಜಿಂಕೆ, ಗೂಳಿ, ಕೋಣ ಹಾಗೂ ವಂಶಾಭಿವೃದ್ಧಿಗೋಸ್ಕರ ಇಂತಹ ಪ್ರಾಣಿಗಳ ವೈರಿಯಾದ ಹುಲಿ, ಚಿರತೆ ಮೊದಲಾದ ಪ್ರಾಣಿಗಳ ನಾಶಕ್ಕೋಸ್ಕರ ಮತ್ತು ಬೇಟೆಯಲ್ಲಿ ಈ ಪ್ರಾಣಿಗಳು ವಶವಾಗುವುದಕ್ಕೋಸ್ಕರ ಇಂತಹ ಚಿತ್ರಗಳನ್ನು ಬರೆದು ಮಂತ್ರ ಪುರಸ್ಸರವನ್ನಾಗಿ ಮಾಡುವುದೇ ಈ ಚಿತ್ರಗಳ ಸೃಷ್ಟಿಗೆ ಮುಖ್ಯ ಕಾರಣ ಎನ್ನಬಹುದು. ಈ ಚಿತ್ರಗಳು ಮಾಂತ್ರಿಕೋದ್ದೇಶಿತವಾಗಿದ್ದರೂ ಶೈಲಿ ಮತ್ತು ನಿರೂಪಣೆಯಲ್ಲಿ ಶಕ್ತಿಶಾಲಿಯಾಗಿವೆ.

**ಅಡಿಟಿಪ್ಪಣಿಗಳು**

೧. ಮಟಪಾಲ್, ವಾಯ್, ೧೯೮೪, ಪೂರ್ವೋಕ್ತ.

೨. ಸುಂದರ ಅ.ಸಂ. ೧೯೯೭, ಪೂರ್ವೋಕ್ತ,

೩. ಸುಬ್ರಮಣ್ಯಂ ಕೆ.ವಿ., ೧೯೯೨, ಪೂರ್ವೋಕ್ತ, ಪು.೬.

೪. *ದಿ ಗ್ರ್ಯಾಂಡ್ ಕನನ್ಸ್, ಹಿಡನ್ ಆರ್ಟ್ ಗ್ಯಾಲರೀಸ್,* ೨೦೦೦, ಎನ್.ಜಿ., ಸಂ.೧೯೭, ನಂ.೪.

೫. ಗವಿಶೆಟ್ಟಿ, ಕೆ., ೧೯೯೫, ಅದೇ.

೬. ಸುಂದರ, ಅ., ೧೯೯೪, ಅದೇ ಪು.೨೪

೭. ತಿವಾರಿ, ಎಸ್., ೧೯೭೫, ಅದೇ ಜೆ.ಪಿ.ಎನ್.ಬಿ. ಸಂ.೨, ನಂ.೨

೮. ಬರ್ಕಿಟ್, ಎಂ.ಸಿ., ೧೯೯೨, ದಿ ಓಲ್ಡ್ ಸ್ಟೋನ್ ಏಜ್ ಎ ಸ್ಟಡಿ ಆಫ್ ಪೆಲಿಯೋಲಿಥಿಕ್ ಟೈಮ್ಸ್, ಪು.೧೭೨-೧೭೩

೯. ಸುಂದರ ಅ., ೧೯೯೪, ಅದೇ ಪು.೧೮-೨೦

## ಅಧ್ಯಾಯ ೭

# ಚಿತ್ರಗಳ ಕಾಲಮಾನ

೭.೧. ಚಿತ್ರಗಳ ನೆಲೆಗಳು ಮತ್ತು ಅವುಗಳ ಸಾಂಸ್ಕೃತಿಕ ಪರಿಸರ

೭.೨. ಚಿತ್ರಗಳ ಹೋಲಿಕೆ

೭.೩. ಚಿತ್ರಗಳ ತಾಂತ್ರಿಕ ಅಂಶಗಳು

ಮಾನವನ ಕಲಾ ಸೃಷ್ಟಿಯ ಮೊದಲ ಹೆಜ್ಜೆಗಳು ಪಶ್ಚಿಮ ಯುರೋಪಿನಲ್ಲಿ ಪ್ರಥಮ ಬಾರಿಗೆ ಕಂಡುಬಂದವು. ಕ್ರಿಸ್ತಪೂರ್ವ ಸುಮಾರು ೩೦,೦೦೦ ವರುಷಗಳ ಹಿಂದೆ ಪೂರ್ವ ಶಿಲಾಯುಗದ ಅಂತ್ಯ ಕಾಲದಲ್ಲಿ ಯುರೋಪಿನಲ್ಲಿ ಫ್ರಾನ್ಸ್, ಸ್ಪೇನ್ ಮತ್ತು ಆಫ್ರಿಕಾ ದೇಶದಲ್ಲಿ ಆದಿಮ ಚಿತ್ರಗಳು ಸೃಷ್ಟಿಯಾದವು. ಫ್ರಾನ್ಸ್‌ನ ಲಾಸ್‌ಕಾಕ್ಸ್ ಗುಹೆಯ ಚಿತ್ರಗಳು೧೭,೦೦೦ ವರ್ಷ, ಅಲ್ಟಿಮೈರಾ ಗವಿ ಚಿತ್ರಗಳು ೨೦.೦೦೦ ವರ್ಷ ಮತ್ತು ಮಾರ್ಸೆಲೇ ಬಳಿಯ ಕಾಸ್ಕ್ವರ್ ಗುಹೆಯ ಚಿತ್ರಗಳು ಮತ್ತು ಆಫ್ರಿಕಾದ ಗುಹೆಗಳ ಚಿತ್ರಗಳು ೨೭.೦೦೦ ವರ್ಷಗಳ ಹಳೆಯವೆಂದು ಗುರುತಿಸಲಾಗಿದೆ. ಅತ್ಯಂತ ಇತ್ತೀಚೆಗೆ ೧೯೯೪ರಲ್ಲಿ ಪತ್ತೆಯಾದ ಚೂವೆಟ್ ಗುಹಾ ಚಿತ್ರಗಳು ೩೦.೦೦೦ ವರ್ಷಗಳಷ್ಟು ಹಿಂದಿನವೆಂದು ಹೇಳಲಾಗಿದೆ.[೧] ಹೀಗೆ ಕ್ರಿಸ್ತಪೂರ್ವ ಸುಮಾರು ೩೦,೦೦೦ ವರ್ಷಗಳ ಹಿಂದೆ ಪ್ರಾರಂಭವಾದ ಕಲಾಸೃಷ್ಟಿಯ ಪ್ರಕ್ರಿಯೆಗಳು ಯುರೋಪ, ಆಫ್ರಿಕಾ ದೇಶಗಳಲ್ಲಿ ಪ್ರಾರಂಭವಾಗಿ, ಭಾರತಕ್ಕೂ ಧಾವಿಸಿತು. ನಮ್ಮ ದೇಶದ ಉದ್ದಗಲಕ್ಕೂ ಪ್ರಾಗಿತಿಹಾಸ ಕಾಲದ ಚಿತ್ರ ಕಲಾ ನೆಲೆಗಳಿವೆ. ಭಿಂಬೇಟ್ಕಾ, ಪಾಚಮಾರಿ, ಅದಂಗಡ್, ರೈಸಿನ್ ಮತ್ತು ಕರ್ನಾಟಕದ ಬಾದಾಮಿಯ ಹಿರೇಗುಡ್ಡ ಹಾಗೂ ಅರೇಗುಡ್ಡದ ಚಿತ್ರಗಳು ಸೂಕ್ಷ್ಮ ಶಿಲಾಯುಗ ಕಾಲದ ರಚನೆಗಳಾಗಿದ್ದು, ಅತ್ಯಂತ ಹಳೆಯ ಚಿತ್ರಗಳಾಗಿವೆ. ಇವುಗಳ ಕಾಲ ಕ್ರಿ.ಪೂ.ಸುಮಾರು ೯,೦೦೦ ದಿಂದ ೪,೦೦೦ದವರೆಗೆ ನಿರ್ಣಯಿಸಲಾಗಿದೆ.[೨] ೧೮೭೯ರಲ್ಲಿ ಪುರಾತತ್ವ ವಿಜ್ಞಾನಿ ಮಾರ್ಸೆಲಿನೋ ಸ್ಯಾಂಟು ವೋಲಾ ಆಕಸ್ಮಿಕವಾಗಿ ಸ್ಪೇನಿನ ಅಲ್ಟಿಮೈರಾ ಗುಹೆಯ ಚಿತ್ರಗಳನ್ನು ಶೋಧಿಸಿ ಬಹಿರಂಗ ಪಡಿಸಿದಾಗ ಅದನ್ನು ಯಾರೂ ನಂಬಲಿಲ್ಲ. ಮುಂದೆ ೨೩ ವರ್ಷಗಳ ತರುವಾಯ ೧೯೦೨ರಲ್ಲಿ ಪುರಾತತ್ವ ಶಾಸ್ತ್ರಜ್ಞ ಅಬ್ಬೇಹೆನ್ರಿ ಬ್ರೂಯಿ ಆ ಗವಿಯ ಪ್ರಾಚ್ಯಾವಶೇಷಗಳನ್ನು ಶೋಧಿಸಿ, ಗವಿಯ ಚಿತ್ರಗಳ ಪ್ರಾಚೀನತೆಯನ್ನು ಸಾಬೀತುಪಡಿಸ ಬೇಕಾಯಿತು. ಹೀಗೆ ಗವಿ ವರ್ಣ ಮತ್ತು ಬಂಡೆ ಚಿತ್ರಗಳ ಪ್ರಾಚೀನತೆ ಮತ್ತು ನಿರ್ದಿಷ್ಟ ಕಾಲವನ್ನು ಕುರಿತಾಗಿ ಹೇಳುವುದು ಸ್ವಲ್ಪ ಕಷ್ಟವೆಂದೇ ಹೇಳಬಹುದು. ಏಕೆಂದರೆ ವರ್ಣಚಿತ್ರ ಮತ್ತು ಬಯಲು ಬಂಡೆಯ ಚಿತ್ರಗಳ ಜೊತೆಗೆ ಕೆಲವೆಡೆಗಳಲ್ಲಿ ಇತಿಹಾಸ ಹಾಗೂ ಆಧುನಿಕ ಕಾಲದ ಚಿತ್ರಗಳು ಇವೆ. ಹೆಚ್ಚಾಗಿ ಬಂಡೆ ಚಿತ್ರಗಳುಳ್ಳ ನೆಲೆಗಳಲ್ಲಿ ಈ ರೀತಿಯಿದೆ. ಏಕೆಂದರೆ, ಪ್ರಾಚೀನ ಕಾಲದ ಚಿತ್ರಗಳು

ಕಣ್ಣಿಗೆ ಬಿದ್ದಾಗ ದನಕಾಯುವ ಹುಡುಗರು, ಕುರುಬರು ಕುತೂಹಲದಿಂದಲೂ, ಸಮಯ ಸ್ಫೂರ್ತಿಯಿಂದಲೂ ಪಕ್ಕದ ಮತ್ತೊಂದು ಬಂಡೆಯ ಮೇಲೆ ತಮಗೆ ತೋಚಿದಂತೆ ಮೂಡಿಸಬಹುದು. ಅನುಕೂಲವಾದ ಕಲ್ಲನ್ನು ತೆಗೆದುಕೊಂಡು ಬಂಡೆಯ ಮೇಲೆ ಕುಟ್ಟಿ ಚಿತ್ರಗಳನ್ನು ಮೂಡಿಸಬಹುದು. ಕೊಪ್ಪಳ-ಹಂಪಿ ಪ್ರದೇಶಕ್ಕೆ ಸಂಬಂಧಿಸಿದಂತೆ ಮಲ್ಲಾಪುರದ ಬಂಡೆ ಚಿತ್ರನೆಲೆ ೧ ಮತ್ತು ೨ರಲ್ಲಿ ಪ್ರಾಚೀನ ಚಿತ್ರಗಳ ಜೊತೆಗೆ ಇಂದಿನ ಕುಟ್ಟು ಚಿತ್ರಗಳನ್ನು ಕಾಣಬಹುದು. ಆದರೆ ಇಂತಹ ನೆಲೆಗಳಲ್ಲಿ ಇಂದಿನ ಕೊರೆದ ಚಿತ್ರಗಳು ಇರುವುದಿಲ್ಲ. ಹಾಗೂ ವರ್ಣಚಿತ್ರಗಳಲ್ಲಿ ಈ ರೀತಿ ತಕ್ಷಣ ಚಿತ್ರಗಳನ್ನು ಬಿಡಿಸುವುದು ಸಾಧ್ಯವಿಲ್ಲ. ಏಕೆಂದರೆ ಮೊದಲನೆಯದಾಗಿ ವರ್ಣಚಿತ್ರಗಳು ಅಷ್ಟು ಸರಳವಾಗಿ ಕಣ್ಣಿಗೆ ಬೀಳುವುದಿಲ್ಲ. ಬಿದ್ದರೂ ಅಂಥವುಗಳನ್ನು ಕಂಡು ಉದ್ರೇಕಿತನಾದ ಮತ್ತೋರ್ವನು ತಾನು ಹಾಗೆ ಬರೆಯಬೇಕೆಂದರೆ ಅವನು ಬಣ್ಣದ ಗಟ್ಟಿಗಳನ್ನು ಮತ್ತು ಚಿತ್ರಕ್ಕಾಗಿ ನೆಲೆಯನ್ನು ಹುಡುಕಬೇಕಾಗುತ್ತದೆ. ಇದಕ್ಕೆಲ್ಲಾ ಸಾಕಷ್ಟು ತಾಳ್ಮೆ ಇರಬೇಕಾಗುತ್ತದೆ. ಆದ್ದರಿಂದ ಒಂದು ಗವಿಯಲ್ಲಿ ಪ್ರಾಗೈತಿಹಾಸಿಕ ಚಿತ್ರಗಳೊಡನೆ ಆಧುನಿಕ ಕಾಲದ ಚಿತ್ರಗಳಿರುವುದು ಅಪರೂಪ. ಆದರೂ ಕೊಪ್ಪಳ-ಹಂಪಿ ಪ್ರದೇಶದ ತಿರುಮಲಾಪುರ ಮತ್ತು ಗೂಗಿ ಬಂಡೆಯ ಚಿತ್ರಿತ ಕಲ್ಲಾಸರೆಗಳು ಗ್ರಾಮಕ್ಕೆ ತೀರ ಸಮೀಪವಿದ್ದು ಅಲ್ಲಿ ಜನರು ವಿಶ್ರಾಂತಿ ಪಡೆಯುತ್ತಾರೆ. ಹೀಗಾಗಿ ಅವರು ಕುತೂಹಲದಿಂದ ಕಲ್ಲಾಸರೆಯ ವರ್ಣಚಿತ್ರಗಳ ಮೇಲೆ ತಾವು ಚಿತ್ರಗಳನ್ನು ಬರೆದಿದ್ದಾರೆ. ಇವು ಎರಡು ಅಪವಾದಾತ್ಮಕ.

ಮೇಲೆ ಸೂಚಿಸಿದಂತೆ ಗವಿವರ್ಣ ಮತ್ತು ಬಯಲು ಬಂಡೆಯ ಚಿತ್ರಗಳನ್ನು ಕಾಲದುದ್ದಕ್ಕೂ ಬೇರೆ ಬೇರೆ ಜನಾಂಗದವರೂ ಸೃಷ್ಟಿಸಿದ್ದಾರೆ. ಒಂದೇ ಸ್ಥಳದಲ್ಲಿಯ ಚಿತ್ರಗಳು ಬೇರೆ ಬೇರೆ ಕಾಲದವು ಆಗಿವೆ. ಬಹಳಷ್ಟು ಚಿತ್ರಗಳ ಕಾಲಮಾನವನ್ನು ನಿರ್ಧರಿಸುವುದು ಈ ಚಿತ್ರಗಳ ಅಧ್ಯಯನಕ್ಕೆ ಸಂಬಂಧಿಸಿದ ಕ್ಲಿಷ್ಟ ಸಮಸ್ಯೆಗಳಲ್ಲಿ ಒಂದು. ಆದರೂ ಅವುಗಳ ನೆಲೆ, ಸ್ಥಿತಿ, ಚಿತ್ರಗಳ ವಸ್ತು ನಿರೂಪಣಾ ಶೈಲಿ, ತಾಂತ್ರಿಕತೆ, ಸಮೀಪದ ಸಾಂಸ್ಕೃತಿಕ ನಿವೇಶನಗಳೊಡನೆ ಇದ್ದಿರಬಹುದಾದ ಸಂಬಂಧ, ಇತರೆಡೆಗಳಲ್ಲಿಯ ನಿರ್ದಿಷ್ಟ ಕಾಲಮಾನದ ವಸ್ತುಗಳೊಡನೆ ಹೋಲಿಕೆ ಇವೇ ಮೊದಲಾದವುಗಳ ಅಧ್ಯಯನದಿಂದ ಸ್ಥೂಲವಾಗಿ ತಕ್ಕಮಟ್ಟಿಗೆ ಇವುಗಳ ಕಾಲಮಾನವನ್ನು ಸೂಚಿಸಬಹುದು.

## ೭.೧. ಚಿತ್ರಗಳ ನೆಲೆಗಳು ಮತ್ತು ಅವುಗಳ ಸಾಂಸ್ಕೃತಿಕ ಪರಿಸರ

ಕೊಪ್ಪಳ-ಹಂಪಿ ಪ್ರದೇಶದ ಚಿತ್ರಗಳ ಕಾಲಮಾನವನ್ನು ಗುರುತಿಸುವಲ್ಲಿ ಮೊದಲಿಗೆ ಚಿತ್ರಿತ ನೆಲೆಗಳ ಸಾಂಸ್ಕೃತಿಕ ಪರಿಸರವನ್ನು ಗುರುತಿಸುವುದು ಅತ್ಯಂತ ಸಮಂಜಸವೆನಿಸುತ್ತದೆ. ಡಾ. ಸುಂದರ

ಅವರು[೩] ಈ ಮೊದಲು ಮತ್ತು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ನಾನು ಗುರುತಿಸಿದಂತೆ ಕೊಪ್ಪಳ -ಹಂಪಿ ಪ್ರದೇಶದ ಕಲಾ ನೆಲೆಗಳ ಸಾಂಸ್ಕೃತಿಕ ಪರಿಸರ ಇಂತಿದೆ.

| ಚಿತ್ರಿತ ನೆಲೆಗಳ ಸ್ಥಳ | | ಪ್ರಾಚೀನ ಸಾಂಸ್ಕೃತಿಕ ಪರಿಸರ |
|---|---|---|
| ೦೧. ಕೊಪ್ಪಳ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ |
| ೦೨. ಬಿಳೇಭಾವಿ | : | ಬೃಹತ್ ಶಿಲಾಯುಗ |
| ೦೩. ಇಂದರಗಿ | : | ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ |
| ೦೪. ನಾರಾಯಣಪೇಟೆ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ |
| ೦೫. ಬಂಡಿಹರ್ಲಾಪುರ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ |
| ೦೬. ಹೊಸಬಂಡಿಹರ್ಲಾಪುರ | : | ಬೃಹತ್ ಶಿಲಾಯುಗ |
| ೦೭. ಹಿರೇಬೆಣಕಲ್ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೦೮. ಚಿಕ್ಕಬೆಣಕಲ್ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೦೯. ಎಮ್ಮಿಗುಡ್ಡ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೧೦. ಗಡ್ಡಿ | : | ಬೃಹತ್ ಶಿಲಾಯುಗ |
| ೧೧. ಆಗೋಲಿ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೧೨. ಹಂಪಸದುರ್ಗ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೧೩. ರಾಮದುರ್ಗ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೧೪. ಬೊಮ್ಮಸಾಗರ ತಾಂಡ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ |
| ೧೫. ಆನೆಗುಂದಿ | : | ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ |
| ೧೬. ಅಂಜನಹಳ್ಳಿ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ |
| ೧೭. ಮಲ್ಲಾಪುರ | : | ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ |

೧೮. ತೆಂಬಾ : ಶಿಲಾ ತಾಮ್ರಯುಗದ ನೂತನ ಶಿಲಾಯುಗ

೧೯. ತಿರುಮಲಾಪುರ : ಶಿಲಾ ತಾಮ್ರ ಯುಗದ ನೂತನ ಶಿಲಾಯುಗ, ಆದಿ ಇತಿಹಾಸಕಾಲ, ಮಧ್ಯಯುಗ

೨೦. ಚಿಕ್ಕರಾಂಪುರ : ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ

೨೧. ಸಂಗಾಪುರ : ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ

೨೨. ಗೂಗಿಬಂಡಿ : ಬೃಹತ್ ಶಿಲಾಯುಗ

೨೩. ರಾಂಪುರ : ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ

೨೪. ಹಂಪಿ : ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಆದಿ ಇತಿಹಾಸ ಕಾಲ

೨೫. ಕಮಲಾಪುರ : ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ

೨೬. ವೆಂಕಟಾಪುರ : ಪೂರ್ವಭಾವಿ ಇತಿಹಾಸ ಕಾಲದ ಬೂದಿ ಗುಡ್ಡೆ, ಬೃಹತ್ ಶಿಲಾಯುಗ

೨೭. ನಾಗೇನಹಳ್ಳಿ : ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ

೨೮. ಸಿದ್ದಿಕೇರಿ : ಶಿಲಾ ತಾಮ್ರಯುಗದ ನೂತನ ಶಿಲಾಯುಗ, ಬೃಹತ್ ಶಿಲಾಯುಗ

೨೯. ಬಸಾಪಟ್ಟಣ : ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲ

ಆಯಾ ಚಿತ್ರಿತ ಗವಿ/ಕಲ್ಲಾಸರೆಗಳಲ್ಲಿ ಅಥವಾ ಸುತ್ತಮುತ್ತಲಿನ ಗವಿ ಪ್ರದೇಶಗಳಲ್ಲಿ ದೊರೆತ ಶಿಲಾಯುಧಗಳು, ಮಡಕೆ ಚೂರುಗಳು ಬೃಹತ್ ಶಿಲಾಯುಗದ ಶಿಲಾ ಸಮಾಧಿಗಳು ಮತ್ತಿತರ ಪ್ರಾಚ್ಯ ಅವಶೇಷಗಳು ಕಂಡುಬಂದಿದ್ದು ಅವುಗಳ ಆಧಾರದ ಮೇಲೆ ನೆಲೆಗಳ ಸಾಂಸ್ಕೃತಿಕ ಪರಿಸರವನ್ನು ನಿರ್ಧರಿಸಲಾಗಿದೆ.

## ೭.೨. ಚಿತ್ರಗಳ ಹೋಲಿಕೆ

ಕೊಪ್ಪಳ-ಹಂಪಿ ಪ್ರದೇಶದ ಕೆಲವು ಚಿತ್ರಗಳು ಬೇರೆ ಬೇರೆ ಕಾಲಮಾನಕ್ಕೆ ಸಂಬಂಧಿಸಿದ ಮಡಕೆಗಳ ಮೇಲಿನ ಚಿತ್ರಗಳನ್ನು ಹೋಲುತ್ತವೆ. ಉತ್ಖನನದಲ್ಲಿ ದೊರೆತ ಮಡಕೆಗಳ ಕಾಲಮಾನವನ್ನು

ವೈಜ್ಞಾನಿಕವಾಗಿ ನಿರ್ಧರಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಗವಿ ಚಿತ್ರಗಳ ಕಾಲಮಾನವನ್ನು ಹೋಲಿಕೆ ಮೂಲಕ ಸ್ವಲ್ಪ ಮಟ್ಟಿಗೆ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಅದೇ ರೀತಿ ಕೊಪ್ಪಳ-ಹಂಪಿ ಪ್ರದೇಶದ ಕೆಲವು ನೆಲೆಗಳ ರೇಖಾ ಚಿನ್ಹೆಗಳು, ಚಿತ್ರಗಳು ಹರಪ್ಪಾ ಸಂಸ್ಕೃತಿಯ ಮುದ್ರಿಕೆಯ ಪ್ರಾಣಿಗಳನ್ನು ಲಿಪಿಗಳನ್ನು ಹೋಲುತ್ತವೆ.

ಹರಪ್ಪಾ ಸಂಸ್ಕೃತಿಯ ಮುದ್ರಿಕೆಯಲ್ಲಿ ಗೂಳಿ ಚಿತ್ರವು ದಷ್ಟಪುಷ್ಟತೆ ಹಾಗೂ ಗಾಂಭೀರ್ಯತೆಗೆ ಪ್ರಸಿದ್ಧವಾಗಿದೆ. ಸ್ವಲ್ಪ ರೀತಿಯಲ್ಲಿ ಅದನ್ನೇ ಹೋಲುವ ಗೂಳಿಯ ಚಿತ್ರ ಮಲ್ಲಾಪುರ ೯ನೇ ಕಲ್ಲಾಸರೆಯಲ್ಲಿದೆ. ಹಿರೇಬೆನಕಲ್ಲಿನ ೫ನೇ ಗವಿಯ ಚಿತ್ರಗಳಲ್ಲಿ ಮನುಷ್ಯನ ಎರಡು ಚಿತ್ರಗಳಿದ್ದು, ಹರಪ್ಪಾ ಮುದ್ರಿಕೆಯಲ್ಲಿ ವೇಷ ಧರಿಸಿದ ಚಿತ್ರಕ್ಕೂ ದ್ವಿರೇಖಾ ಮನುಷ್ಯ ಚಿತ್ರಕ್ಕೂ ಮೆಟ್ಟೂರಿನ (ಉತ್ತರ ಅರ್ಕಾಟ್, ತಮಿಳುನಾಡು) ಬೃಹತ್ ಶಿಲಾಸಂಸ್ಕೃತಿಯ ಮನುಷ್ಯನ ಶಿಲಾ ಸೂಕ್ಷ್ಮ ಚಿತ್ರಕ್ಕೂ ಶೈಲಿಯಲ್ಲಿ ಅತಿ ಸಮೀಪವಿದೆ.[೪] ಅಂಜನಹಳ್ಳಿಯ ಗೂಳಿಯ ವರ್ಣಚಿತ್ರವು ಶಿಲಾತಾಮ್ರಯುಗದ ಮೃತ್ ಪಾತ್ರೆಗಳ ಮೇಲಿನ ಗೂಳಿಯ ಚಿತ್ರದಂತಿದೆ.[೫]

ಚಿಕ್ಕರಾಂಪುರದ ಒಂದನೇ ಗವಿಯಲ್ಲಿ ಒಂದು ಅಪರೂಪದ ಚಿತ್ರವಿದೆ. ಅದು ಬೃಹತ್ ಶಿಲಾವೃತ್ತ ಸಮಾಧಿಯ ಚಿತ್ರ, ವೃತ್ತಾಕಾರದಲ್ಲಿ ಕಲ್ಲುಗುಂಡುಗಳನ್ನಿಟ್ಟು ಮಧ್ಯದಲ್ಲಿ ಶವ ಹಾಗೂ ಮಡಿಕೆ(?)ಗಳನ್ನು ಇರಿಸಿದಂತಿದೆ. ಈ ಚಿತ್ರ ಬ್ರಹ್ಮಗಿರಿಯ ಉತ್ಖನನದಲ್ಲಿ ಕಂಡು ಬಂದ ಶಿಲಾವೃತ್ತ ಸಮಾಧಿಯನ್ನು ಹೋಲುತ್ತದೆ. ವೆಂಕಟಾಪುರದ ಒಂದನೇ ಕಲ್ಲಾಸರೆಯಲ್ಲಿಯ ಎರಡು ಚಿನ್ಹೆಗಳು ಹರಪ್ಪಾ ಸಂಸ್ಕೃತಿಯ ಮುದ್ರಿಕೆಗಳಲ್ಲಿ ಬಾರಿ ಬಾರಿಗೂ ಕಾಣಿಸಿಕೊಳ್ಳುವ ತುದಿಯಲ್ಲಿ ಆ ಕಡೆ ಈ ಕಡೆ ಒಂದೊಂದು ಬಾಹ್ಯ ಅಡ್ಡರೇಖೆಯುಳ್ಳ ರೋಮನ್ ಲಿಪಿಯ U ಮತ್ತು ಅಶೋಕನ ಕಾಲದ ಬ್ರಾಹ್ಮಿ ಲಿಪಿಯ 'ಮ' ಅಕ್ಷರವನ್ನು ಹೋಲುತ್ತದೆ.[೬]

ಬಿಳೇಭಾವಿಯಲ್ಲಿಯ ಸರಳ ವರ್ಣಚಿತ್ರ ರೇಖಾ ಸಂಕೇತಗಳು ಒಂದು ಗುಣಾಕಾರದ ಚಿನ್ಹೆಯಾಗಿದ್ದು, ಎರಡು ಬದಿಯ ರೇಖೆಗಳ ತುದಿಗಳನ್ನು ಬಾಗಿದ ರೇಖೆಗಳಿಂದ ಕೂಡಿಸಲ್ಪಟ್ಟಿದೆ. ಇದು ಬಹಳ ಮಟ್ಟಿಗೆ ಹರಪ್ಪಾ ಲಿಪಿಯ ಒಂದು ಅಕ್ಷರಕ್ಕೆ ಸಮೀಪವಾಗಿದೆ. ಹರಪ್ಪಾ ಲಿಪಿಯಲ್ಲಿ ಇಂಥ ಚಿನ್ಹೆಯಲ್ಲಿ ಒಂದು ಬದಿಯ ಎರಡು ತುದಿಗಳು ಒಳಬಾಗಿರುತ್ತವೆ, ಕೂಡಿರುವುದಿಲ್ಲ. ಮತ್ತೊಂದು ಸೂರ್ಯ ಚಿತ್ರದಂತಿದೆ. ಇಲ್ಲಿ ಕೇಂದ್ರದ ಮೂರು ವೃತ್ತಗಳು ಹೊರಬದಿಯ ರೇಖೆಯ ಬೆಳಕಿನ ಕಿರಣಗಳಂತೆ ಸಣ್ಣ ಸಣ್ಣ ಅಡ್ಡರೇಖೆಗಳು ಸುತ್ತಲೂ ಇವೆ. ಪ್ರಾಯಶಃ ಇದು ಸೂರ್ಯ ಮಂಡಲವನ್ನು ಹೆಚ್ಚು ನೈಜವಾಗಿ ಪ್ರತಿನಿಧಿಸಬಹುದು. ಈ ಪ್ರಕಾರದ ಮಂಡಲವೂ ಕೂಡ ಮೊಹೆಂಜೋದಾರೊದಲ್ಲಿ

ದೊರೆತ ಹರಪ್ಪಾ ನಾಗರಿಕತೆಯ ತಾಮ್ರದ ಪಟ್ಟಿಕೆಗಳಲ್ಲಿ ಇದೆ.[೭] ಹಿರೇಬೆಣಕಲ್ಲಿನ ೫ನೇ ಗವಿಯಲ್ಲಿ ಎರಡು ವೃತ್ತ ಚಿತ್ರಗಳಿವೆ. ಅವು ಹರಪ್ಪಾ ಮುದ್ರಿಕೆಯ ವೃತ್ತವನ್ನು ಹೋಲುತ್ತವೆ, ಆದರೆ ಲಿಪಿ ವೃತ್ತಕ್ಕಿಂತ ಈ ವೃತ್ತದಲ್ಲಿ ಎರಡು ರೇಖೆ ಹೆಚ್ಚಿಗಿವೆ. ಹಿರೇಬೆಣಕಲ್ಲಿನ ೨ ನೇ ಕಲ್ಲಾಸರೆಯಲ್ಲಿ ಮೀನಿನ ಆಕಾರದ ಒಂದು ದೊಡ್ಡ ಚಿತ್ರವಿದೆ. ಇದು ಹರಪ್ಪಾ ಮುದ್ರಿಕೆಯ ಲಿಪಿ, ಮೀನಿನ ಚಿತ್ರದಂತಿದೆ. ಆದರೆ ಇಲ್ಲಿ ಕೆಳಗಿನ ಬಾಲವಿಲ್ಲ.

ಹೊಸ ಬಂಡಿಹರ್ಲಾಪುರದ ೩ನೇ ಕಲ್ಲಾಸರೆಯ ಬೃಹತ್ ಕೋಣ ಚಿತ್ರದ ಮುಂಡದ ರಚನೆಯು ಹರಪ್ಪಾ ನಾಗರೀಕತೆಯ ಪಶುಪತಿ ಮುದ್ರೆಯಲ್ಲಿ ಕೋಣ ಚಿತ್ರದ ಮುಂಡದಂತಿದೆ. ಮುಂಡದಲ್ಲಿ ಎರಡಕ್ಕೂ ಮುಂದಿನ ಕಾಲು ಹಾಗೂ ಹಿಂದಿನ ಕಾಲಿನ ಮೇಲೆ ದೇಹದ ಮಡಿಕೆಗಳನ್ನು ಸೂಚಿಸುವ ರೇಖೆಗಳಿವೆ. ಹಂಪಿಯ ೧ನೇ ಕಲ್ಲಾಸರೆಯ ಮೊಸಳೆಯ ಚಿತ್ರವಿದೆ. ಅದು ಹರಪ್ಪಾ ಮುದ್ರಿಕೆಗಳಲ್ಲಿ ಈ ಪ್ರಾಣಿಯ ಚಿತ್ರವನ್ನು ಮೂಡಿಸುವ ಪದ್ಧತಿಯನ್ನು ನೆನಪಿಗೆ ತರುತ್ತದೆ.

ಹಿರೇಬಣಕಲ್ಲಿನ ೧ನೇ ಕಲ್ಲಾಸರೆಯ ಒಬ್ಬ ಮನುಷ್ಯನ ಕೈಯಲ್ಲಿನ ಮೊನೆಯುಳ್ಳ ಈಟಿ ಹಾಗೂ ಹಂಪಿಯ ೧ನೇ ಗವಿಯ, ಕೊಪ್ಪಳದ ೨ನೇ ಗವಿ ಮತ್ತು ಆನೆಗುಂದಿಯ ಮೂರನೆಯ ಗವಿಯ ಬಾಣದ ಮೊನೆಯ ಚಿತ್ರಗಳು ಕ್ರಮವಾಗಿ ಎಲ್ಲೇಶ್ವರ(ಗುಂಟೂರು ಜಿಲ್ಲೆ, ಆಂದ್ರಪ್ರದೇಶ) ಹಾಗೂ ಕೊಮರನ ಹಳ್ಳಿಯ (ಹರಿಹರ ತಾಲೂಕು, ದಾವಣಗೆರೆ ಜಿಲ್ಲೆ) ಬೃಹತ್ ಶಿಲಾ ಸಮಾಧಿಗಳಲ್ಲಿ ದೊರಕಿದ ಕಬ್ಬಿಣದ ಆಯುಧಗಳ ಪ್ರತಿರೂಪವೋ ಎನ್ನುವಂತಿದೆ.[೮]

ಹಿರೇಬೆಣಕಲ್ಲಿನ ೧ನೇ ಕಲ್ಲಾಸರೆಯಲ್ಲಿ ಅಶ್ವಸವಾರರ ಚಿತ್ರಗಳಲ್ಲಿ ಸವಾರರು ಕುದುರೆಯ ಕಡಿವಾಣವನ್ನು ಹಿಡಿದ ರೀತಿ ವಿಶೇಷವಾಗಿದೆ. ಕಡಿವಾಣ ಸಾಮಾನ್ಯವಾಗಿ ಬಾಯಿಯಿಂದ ಕತ್ತಿನ ಭಾಗದ ಮೂಲಕ ಹಿಡಿಯಲಾಗುತ್ತದೆ. ಆದರೆ ಇಲ್ಲಿ ಕಡಿವಾಣ ಮುಖದ ಮುಂದಿನಿಂದ ತಲೆಯ ಮೇಲಿಂದ ಸವಾರನ ಕೈಯಲ್ಲಿದೆ. ಇದೇ ರೀತಿ ಲಗಾಮು ಹಿಡಿದ ರೀತಿಯ ಚಿತ್ರ ದಕ್ಷಿಣ ಸ್ವೀಡನ್ನಿನ ಕಿವಿಕ್ ಎಂಬಲ್ಲಿದೆ. ಅಲ್ಲಿಯ ಕಂಚಿನ ಯುಗದ ಒಂದು ಕಲ್ಲು ಸಮಾಧಿಯ ಮುಚ್ಚಳದ ಮೇಲಿನ ಗೀರಿದ ಜೋಡಿ ಕುದುರೆ ರಥದ ಚಿತ್ರದಲ್ಲಿಯ ಲಗಾಮನ್ನು ಹಿಡಿದ ರೀತಿಗೆ ಸ್ಪಷ್ಟವಾಗಿ ಹೋಲುತ್ತದೆ.[೯]

## ೭.೩. ಚಿತ್ರಗಳ ತಾಂತ್ರಿಕ ಅಂಶಗಳು

ಚಿತ್ರಗಳ ತಾಂತ್ರಿಕ ಅಂಶಗಳಾದ ವರ್ಣ, ಶೈಲಿ ಮತ್ತು ರಚನಾ ತಂತ್ರಗಳ ಆಧಾರದ ಮೇಲೆ ಚಿತ್ರಗಳ ಕಾಲವನ್ನು ನಿರ್ಧರಿಸಬಹುದು.

ಕೊಪ್ಪಳ-ಹಂಪಿ ಪ್ರದೇಶಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಕೆಮ್ಮಣ್ಣು ಬಣ್ಣ ಮತ್ತು ಅದರಲ್ಲೇ ನೇರಳೆ ಕೆಂಪುವರ್ಣ ಹಾಗೂ ಬಿಳಿ ಬಣ್ಣ ಮುಖ್ಯವಾಗಿ ಬಳಕೆಯಾಗಿವೆ. ಕೆಂಪು ಬಣ್ಣ ಸಾರ್ವತ್ರಿಕವಾಗಿ ಬಳಕೆಯಾಗಿದೆ. ಜಗತ್ತಿನ ವಿವಿಧ ಭಾಗಗಳ ಚಿತ್ರಗಳಲ್ಲಿ ಹೆಚ್ಚಿನವು ಇದೇ ಬಣ್ಣದಿಂದ ರಚಿತವಾಗಿವೆ. ಮತ್ತು ಪ್ರಾಚೀನ ಚಿತ್ರಗಳೆಂದು ಗುರುತಿಸಲಾಗಿರುವ ಹೆಚ್ಚಿನ ಚಿತ್ರಗಳು ಕೆಮ್ಮಣ್ಣು ಬಣ್ಣದಲ್ಲಿವೆ. ಈ ಚಿತ್ರಗಳು ಶೈಲಿಯಿಂದ ವಿಶಿಷ್ಟವಾದ ರಚನೆಗಳಾಗಿರುತ್ತವೆ. ಸಾಮಾನ್ಯವಾಗಿ ಮನುಷ್ಯರ, ಪ್ರಾಣಿಗಳ ಬಿಡಿ ಚಿತ್ರಗಳು, ಸಮೂಹ ಚಿತ್ರಗಳಿರುತ್ತವೆ. ಇವು ಛಾಯಾ ಇಲ್ಲವೇ ರೇಖಾ ರೂಪದಲ್ಲಿರುತ್ತವೆ. ಕೆಲವು ಗವಿಗಳಲ್ಲಿ ಸಮೂಹ ನೃತ್ಯದ ಮನುಷ್ಯರ ಸಾಲುಗಳು, ಸಾಲಾಗಿ ನಿಂತ ಪ್ರಾಣಿಗಳ ಚಿತ್ರಗಳಿರುತ್ತವೆ. ಪ್ರಾಣಿ ಮತ್ತು ಮನುಷ್ಯ ಚಿತ್ರಗಳಲ್ಲಿ ಕಣ್ಣು, ಕಿವಿ, ಮೂಗು, ಬಾಯಿ, ಅಪರೂಪವಾಗಿ ಕೈಬೆರಳು, ಪಾದಗಳನ್ನು ಸೂಚಿಸಲಾಗಿರುತ್ತದೆ. ಇಂಥ ಚಿತ್ರಗಳು ಬೆಟ್ಟಗಳ ಒಳಭಾಗದ ಪ್ರದೇಶದಲ್ಲಿರುತ್ತವೆ. ಗವಿ, ಕಲ್ಲಾಸರೆಗಳು ಸ್ವಲ್ಪ ದುರ್ಗಮವಾದ ಸ್ಥಳದಲ್ಲಿರುತ್ತವೆ. ಈ ಚಿತ್ರ ನೆಲೆಗಳ ಸುತ್ತಮುತ್ತ ಶಿಲಾಯುಗ ಸಂಸ್ಕೃತಿಯ ಪ್ರಾಚ್ಯಾವಶೇಷಗಳ ಹೊರತು ನಂತರ ಕಾಲದ ಅವಶೇಷಗಳು ದೊರೆಯುವುದು ತೀರ ವಿರಳ. ಕೆಲವು ಚಿತ್ರಗಳು ನಿರೂಪಣೆ ದೃಷ್ಟಿಯಿಂದ ಉತ್ತಮ ಮಟ್ಟದ ಕಲಾಕೃತಿಗಳಾಗಿವೆ ಎನ್ನಬಹುದು.

ಚಿತ್ರಗಳ ಪ್ರಮಾಣ ಮತ್ತು ರಚನಾ ವಿಧಾನಗಳಿಂದ ಕೂಡ ಅವುಗಳ ಕಾಲ ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಮಲ್ಲಾಪುರದ ಖಾನಸಾಬನ ಗವಿ (೩) ಹಿರೇಬೆಣಕಲ್ಲಿನ ೨ ಮತ್ತು ೧೭, ಚಿಕ್ಕಬೆಣಕಲ್ಲಿನ ೩ ನಾರಾಯಣಪೇಟೆಯ ೧, ರಾಮದುರ್ಗ ೧ ಬೊಮ್ಮಸಾಗರತಾಂಡ ೧ ಮತ್ತು ಹೊಸಬಂಡಿಹರ್ಲಾಪುರಗಳ ೩ನೆಯ ಕಲ್ಲಾಸರೆಗಳಲ್ಲಿ ಮನುಷ್ಯ ಪ್ರಾಣಿಗಳ ಚಿತ್ರಗಳು ಬೃಹತ್ ಪ್ರಮಾಣದಲ್ಲಿವೆ. ಕನಿಷ್ಟ ೨ ಮೀಟರದಿಂದ ೧೦ ಮೀಟರ್‌ವರೆಗೆ ಇವೆ. ಮತ್ತು ಇವುಗಳಲ್ಲಿ ಕೆಲವು ಚಿತ್ರಗಳು ಕೈಗೆಟುಕುವ ಸ್ಥಳದಲ್ಲಿಲ್ಲ. ಅವು ನೆಲದಿಂದ ಕನಿಷ್ಟ ೬ ಮೀಟರ್‌ದಿಂದ ೧೦ ಮೀಟರ್ ಎತ್ತರದಲ್ಲಿವೆ. ಇಷ್ಟು ದೊಡ್ಡ ಅಳತೆಯ ಮತ್ತು ಎತ್ತರದ ಸ್ಥಳಗಳಲ್ಲಿ ಚಿತ್ರ ಬಿಡಿಸುವುದು ಪ್ರಯಾಸದ ಕೆಲಸವೇ ಸರಿ. ಸಾಮಾನ್ಯವಾಗಿ ಚಿತ್ರವೇ ಪ್ರಧಾನವಾದ ಅಭಿವ್ಯಕ್ತಿ ಮಾಧ್ಯಮವಾಗಿದ್ದ ಸಂದರ್ಭದಲ್ಲಿ ಮಾತ್ರ ಚಿತ್ರ ರಚನೆಕಾರರು ತಮ್ಮೆಲ್ಲ ಬೌದ್ಧಿಕ ಮತ್ತು ದೈಹಿಕ ಶ್ರಮವನ್ನು ವಿನಿಯೋಗಿಸಿ ಇಂಥ ಚಿತ್ರಗಳನ್ನು ಬಿಡಿಸಿರಲು ಸಾಧ್ಯ. ಎತ್ತರವಾದ ಸ್ಥಳದಲ್ಲಿ ಚಿತ್ರಗಳನ್ನು ಬಿಡಿಸಬೇಕಾದ ಸಂದರ್ಭದಲ್ಲಿ ಎಂತಹದೋ ಅಟ್ಟಣಿಗೆಯನ್ನು ಕಟ್ಟಿಕೊಂಡಿರಬೇಕೆಂದು ಊಹಿಸಬಹುದು. ಸಾಮಾನ್ಯವಾಗಿ ಈ ಬೃಹತ್ ಚಿತ್ರ ನೆಲೆಗಳ ಸುತ್ತಮುತ್ತ ಬೃಹತ್ ಶಿಲಾಯುಗದ ಶಿಲಾ

ಸಮಾಧಿಗಳನ್ನು ಕಾಣಬಹುದು. ಅವು ಕೂಡ ಅಚ್ಚರಿಯ ನಿರ್ಮಾಣಗಳು. ದೊಡ್ಡ ದೊಡ್ಡ ಬಂಡೆಗಳನ್ನು ಎಬ್ಬಿಸಿ ನಿರ್ದಿಷ್ಟ ಆಕಾರದಲ್ಲಿ ಕತ್ತರಿಸಿ ಮನೆಯಂತೆ ನಿಲ್ಲಿಸಿರುವ ರೀತಿ ಆಶ್ಚರ್ಯದಾಯಕ. ಅವುಗಳ ನಿರ್ಮಿತಿಯ ಶ್ರಮದ ಹಿನ್ನೆಲೆಯಲ್ಲಿ, ಬೃಹತ್ ಪ್ರಮಾಣದ ಮತ್ತು ಎತ್ತರ ಸ್ಥಳದಲ್ಲಿರುವ ಚಿತ್ರಗಳು ಕೂಡ ಅದೇ ಸಂಸ್ಕೃತಿಯ ಅಂದರೆ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ ಕಾಲದ ಜನರ ನಿರ್ಮಾಣಗಳೆಂದು ಸ್ಪಷ್ಟವಾಗಿ ಹೇಳಬಹುದು.

ಚಿತ್ರಗಳ ರಚನಾ ಶೈಲಿಯಿಂದ ಕೂಡ ಕಾಲಮಾನವನ್ನು ಗುರುತಿಸಬಹುದು. ಮಲ್ಲಾಪುರದ ವಾನಭದ್ರೇಶ್ವರ ಬೆಟ್ಟ ಪರಿಸರದಲ್ಲಿ ಅನೇಕ ಚಿತ್ರಿತ ಗವಿಗಳಿವೆ. ದೇವಾಲಯದ ಎದುರಿನಲ್ಲಿ ಅನೇಕ ಗವಿಗಳಿವೆ. ಅಲ್ಲೆಲ್ಲಾ ಸಾಕಷ್ಟು ಸಂಖ್ಯೆಯಲ್ಲಿ ನೂತನ ಶಿಲಾಯುಗದ ನಿರ್ಮಾಣ ಹಂತದ ಆಯುಧಗಳು ಹರಡಿವೆ. ಮತ್ತು ಕೆಲವು ಪೂರ್ಣ ಸಿದ್ಧವಾದ ಆಯುಧಗಳು, ತೂತುಳ್ಳ ಮಡಕೆ ಚೂರುಗಳು, ಅರೆಯುವ ಸಾಧನಗಳು ಮತ್ತಿತರ ಉಪಕರಣಗಳು ಕಂಡುಬಂದವು. ಇಲ್ಲಿಯ ಒಂದು ಗವಿಯ ಛಾವಣಿಯಲ್ಲಿ ದ್ವಿತ್ರಿಕೋನಾಕಾರ ಮುಂಡದ ಒಂದು ಚಿಕ್ಕ ಮನುಷ್ಯ ಚಿತ್ರವಿದೆ. (೧೫ ಸೆಂ.ಮೀ ಎತ್ತರ) ಇದು ಛಾಯಾರೂಪದ್ದು, ಕೆಂಪು ವರ್ಣದಲ್ಲಿದೆ. ಕಾಲುಗಳನ್ನು ಅಗಲಿಸಿ ನಿಂತು ಕೈಗಳನ್ನು ಕೆಳಕ್ಕಿಳಿಸಿದೆ. ಕೈಕಾಲುಗಳು ಪೂರ್ಣರೂಪದಲ್ಲಿ ಇಲ್ಲ. ಗವಿಯಲ್ಲಿ ದೊರೆಯುವ ಮೇಲಿನ ಪ್ರಾಚ್ಯಾವಶೇಷಗಳ ಹಿನ್ನಲೆಯಲ್ಲಿ ಚಿತ್ರ ಶಿಲಾತಾಮ್ರ ಯುಗದ ಕಾಲದ್ದೆಂದು ಬಲವಾಗಿ ತರ್ಕಿಸಬಹುದು. ಬೃಹತ್ ಶಿಲಾಯುಗದ ನೆಲೆ ಹಿರೇಬೆನಕಲ್ಲಿನ ಗವಿಗಳಲ್ಲಿರುವ ಮನುಷ್ಯ ಚಿತ್ರಗಳಿಗಿಂತ ಇದು ಭಿನ್ನ ರಚನೆಯದಾಗಿದೆ. ಹಾಗಾಗಿ ಇದರ ಆಧಾರದ ಮೇಲೆ ಈ ಶೈಲಿಯ ಮನುಷ್ಯ ಚಿತ್ರಗಳನ್ನು ಶಿಲಾತಾಮ್ರಯುಗದ ನೂತನ ಶಿಲಾಯುಗ ಸಂಸ್ಕೃತಿಯ ಕಾಲದವೆಂದು ಹೇಳಬಹುದು.

ಸಂಗಾಪುರದ ಕರಡಿವಟ್ಲಗುಡ್ಡದ ಚಿತ್ರಗಳು ಹೆಚ್ಚಾಗಿ ಮೇಲಿನ ಶೈಲಿಯಲ್ಲಿವೆ. ಮತ್ತು ಇಲ್ಲಿ ಶಿಲಾ ತಾಮ್ರಯುಗದ ಆಯುಧಗಳು ಮತ್ತು ಚಕ್ಕೆಗಳು ದೊರೆಯುತ್ತವೆ. ಹಾಗಾಗಿ ಇವೆಲ್ಲಾ ಆಕಾಲದ ರಚನೆಯೆಂದು ಹೇಳಬಹುದು. ಬೃಹತ್ ಶಿಲಾಯುಗದ ನೆಲೆಗಳಾದ ಹಂಪಿ (೫), ಮಲ್ಲಾಪುರ (೧,೩,೪) ಹಿರೇಬೆಣಕಲ್ (೨,೪) ಚಿಕ್ಕಬೆಣಕಲ್ (೩) ಮತ್ತು ನಾರಾಯಣಪೇಟೆಯ (೧) ಮೈಮೇಲೆ ಗೆರೆಯುಳ್ಳ ಮನುಷ್ಯ ಚಿತ್ರಗಳು ಸ್ಪಷ್ಟವಾಗಿ ಬೃಹತ್ ಶಿಲಾಯುಗದ ಕಾಲದವೆಂದು ಹೇಳಬಹುದು. ಇಂಥ ಚಿತ್ರಗಳು ಆಫ್ರಿಕಾ ದೇಶದ ಸಹರಾ ಎಂಬಲ್ಲಿ ಕಂಡುಬಂದಿವೆ.

ಈ ಅಂಶಗಳ ಹಿನ್ನಲೆಯಲ್ಲಿ ಕೊಪ್ಪಳ-ಹಂಪಿ ಪ್ರದೇಶದ ಕೆಮ್ಮಣ್ಣು ವರ್ಣದ ವಿಶೇಷವಾಗಿ ಕೊಪ್ಪಳ, ಹಿರೇಬೆಣಕಲ್, ಆಗೋಲಿ, ಆನೆಗುಂದಿ, ಬಂಡಿಹರ್ಲಾಪುರ, ಹಂಪಿ ಹಾಗೂ ಅವುಗಳ

ಸುತ್ತಮುತ್ತಲಿನ ಪ್ರದೇಶದ ವರ್ಣಚಿತ್ರಗಳು ಬಹುಶ: ಶಿಲಾತಾಮ್ರದ ಕೊನೆಯ ಹಂತ (ಕ್ರಿ.ಪೂವಸು.೧೪೦೦-೮೦೦), ಬೃಹತ್ ಶಿಲಾಸಂಸ್ಕೃತಿಯ ಆದಿ ಮಧ್ಯಭಾಗದ (ಕ್ರಿ.ಪೂ.ಸು.೧೦೦೦-೫೦೦) ಕಾಲದ್ದೆಂದು ನಿರ್ಣಯಿಸಬಹುದು.[೧೦]

ಬಯಲು ಬಂಡೆ ಚಿತ್ರಗಳಲ್ಲಿ ಮಲ್ಲಾಪುರದ ಎರಡನೇ ನೆಲೆಯ ಗೂಳಿ, ಎತ್ತು ಮತ್ತು ಜಿಂಕೆ ಚಿತ್ರಗಳು ಅಗೋಲಿಯ ತಿರುಗುಳಿಗಳು, ಪಾದಗಳ ಕೊರೆದ ಚಿತ್ರ, ಬಸಾಪಟ್ಟಣದ, ಕಮಲಾಪುರದ ಎತ್ತಿನ ಚಿತ್ರಗಳು, ಸಿದ್ದಿಕೇರಿಯ, ನಾಗೇನಹಳ್ಳಿ ಮತ್ತು ಹಿರೇಬೆನಕಲ್ಲಿನ ಕುಳಿ ಚಿತ್ರಗಳು ಶೈಲಿ ರಚನೆ ಮತ್ತು ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ಕಬ್ಬಿಣಯುಗ ಬೃಹತ್ ಶಿಲಾಯುಗ ಸಂಸ್ಕೃತಿಯ ಆದಿ ಮಧ್ಯಭಾಗದ ಕಾಲದವೆಂದು ನಿರ್ಧರಿಸಬಹುದು.

ಬಿಳಿಬಣ್ಣದ ಚಿತ್ರಗಳು ವ್ಯಾಪಕವಾಗಿಲ್ಲ ಅಲ್ಲಲ್ಲಿ ಕೆಲವೇ ಚಿತ್ರಗಳಿವೆ. ಮತ್ತು ಶೈಲಿ, ರಚನೆಯ ದೃಷ್ಟಿಯಿಂದ ಕನಿಷ್ಟ ಮಟ್ಟದಲ್ಲಿವೆ. ಮತ್ತು ಅವು ವೈವಿಧ್ಯಮಯವಾಗಿಯೂ ಇಲ್ಲ. ಚಿತ್ರಗಳ ನೆಲೆ ಕೆಂಪುವರ್ಣದ ಚಿತ್ರಗಳಂತೆ ವಿಶಿಷ್ಟವಾಗಿಲ್ಲ. ಸಣ್ಣಪುಟ್ಟ ಕಲ್ಲಾಸರೆಗಳಲ್ಲಿ ಈ ಚಿತ್ರಗಳಿವೆ ಮತ್ತು ಕೆಲವೇ ಚಿತ್ರಗಳನ್ನು ಹೊರತುಪಡಿಸಿ ಇದರಲ್ಲಿ ಬೆರಳಿನಿಂದ ಮೂಡಿಸಿದಂತೆ ಕಡ್ಡಿರೂಪದ ಮನುಷ್ಯ ಪ್ರಾಣಿಗಳ ಚಿತ್ರಗಳಿವೆ. ಇಂಥ ಚಿತ್ರಗಳು ಬೆಟ್ಟದ ತೀರ ಒಳಭಾಗದಲ್ಲಿ ಇಲ್ಲ. ಗ್ರಾಮಗಳ ಜನಸಂಪರ್ಕದ ಪ್ರದೇಶಗಳಲ್ಲಿವೆ. ಈ ಎಲ್ಲಾ ಅಂಶಗಳಿಂದ ಕೊಪ್ಪಳ-ಹಂಪಿ ಪ್ರದೇಶದ ಬಿಳಿವರ್ಣದ ಚಿತ್ರಗಳ ಇತಿಹಾಸ ಆರಂಭಕಾಲ ಮತ್ತು ಆನಂತರದ ಇತಿಹಾಸ ಕಾಲದವೆಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ವಾಸುದೇವ್ ಎನ್., ೧೯೯೯, **ಪೂರ್ವೋಕ್ತ**, ಪು.೭

೨. ಶರ್ಮ ಆರ್.ಎಸ್., ೧೯೯೯, **ಪ್ರಾಚೀನ ಭಾರತ**

೩. ಸುಂದರ, ಅ., ೧೯೯೭, **ಪೂರ್ವೋಕ್ತ**, ಪು.೨೮೨-೨೮೪

೪. ಅದೇ, ೧೯೯೪, **ಪೂರ್ವೋಕ್ತ**, ಪು.೫೩

೫. ಅದೇ,

೬. ಅದೇ ಪು.೪೬

೭.ಅದೇ ಪು.೫೧

೮. ಅದೇ ಪು.೫೪

೯. ಅದೇ

೧೦. ಅದೇ

ಕೊಪ್ಪಳ-ಹಂಪಿ ಪ್ರದೇಶವು ಮೇಲೆ ವಿವರಿಸಿದಂತೆ ಭೌಗೋಳಿಕವಾಗಿ ಸಶಕ್ತ ಪ್ರದೇಶವಾಗಿದೆ. ಇಲ್ಲಿ ನದಿ, ಹಳ್ಳಗಳ ನೀರಿನ ಅನುಕೂಲತೆ, ಬೆಟ್ಟ-ಗುಡ್ಡಗಳ ವಾಸ ಯೋಗ್ಯತೆಯಿಂದ ಇದನ್ನು ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನ ಚಟುವಟಿಕೆಯ ಸ್ಥಳವನ್ನಾಗಿ ಮಾಡಿಕೊಂಡಿದ್ದಾನೆ. ಈ ಪ್ರದೇಶದಲ್ಲಿ ದೊರೆತಿರುವ ಪ್ರಾಚ್ಯಾವಶೇಷಗಳ ಆಧಾರದಿಂದ ಶಿಲಾತಾಮ್ರಯುಗದ ಕಾಲದಿಂದ ಇಲ್ಲಿಯ ಮಾನವ ಜೀವನದ ಸಂಗತಿಗಳು ತಿಳಿಯುತ್ತವೆ. ತಾಮ್ರಯುಗದ ನೂತನ ಶಿಲಾಯುಗ ಸಂಸ್ಕೃತಿ ನಂತರದ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ ಈ ಪ್ರದೇಶದಲ್ಲಿ ಸಾಂದ್ರವಾಗಿ ಬೆಳೆದಿತ್ತು. ಈ ಕಾಲದ ಅನೇಕ ಶಿಲಾಸಮಾಧಿ ನೆಲೆಗಳು ಈ ಪ್ರದೇಶದ ಕೊಪ್ಪಳಿಂದ ಗಂಗಾವತಿಯವರೆಗೆ, ಶಿವಪುರದಿಂದ ಆನೆಗುಂದಿಯವರೆಗೆ, ಅಗೋಲಿಯಿಂದ ಬಂಡ್ರಾಳವರೆಗೆ ಬೆಟ್ಟ-ಗುಡ್ಡಗಳಲ್ಲಿ ಕಂಡುಬರುತ್ತವೆ. ತದನಂತರ ಆದಿ ಇತಿಹಾಸ ಕಾಲದ ಸಂಸ್ಕೃತಿಯಿಂದ ಪ್ರಸ್ತುತದವರೆಗೆ ಅನುಚಾನವಾಗಿ ಇಲ್ಲಿ ಮಾನವನ ಜೀವನ ಸಂಸ್ಕೃತಿ ವಿಕಾಸವಾಗುತ್ತಾ ಬಂದಿದೆ.

ಮನುಷ್ಯ ಶಿಲಾಯುಗದ ಜೀವನ ನಡೆಸುತ್ತಿದ್ದಾಗ ಅವನು ತನ್ನ ಭಾವನೆಗಳ ಅಭಿವ್ಯಕ್ತಿಗಾಗಿ ಚಿತ್ರಗಳನ್ನು ಬಿಡಿಸಲಾರಂಭಿಸಿದನು. ಇಂಥ ಚಿತ್ರಗಳು ಅವನು ವಾಸಿಸುತ್ತಿದ್ದ ಇಲ್ಲವೇ ವಾಸಸ್ಥಳಕ್ಕೆ ಸಮೀಪವಿದ್ದ ಕಲ್ಲಾಸರೆಗಳಲ್ಲಿ ಕಂಡುಬರುತ್ತದೆ. ಸಾಮಾನ್ಯವಾಗಿ ಈ ಚಿತ್ರಗಳು ಅವನ ಸಂಪರ್ಕಕ್ಕೆ ಬಂದ ಮನುಷ್ಯ, ಪ್ರಾಣಿಗಳ ಚಿತ್ರಗಳ ಜೊತೆಗೆ ಅಪರೂಪವಾಗಿ ಬೇಟೆ, ನೃತ್ಯ ಮುಂತಾದ ವಿಷಯಗಳಿಗೆ ಸಂಬಂಧಿಸಿರುತ್ತವೆ. ಗವಿಚಿತ್ರಗಳು ಬಹಳ ವರ್ಷಗಳ ಕಾಲ ನಾಗರಿಕ ಪ್ರಪಂಚದ ಗಮನಕ್ಕೆ ಬಾರದೆ ಬೆಟ್ಟಗುಡ್ಡಗಳಲ್ಲಿ ಅಜ್ಞಾತವಾಗಿ ಉಳಿದಿದ್ದವು. ಆದರೆ ೧೮೭೯ರಲ್ಲಿ ಸ್ಪೇನ್ ದೇಶದಲ್ಲಿ ಆಕಸ್ಮಿಕವಾಗಿ ಅಲ್ತಮೀರಗವಿ ಶೋಧವಾಗಿ ಅದರಲ್ಲಿದ್ದ ಚಿತ್ರಗಳು ಬೆಳಕಿಗೆ ಬಂದವು. ಅಲ್ಲಿಂದ ಪುರಾತತ್ವ ಶಾಸ್ತ್ರಜ್ಞರ ಗಮನ ಇಂಥ ಚಿತ್ರಗಳ ಕಡೆ ಹರಿದು ಜಗತ್ತಿನಾದ್ಯಂತ ಅನೇಕ ಚಿತ್ರಿತ ನೆಲೆಗಳು ಬೆಳಕಿಗೆ ಬರಲಾರಂಭಿಸಿದವು. ಭಾರತದಲ್ಲೂ ೧೮೮೦ರಲ್ಲಿ ಬಳ್ಳಾರಿ ಸಮೀಪದ ಕಪ್ಪಗಲ್ಲಿನಲ್ಲಿ ಮತ್ತು ಮಧ್ಯಪ್ರದೇಶದಲ್ಲಿ ಮಿರ್ಜಾಪುರದ ಕೈಮೂರ್ ಬೆಟ್ಟದಲ್ಲಿ ಕ್ರಮವಾಗಿ

ಬಂಡೆಗಲ್ಲು ಮತ್ತು ವರ್ಣಚಿತ್ರಗಳು ಬೆಳಕಿಗೆ ಬಂದವು. ತದನಂತರ ದೇಶದ ಎಲ್ಲಾ ಭಾಗಗಳಲ್ಲೂ ಪ್ರಾಗಿತಿಹಾಸ ಕಾಲದ ಚಿತ್ರಗಳು ಬೆಳಕಿಗೆ ಬಂದಿವೆ ಮತ್ತು ಬರುತ್ತಲಿವೆ.

ಕರ್ನಾಟಕದಲ್ಲಿ ೧೮೮೦ರಲ್ಲಿ ಕಪ್ಪಗಲ್ಲಿನ ಚಿತ್ರಗಳ ನಂತರ ೧೯೩೫ರಲ್ಲಿ ಲಿಯೋನಾರ್ಡ್ ಮನ್ ರವರು ಕೊಪ್ಪಳ-ಹಂಪಿ ಪ್ರದೇಶದಲ್ಲಿ ಮೊದಲ ಬಾರಿಗೆ ಹಿರೇಬೆಣಕಲ್ಲಿನಲ್ಲಿ ಮೂರು ವರ್ಣ ಚಿತ್ರಿತ ಗವಿಗಳನ್ನು ಶೋಧಿಸಿದರು. ತದನಂತರ ಅ.ಸುಂದರರವರು ಈ ಪ್ರದೇಶದಲ್ಲಿ ಅನೇಕ ಚಿತ್ರಿತ ಗವಿ, ಕಲ್ಲಾಸರೆಗಳನ್ನು ಬೆಳಕಿಗೆ ತಂದು ಅವುಗಳ ಕುರಿತು ಅಧ್ಯಯನಾತ್ಮಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಸುಂದರರವರ ಅಧ್ಯಯನದನ್ವಯ ಈ ಪ್ರದೇಶ ಕರ್ನಾಟಕದಲ್ಲಿ ಗವಿಚಿತ್ರಗಳ ದೃಷ್ಟಿಯಿಂದ ಶ್ರೀಮಂತವಲಯವೆನ್ನುವುದು ತಿಳಿಯುತ್ತದೆ. ಅಭಿಪ್ರಾಯದ ಮೇರೆಗೆ ಕೊಪ್ಪಳ-ಹಂಪಿ ಪ್ರದೇಶದಲ್ಲಿ ವ್ಯವಸ್ಥಿತವಾಗಿ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳ ಅನ್ವೇಷಣೆ ಮತ್ತು ಅಧ್ಯಯನ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ನಡೆಸಲಾಯಿತು. ಈ ಅಧ್ಯಯನದಲ್ಲಿ ಕಂಡುಕೊಂಡ ಕೆಲವು ಅಂಶಗಳನ್ನು ಈ ಮುಂದಿನಂತೆ ಪಟ್ಟಿ ಮಾಡಬಹುದು.

೧. ಕೊಪ್ಪಳ-ಹಂಪಿ ಪ್ರದೇಶದಲ್ಲಿ ಈ ಮೊದಲಿನ ಅನ್ವೇಷಣೆಯ ಸಂದರ್ಭದಲ್ಲಿ ಒಟ್ಟು ೧೩ ಸ್ಥಳ (ಗ್ರಾಮ)ಗಳಿಂದ ೫೨ ವರ್ಣಚಿತ್ರಿತ ನೆಲೆಗಳು, ೧ ಸ್ಥಳದಿಂದ ೨ ಬಂಡೆ ಚಿತ್ರನೆಲೆಗಳು ಸೇರಿ ಒಟ್ಟು ೫೪ ನೆಲೆಗಳು ಬೆಳಕಿಗೆ ಬಂದಿದ್ದವು. ಪ್ರಸ್ತುತ ಅಧ್ಯಯನಕ್ಕಾಗಿ ನಾನು ಕೈಗೊಂಡ ಅನ್ವೇಷಣೆಯಲ್ಲಿ ಆ.೧೩ ಸ್ಥಳಗಳು ಸಹಿತ ಒಟ್ಟು ೨೯ ಸ್ಥಳಗಳಿಂದ ೬೮ ವರ್ಣಚಿತ್ರ ನೆಲೆಗಳು ಮತ್ತು ೩ ಸ್ಥಳಗಳಲ್ಲಿ ೪ ಬಂಡೆ ಚಿತ್ರ ನೆಲೆಗಳು ಹೊಸದಾಗಿ ಪತ್ತೆಯಾದವು. ಹೀಗೆ ಒಟ್ಟು ೧೨೦ ನೆಲೆಗಳ ವರ್ಣಚಿತ್ರಗಳನ್ನು ೬ ನೆಲೆಯ ಬಂಡೆ ಕೊರೆದ / ಕುಟ್ಟಿದ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

ಇವಲ್ಲದೆ ಕೆಲವು ಕಡೆ ತಿರುಗುಳಿಗಳು, ಚಿಕ್ಕ ಚಿಕ್ಕ ಕುಳಿಯ ಆಕೃತಿಗಳು ಕಂಡು ಬಂದಿವೆ. ಹಾಗೂ ಹಿರೇಬೆಣಕಲ್ಲಿನ ಶಿಲಾಸಮಾಧಿಯೊಂದರಲ್ಲಿ ಜಿಂಕೆಯ ಚಿತ್ರಗಳಿರುವುದು ಕಂಡುಬಂದಿದ್ದು, ಮಹತ್ವದ ಸಂಗತಿಯಾಗಿದೆ. ಹೀಗೆ ಕೊಪ್ಪಳ-ಹಂಪಿ ಪ್ರದೇಶವು ಪ್ರಾಗಿತಿಹಾಸಕಾಲದ ಚಿತ್ರಕಲೆಯ ದೃಷ್ಟಿಯಿಂದ ಕರ್ನಾಟಕದಲ್ಲಿ ಶ್ರೀಮಂತ ಪ್ರದೇಶವೆಂದು ಹೇಳಬಹುದು. ಪ್ರಸ್ತುತ ೧೨೬ ಕಲಾನೆಲೆಗಳು ಶೋಧವಾಗಿದ್ದು, ಇನ್ನೂ ಹಲವು ನೆಲೆಗಳು ಅಜ್ಞಾತವಾಗಿ ಇರಬಹುದಾದ ಸಾಧ್ಯತೆ ಇದೆ. ಈ ಎಲ್ಲಾ ನೆಲೆಯ ಹಿನ್ನೆಲೆಯಲ್ಲಿ ಕೊಪ್ಪಳ ಹಂಪಿ ಪ್ರದೇಶವನ್ನು ಕರ್ನಾಟಕದಲ್ಲಿ ಬಿಂಬೇಟ್ಕಾ ಪ್ರದೇಶಕ್ಕೆ ಹೋಲಿಸಬಹುದು.

೨. ಚಿತ್ರಗಳ ಒಟ್ಟು ವಿಷಯದಲ್ಲಿ ಅನೇಕ ವಿಧದ ಮನುಷ್ಯ ಚಿತ್ರಗಳು, ವಿವಿಧ ರೀತಿಯ ಪ್ರಾಣಿ, ಪಕ್ಷಿಗಳ, ಅಶ್ವಸವಾರಿ, ಎತ್ತಿನಸವಾರಿ, ಆನೆಸವಾರಿಯಂತಹ ಸಂಯುಕ್ತ ಚಿತ್ರಗಳು, ಬೇಟೆಗಾರಿಕೆ, ಪಶುಪಾಲನೆ, ಲೈಂಗಿಕತ, ಮಾಂತ್ರಿಕ ಆಚರಣೆ(?) ಸಮೂಹ ನೃತ್ಯ, ಶವಸಂಸ್ಕಾರ ಈ ವಿಷಯಕ್ಕೆ ಸಂಬಂಧಿಸಿದ ಚಿತ್ರಗಳಿರುವುದನ್ನು ಗುರುತಿಸಲಾಯ್ತು.

ಮನುಷ್ಯ ಚಿತ್ರಗಳಲ್ಲಿ ಅನೇಕ ವಿಧದ ಭಂಗಿ, ಶೈಲಿಯ, ವಿವಿಧ ಪ್ರಮಾಣದ ಚಿತ್ರಗಳಿದ್ದು, ಅವುಗಳಲ್ಲಿ ೫ ರೀತಿಯ ಮನುಷ್ಯ ಚಿತ್ರಗಳು ಗಮನ ಸೆಳೆಯುತ್ತವೆ. ನಗ್ನವಾಗಿ ಮೈಮೇಲೆ ರೇಖೆಗಳನ್ನು ಹಾಕಿಕೊಂಡು ನರ್ತಿಸುವ ಭಂಗಿಯ ಸ್ತ್ರೀ-ಪುರುಷ ಚಿತ್ರಗಳು ಈ ಪ್ರದೇಶದಲ್ಲಿ ವಿಶೇಷವಾಗಿ ಕಂಡುಬಂದಿವೆ. ಪ್ರಾಯಶ: ಇವು ಮಾಂತ್ರಿಕ ಕಟ್ಟಳೆಯಲ್ಲಿ ನಿರತವಾದ ವ್ಯಕ್ತಿಗಳ ಚಿತ್ರಗಳಿರಬೇಕೆಂದು ತೋರುತ್ತದೆ. ಈಗಲೂ ಕೂಡ ಕೆಲವು ಪ್ರದೇಶದಲ್ಲಿ ಮಾಂತ್ರಿಕ ಆರಾಧನೆಯಲ್ಲಿ ನಗ್ನರಾಗಿ ಮೈಗೆ ಬೂದಿ ಬಳಿದುಕೊಡು ಮಾಂತ್ರಿಕ ವಿಧಿಯಲ್ಲಿ ತೊಡಗುವ ಪದ್ಧತಿ ಪ್ರಚಲಿತವಾಗಿದೆ. ಈ ಪದ್ಧತಿಯನ್ವಯ ಶಿಲಾಯಗ ಕಾಲದಲ್ಲೂ ಕೂಡ ಕೆಲವು ವ್ಯಕ್ತಿಗಳು ಇಷ್ಟಾರ್ಥ ಸಿದ್ಧಿಗಾಗಿ ಇಂತಹ ಆಚರಣೆಗಳಲ್ಲಿ ತೊಡಗುತ್ತಿದ್ದರೆಂದು ಹೇಳಬಹುದು. ಮಲ್ಲಾಪುರದ ಒಂದು ಗವಿಯಲ್ಲಿ ಈ ರೀತಿಯ ಅನೇಕ ಪುರುಷರು, ಸ್ತ್ರೀಯರು, ದಂಪತಿಗಳು, ಕಾಡುಹಂದಿ, ಕೋಣ, ನವಿಲು, ಮೀನು, ಜಿಂಕೆಯ ಚಿತ್ರಗಳಿವೆ. ಅವುಗಳ ಮೈಮೇಲೂ ರೇಖಾಚಿತ್ರಗಳಿವೆ. ಈ ಎಲ್ಲ ಪ್ರಾಣಿಗಳನ್ನು ಆರಾಧನೆಯ ಸಂದರ್ಭದಲ್ಲಿ ಬಲಿ ಕೊಟ್ಟಿರಬೇಕು. ಇಲ್ಲವೇ ಅವುಗಳ ವಶಕ್ಕಾಗಿ ಪೂರ್ವ ಕಟ್ಟಳೆಯನ್ನು ಮಾಡಿರಬೇಕೆಂದು ತೋರುತ್ತದೆ. ಒಟ್ಟಿನಲ್ಲಿ, ಈ ಚಿತ್ರಗಳು ಶಿಲಾಯುಗ ಕಾಲದಲ್ಲೇ ಮಾಂತ್ರಿಕ ವಿಧಿಯ ಆಚರಣೆ, ನಂಬಿಕೆಗಳು ರೂಢಿಯಲ್ಲಿದ್ದ ಬಗ್ಗೆ ತಿಳಿಸುತ್ತವೆನ್ನಬಹುದು.

ಆನೆಗುಂದಿ, ರಾಂಪುರ ಮತ್ತು ಗೂಗಿಬಂಡಿಯಲ್ಲಿರುವ ಮತ್ತೊಂದು ರೀತಿಯ ಮನುಷ್ಯ ಚಿತ್ರಗಳು ಕುತೂಹಲ ಮೂಡಿಸುತ್ತವೆ. ಇವು ನಿಂತ ಭಂಗಿಯ ಚಿತ್ರಗಳಾಗಿದ್ದು ಬಲಗೈಯನ್ನು ಭುಜದ ಸಮಾನಾಂತರದಲ್ಲಿ ತೋರು ಸ್ಥಿತಿಯಲ್ಲಿ ಉದ್ದವಾಗಿ ಹಿಡಿದಿದ್ದು, ಮತ್ತೊಂದು ಕೈಯನ್ನು ಮೇಲಕ್ಕೆ ಎತ್ತಿ ಹಿಡಿದಿದೆ. ಇವುಗಳಿಗೆ ಮಂಗನ ಮುಖವಿದೆ. ಆದರೆ ಬಾಲವಿಲ್ಲ. ದೇಹವೆಲ್ಲಾ ಸಂಪೂರ್ಣ ಮನುಷ್ಯಾಕಾರದಲ್ಲಿದೆ. ಆನೆಗುಂದಿಯಲ್ಲಿಯೇ ಬಿಳಿಬಣ್ಣದ ಬಾಲವುಳ್ಳ ಖಡ್ಗ, ಡಾಲು ಹಿಡಿದ ೨ ಮಂಗನ ಮುಖದ ಮನುಷ್ಯ (?) ಚಿತ್ರಗಳಿವೆ. ಆನೆಗುಂದಿ ಪ್ರದೇಶವನ್ನು ರಾಮಾಯಣ ಕಾಲದ ವಾನರ ರಾಜ್ಯ ಕಿಷ್ಕಿಂದೆ ಎಂದು ನಂಬಲಾಗಿದ್ದು ಆ ಹಿನ್ನೆಲೆಯಲ್ಲಿ ಈ ಚಿತ್ರಗಳು ಗಮನ ಸೆಳೆಯುತ್ತವೆ. ಆದರೆ ಈ ಬಗೆಗೆ ಹೆಚ್ಚಿನ ಅಧ್ಯಯನ ಅವಶ್ಯ.

ಮನುಷ್ಯ ಚಿತ್ರಗಳಲ್ಲಿ ಮತ್ತೊಂದು ರೀತಿಯವು ಗಮನಾರ್ಹವಾಗಿವೆ. ಅವು ಹಿರೇಬೆಣಕಲ್ ಮತ್ತು ಮಲ್ಲಾಪುರದ ಪ್ರಾಣಿಯ ಮುಖವಾಡ ಧರಿಸಿದ (ಮನುಷ್ಯ) ಚಿತ್ರಗಳು. ಇವುಗಳಿಗೆ ತಲೆಯ ಮೇಲೆ ಕೋಡು ಮತ್ತು ಬಾಲವಿರುತ್ತದೆ. ಇಂಥ ಮನುಷ್ಯ ಚಿತ್ರಗಳು ಪ್ರಾಣಿಗಳ ಗುಂಪಿನ ಮಧ್ಯ ಇರುವುದರಿಂದ ಈ ವ್ಯಕ್ತಿಗಳು ಸತ್ತ ಪ್ರಾಣಿಯ ಚರ್ಮವನ್ನು ಧರಿಸಿ ಅವುಗಳನ್ನು ಅನುಸರಿಸುವುದರ ಮೂಲಕ ಪ್ರಾಣಿಗಳನ್ನು ಸೆರೆ ಹಿಡಿಯಲು ಇಲ್ಲವೆ ಪಶುಪಾಲನೆಯ ಸಂದರ್ಭದಲ್ಲಿ ಕ್ರೂರ ಪ್ರಾಣಿಗಳನ್ನು ಹೆದರಿಸಿ ಓಡಿಸಲು ಈ ರೀತಿ ವೇಷವನ್ನು ಧರಿಸುತ್ತಿದ್ದರೆಂದು ತರ್ಕಿಸಬಹುದು. ಎಮ್ಮಿಗುಡ್ಡದಲ್ಲಿ ಜಿಂಕೆ ಮೇಲೆ ನಿಂತ ಮನುಷ್ಯನ ಚಿತ್ರವಿದೆ, ತಲೆಯ ಸುತ್ತಲೂ ಸಮಾನಾಂತರವಾಗಿ ಎಳೆದ ಕಿರಣಗಳ ರೀತಿಯ ರೇಖೆಗಳಿವೆ. ಇದು ದೈವಿ ಪುರುಷನ ಅಥವಾ ವಿಶಿಷ್ಠ ವ್ಯಕ್ತಿಯ ಚಿತ್ರವಾಗಿರಬಹುದಾದ ಸಾಧ್ಯತೆ ಇದೆ.

ಪಶುಚಿತ್ರಗಳಲ್ಲಿ ಎತ್ತು, ಗೂಳಿ, ಕಾಡೆಮ್ಮೆ ಮತ್ತು ಜಿಂಕೆಯ ಚಿತ್ರಗಳು ಸಾಮಾನ್ಯವಾಗಿವೆ. ಗೂಳಿ ಮತ್ತು ಕಾಡೆಮ್ಮೆಯ ದಷ್ಟಪುಷ್ಟತೆ ಮತ್ತು ಗಾಂಭಿರ್ಯ, ಜಿಂಕೆಯ ಮುಗ್ಧತೆ ಪ್ರಾಗಿತಿಹಾಸ ಕಾಲದ ಚಿತ್ರರಚನೆಕಾರನ ಗಮನ ಸೆಳೆದಿವೆ ಎನ್ನಬಹುದು. ಇವುಗಳ ಜೊತೆಗೆ ಅಲ್ಲಲ್ಲಿ ಹಸು, ಎಮ್ಮೆ, ಹಂದಿ ನಾಯಿ, ಮೊಲ, ಟಗರು, ಕುದುರೆ, ತೋಳ, ಹುಲಿ, ಚಿರತೆ, ಆನೆ ಮುಂತಾದ ಪ್ರಾಣಿಗಳು ಚಿತ್ರದ ವಸ್ತುಗಳಾಗಿವೆ. ಪಕ್ಷಿಗಳಲ್ಲಿ ನವಿಲು ಆದಿಮಾನವನಿಗೆ ಪ್ರಿಯವಾದ ಪಕ್ಷಿಯಾಗಿದ್ದಂತೆ ತೋರುತ್ತದೆ. ಕೊಪ್ಪಳ-ಹಂಪಿ ಪ್ರದೇಶದಲ್ಲಿ ಈ ಪ್ರಾಣಿಗಳು ಹಿಂದಿನಿಂದಲೂ ಇದ್ದವೆಂದು ಹೇಳಬಹುದು.

ಸಂಯುಕ್ತ ಚಿತ್ರಗಳಲ್ಲಿ ಅಶ್ವ ಸವಾರರ, ಆನೆ ಸವಾರರ ಮತ್ತು ಎತ್ತಿನ ಮೇಲೆ ಕುಳಿತ ವ್ಯಕ್ತಿ ಚಿತ್ರಗಳಿವೆ. ಹಿರೆಬೆಣಕಲ್ಲಿನಲ್ಲಿ ಅಶ್ವಸವಾರರ ಚಿತ್ರಗಳು ಅಧಿಕವಾಗಿವೆ. ಅಶ್ವಸವಾರರ ಕೈಯಲ್ಲಿ ಈಟಿ, ಕೊಡಲಿಗಳಿವೆ. ಕಬ್ಬಿಣ ಯುಗದ ಬೃಹತ್ ಶಿಲಾಯುಗದಲ್ಲಿ ಸಂಚಾರ ಹಾಗೂ ಬೇಟೆಗಾಗಿ ಕುದುರೆಯನ್ನು ಪಳಗಿಸಿ ಬಳಸುತ್ತಿದ್ದರೆಂದು ಹೇಳಬಹುದು. ಇಲ್ಲಿ ಕುದುರೆಗಳ ಕಡಿವಾಣ ಮುಖದ ಮೇಲಿಂದ ಇರುವುದು ವಿಶೇಷ ಎನಿಸುತ್ತದೆ. ಪ್ರಾಯಶ: ತಂತಿಯ ಲಗಾಮುಗಳನ್ನು ಬಳಸುತ್ತಿದ್ಧಂತೆ ತೋರುತ್ತದೆ. ಆನೆಗುಂದಿ ಮತ್ತು ಅದಕ್ಕೆ ಸಮೀಪದ ಸಂಗಾಪುರದಲ್ಲಿ ಆನೆಯ ೫ ಚಿತ್ರಗಳಿವೆ. ಎರಡು ಆನೆಗಳ ಮೇಲೆ ಸವಾರರಿದ್ದಾರೆ. ಪ್ರಾಯಶ: ಇವೆರಡು ಇತಿಹಾಸ ಕಾಲದ ರಚನೆಗಳಾಗಿರಬೇಕು.

ಒಟ್ಟಿನಲ್ಲಿ ಈ ಪ್ರದೇಶದಲ್ಲಿ ಹಿಂದೆ ಆನೆಗಳಿದ್ದವೆಂದು ಹೇಳಬಹುದು. ಬಯಲು ಬಂಡೆಯಲ್ಲಿ ಕೊರೆದ ಮತ್ತು ಬಿಳಿಬಣ್ಣದಲ್ಲಿ ಚಿತ್ರಿಸಿದ ಎತ್ತಿನ ಮೇಲೆ ಕುಳಿತ ವ್ಯಕ್ತಿಯ ಚಿತ್ರಗಳು ಅಲ್ಲಲ್ಲಿ ಕಂಡುಬಂದಿವೆ. ಈಗಲೂ ದನಕಾಯುವ ಹುಡುಗರು ಕೆಲವು ಸಲ ಎತ್ತು, ಎಮ್ಮೆಯ ಮೇಲೆ ಕುಳಿತು ಪಶುಗಳನ್ನು ಕಾಯುತ್ತಾರೆ. ಹಾಗಾಗಿ ಇಂಥ ಚಿತ್ರಗಳು ಪ್ರಾಯಶ: ದನಗಾಯಿ ಹುಡುಗರ ರಚನೆಗಳೆಂದು ಹೇಳಬಹುದು.

ಹಿರೇಬೆಣಕಲ್ಲಿನ ೧೭ನೇ ಗವಿಯಲ್ಲಿ ಎರಡು ದೊಡ್ಡ ಪ್ರಮಾಣದ ವಿಚಿತ್ರ ಆಕೃತಿಗಳಿವೆ. ಚಿತ್ರಗಳಿರುವ ಗವಿಗೆ ರಕ್ಕಸಗವಿ ಎಂದು ಕರೆಯುವರು. ಬೃಹತ್ ಶಿಲಾಯುಗದ ಕಾಲದಲ್ಲಿಯೇ ರಾಕ್ಷಸ ಕಲ್ಪನೆ ಇತ್ತೆಂದು ತೋರುತ್ತದೆ. ಅದರ ಕಲ್ಪಿತ ಚಿತ್ರಗಳು ಇವುಗಳಾಗಿರಬೇಕೆಂದು ತರ್ಕಿಸಬಹುದು.

ಜೊತೆಗೆ ಬೇಟೆಗಾರಿಕೆ, ಪಶುಪಾಲನೆ, ಸಂಭೋಗ, ಮಾಂತ್ರಿಕ ನೃತ್ಯ, ಸಮೂಹ ಕುಣಿತ ಮತ್ತು ಶವಸಂಸ್ಕಾರದಂತಹ ಸಾಮಾಜಿಕ ಸಂಗತಿಗಳನ್ನು ಬಿಂಬಿಸುವ ದೃಶ್ಯಗಳು ಚಿತ್ರಗಳ ವಿಷಯಗಳಾಗಿವೆ. ಬೇಟೆಯಲ್ಲಿ ಬಿಲ್ಲು, ಬಾಣ, ಭರ್ಚಿ, ಕೊಡಲಿಗಳನ್ನು ಬಳಸುತ್ತಿದ್ದರು. ಪಶುಪಾಲಕರು ಕೂಡ ತಮ್ಮ ಜೊತೆ ಇಂಥ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಂಡಿರುತ್ತಿದ್ದರು. ಈ ಜನ ಬೇಟೆಯ ಯಶಸ್ಸಿಗಾಗಿ ಅಥವಾ ಯಶಸ್ವಿ ಬೇಟೆಯ ನಂತರ ಇಲ್ಲವೇ ಸಂತೋಷದ ಸಂದರ್ಭದಲ್ಲಿ ಸಾಮೂಹಿಕ ನೃತ್ಯ ಕೈಗೊಳ್ಳುತ್ತಿದ್ದರು. ಪುರುಷರು, ಸ್ತ್ರೀಯರು ಒಂದೊಂದು ಸಾಲುಗಳಲ್ಲಿ ಕೈ ಕೈ ಹಿಡಿದು ಪರಸ್ಪರ ಎದುರಾಗಿ ನಿಂತು ನೃತ್ಯದಲ್ಲಿ ತೊಡಗುತ್ತಿದ್ದರೆಂದು ಚಿತ್ರಗಳಿಂದ ತಿಳಿಯಬಹುದು. ಕೆಲವು ಸಲ ಪುರುಷರ ಸಾಲಿನಲ್ಲಿ ಸ್ತ್ರೀಯರು ಸೇರಿ ಕುಣಿಯುತ್ತಿದ್ದರು. ಶವಸಂಸ್ಕಾರದ ವಿಧಿಯು ಚಿತ್ರದ ವಸ್ತುವಾಗಿರುವುದು ಗಮನಾರ್ಹ. ಚಿಕ್ಕರಾಂಪುರದ ಈ ಚಿತ್ರವು ಬೃಹತ್ ಶಿಲಾಯುಗದ ಶಿಲಾವೃತ್ತ ಗೋರಿಗಳ ಬಗೆಗೆ ಬೆಳಕು ಚೆಲ್ಲುತ್ತದೆನ್ನಬಹುದು.

ಪಶುಪಕ್ಷಿಗಳ ಜೊತೆಗೆ ಹೂ ಗಿಡಗಳ ಚಿತ್ರಗಳು ತೀರ ವಿರಳವಾಗಿ ಅಲ್ಲಲ್ಲಿ ಕಾಣಿಸಿಕೊಂಡಿವೆ. ನದಿಯ ಇಕ್ಕೆಲಗಳ ಅಂಜನಹಳ್ಳಿ ಮತ್ತು ಹಂಪಿಗಳಲ್ಲಿ ಹಡಗಿನ ಚಿತ್ರಗಳಿರುವುದು ವಿಶೇಷ. ಇವು ಮರದ ಹಡಗಿನ ರೀತಿಯಲ್ಲಿವೆ. ಪ್ರಾಯಶ: ಹಿಂದಿ ನದಿಯಲ್ಲಿ ಇಂಥಹ ಹಡಗುಗಳನ್ನು ಬಳಸುತ್ತಿದ್ದರೆಂದು ತೋರುತ್ತದೆ.

ಅಲ್ಲಲ್ಲಿ ಚಿತ್ರ ಸಮೂಹದಲ್ಲಿ ನಾಲ್ಕು ಮೂಲೆ ಗಂಟಿನ, ಎಂಟು ಮೂಲೆ ಗಂಟಿನ ಮಂಡಲ ಚಿತ್ರಗಳು, ವಿವಿಧ ರೀತಿ ವೃತ್ತಗಳು, ರೇಖಾಚಿತ್ರಗಳು, ಚಿಹ್ನೆಗಳು ಕಂಡುಬರುತ್ತವೆ. ಬಹುಶ: ಇವೆಲ್ಲಾ ಮಾಂತ್ರಿಕ ಕಟ್ಟಳೆಗಳಿಗೆ ಸಂಬಂಧಿಸಿದ ಚಿತ್ರಗಳೆಂದು ಹೇಳಬಹುದು.

ಚಿತ್ರಗಳ ವಿಧಗಳು ಹಲವು ಪ್ರಕಾರಗಳಲ್ಲಿವೆ. ಒಬ್ಬೊಬ್ಬ ರಚನೆಕಾರ ತನ್ನ ದೃಷ್ಟಿಕೋನದಂತೆ ಚಿತ್ರಗಳನ್ನು ಬಿಡಿಸಿರುವುದರಿಂದ ಮನುಷ್ಯ, ಗೂಳಿ, ಎತ್ತು ಮತ್ತು ಜಿಂಕೆಯ ಚಿತ್ರಗಳು ಹಲವು ಪ್ರಕಾರಗಳಲ್ಲಿವೆ. ಸಂದರ್ಭಕ್ಕನುಸಾರ ಅವುಗಳ ಭಂಗಿ, ಶೈಲಿ ಬೇರೆ ಬೇರೆಯಾಗಿವೆ. ಒಟ್ಟಿನಲ್ಲಿ ಕೊಪ್ಪಳ ಹಂಪಿ ಪ್ರದೇಶದ ಗವಿವರ್ಣ ಮತ್ತು ಬಂಡೆ ಚಿತ್ರಗಳಲ್ಲಿ ವಿಷಯ ವೈವಿಧ್ಯತೆಯನ್ನು ಗುರುತಿಸಬಹುದು.

೩. ಚಿತ್ರಗಳ ತಾಂತ್ರಿಕ ಅಂಶಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಚಿತ್ರಿತ ಗವಿ, ಕಲ್ಲಾಸರೆಗಳ ಸ್ವರೂಪ, ನೆಲೆಯ ಆಯ್ಕೆ, ಚಿತ್ರರಚನಾ ಸಾಮಗ್ರಿಗಳಾದ ಬಣ್ಣ ಹಾಗೂ ಇತರ ಪರಿಕರಗಳು, ಚಿತ್ರಗಳ ಶೈಲಿ ಮತ್ತು ಪ್ರಮಾಣಗಳ ಕುರಿತಾಗಿ ವಿವೇಚಿಸಲಾಗಿ, ಪ್ರಾಗಿತಿಹಾಸ ಕಾಲದ ಮನುಷ್ಯ ಚಿತ್ರಗಳನ್ನು ಬಿಡಿಸಲು ಸೂಕ್ತವಾದ ನೆಲೆಯನ್ನು ಆಯ್ದುಕೊಂಡಿದ್ದನೆಂಬುದು ತಿಳಿಯುತ್ತದೆ. ಮಳೆ, ಬಿಸಿಲಿಗೆ, ಸಿಲುಕದ ಸೂಕ್ತ ಜಾಗವನ್ನು ಆಯ್ದು ಅಲ್ಲಿ ಚಿತ್ರಗಳನ್ನು ಬಿಡಿಸುತ್ತಿದ್ದನು. ಅವು ಶಾಶ್ವತವಾಗಿರಬೇಕೆಂಬ ಉದ್ದೇಶ ಅವನದಾಗಿತ್ತು. ಚಿತ್ರಗಳು ಹೆಚ್ಚಾಗಿ ಕೆಮ್ಮಣ್ಣು ವರ್ಣದಲ್ಲಿದ್ದು, ಅದಕ್ಕಾಗಿ ಸುರಮ ಎಂಬ ಖನಿಜವನ್ನು ಬಳಸಿದ್ದಾನೆ. ಅದರಲ್ಲಿ ಕೆಲವು ವನಸ್ಪತಿ, ಪ್ರಾಣಿಗಳ ಕೊಬ್ಬು ಮತ್ತು ಮೂತ್ರಗಳನ್ನು ಬೆರೆಸಿ ಶಾಶ್ವತವಾಗಿರುವಂತೆ ಬಣ್ಣವನ್ನು ಸಿದ್ಧಪಡಿಸಿಕೊಳ್ಳುತ್ತಿದ್ದನು. ಕೆಲವು ಚಿತ್ರಗಳು ಬಿಳಿಬಣ್ಣದಲ್ಲೂ ಇವೆ. ಬಿಳಿಬಣ್ಣಕ್ಕಾಗಿ ಮುಖ್ಯವಾಗಿ ಸುಣ್ಣವನ್ನು ಬಳಸಲಾಗಿದೆ. ಬಿಳಿಬಣ್ಣದ ಚಿತ್ರಗಳು ಕೆಂಪುಬಣ್ಣದ ಚಿತ್ರಗಳಷ್ಟು ಪ್ರಾಚೀನವಲ್ಲ.

ಬಣ್ಣದಲ್ಲಿ ಅದ್ದಿಕೊಂಡು ಚಿತ್ರಗಳನ್ನು ಬಿಡಿಸಲು ಕುಂಚಗಳನ್ನು ಮಾಡಿಕೊಳ್ಳುತ್ತಿದ್ದರು. ಈ ಕುಂಚಗಳನ್ನು ಮರದ ರೆಂಬೆಗಳಿಂದ, ಪಕ್ಷಿಗಳ ಪುಕ್ಕದಿಂದ ಮಾಡಿಕೊಳ್ಳಲಾಗುತ್ತಿತ್ತು. ಕೆಲವು ಸಲ ನೇರವಾಗಿ ಬೆರಳಿನಿಂದ ರೇಖೆಗಳನ್ನೆಳೆದು ಚಿತ್ರ ಮೂಡಿಸುತ್ತಿದ್ದರು. ಬಂಡೆಯಲ್ಲಿ ಚಿತ್ರಗಳನ್ನು ಕೊರೆಯಲು ಗಟ್ಟಿ ಶಿಲೆಯ ಇಲ್ಲವೇ ಲೋಹದ ಉಳಿಯಂತಹ ಆಯುಧಗಳನ್ನು ಬಳಸಿರಬೇಕೆಂದು ತೋರುತ್ತದೆ. ಕೆಲವು ಸಲ ಗಟ್ಟಿಕಲ್ಲಿನಿಂದ ಬಂಡೆಯ ಮೇಲೆ ಸತತವಾಗಿ ಕುಟ್ಟಿ ಚಿತ್ರಗಳನ್ನು ಮೂಡಿಸುತ್ತಿದ್ದರು.

ಪ್ರಾಗಿತಿಹಾಸ ಕಾಲದ ಚಿತ್ರಗಳು ಕೇವಲ ಆಕೃತಿಗಳಾಗಿಲ್ಲ. ಅವುಗಳು ರಚನೆಕಾರರ ಭಾವನೆಗಳನ್ನು ಸಶಕ್ತವಾಗಿ ಅಭಿವ್ಯಕ್ತಿಸುವುದನ್ನು ಗುರುತಿಸಬಹುದು. ಮನುಷ್ಯ ಚಿತ್ರಗಳಲ್ಲಿ ಆಯಾ ಸಂದರ್ಭಕ್ಕನುಸಾರ ವಾಗಿ ಓಟದ, ನೃತ್ಯದ ಬಲ್ಲೆಯೆಸೆತದ ಭಂಗಿಗಳು ಸಹಜವಾಗಿ ಮೂಡಿಬಂದಿವೆ.

ಸ್ತ್ರೀ-ಪುರುಷರ ಗುರುತಿಸುವಿಕೆ ಸಮರ್ಪಕವಾಗಿದೆ. ನಗ್ನ ಪುರುಷನಲ್ಲಿ ಶಿಶ್ನವನ್ನು, ಸ್ತ್ರೀಯರ ಸ್ತನಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಸಾಮಾನ್ಯವಾಗಿ ಸ್ತ್ರೀ ಪುರುಷರ ಗುಂಪಿನಲ್ಲಿ ಸ್ತ್ರೀಯ ತಲೆಯ ಸುತ್ತಲೂ ಕೂದಲು ಹರಡಿದಂತೆ ರೇಖೆಗಳನ್ನು ಹಾಕಿ ಸ್ತ್ರೀ ಎಂದು ಸೂಚಿಸಲಾಗಿದೆ.

ಪ್ರಾಣಿ ಪಕ್ಷಿ ಚಿತ್ರಗಳಲ್ಲಿ ಗೂಳಿ, ಕೋಣದ ಗಾಂಭೀರ್ಯತೆ, ಹಸು, ಜಿಂಕೆಯ ಮುಗ್ಧತೆ ಚಿತ್ರಗಳಲ್ಲಿ ಸಹಜವಾಗಿ ಬಿಂಬಿತವಾಗಿವೆ. ಗೂಳಿ ಎತ್ತಿಗೆ ಇಣಿಯನ್ನು ತೋರಿಸಿರುವುದು, ಜಿಂಕೆಯ ದೇಹದ ಪಟ್ಟಿಗಳನ್ನು, ಹುಲಿಗಳ ದೇಹದ ಪಟ್ಟಿಗಳನ್ನು ರೇಖೆಯಿಂದ ಸೂಚಿಸಲಾಗಿದೆ. ಇದರಿಂದ ಅವನಿಗೆ ಚಿತ್ರಗಳ ಬಗೆಗೆ ಸ್ಪಷ್ಟವಾದ ಕಲ್ಪನೆ ಇತ್ತೆಂಬುದನ್ನು ಗ್ರಹಿಸಬಹುದು. ಅವನು ಕಣ್ಣು, ಮೂಗುಗಳಂತಹ ಸೂಕ್ಷ್ಮ ಅಂಗಗಳ ರಚನೆಯ ಗೊಂದಲಕ್ಕೆ ಬೀಳದ ಚಿತ್ರಗಳನ್ನು ಛಾಯಾ ಇಲ್ಲವೆ ಬಾಹ್ಯರೇಖಾ ರೂಪದಲ್ಲಿ ರಚಿಸಿದ್ದಾನೆ.

ಚಿತ್ರಗಳ ಪ್ರಮಾಣಗಳಲ್ಲಿ ಸಣ್ಣ, ಮಧ್ಯಮ, ದೊಡ್ಡ ಪ್ರಮಾಣದ ಜೊತೆಗೆ ಕೊಪ್ಪಳ-ಹಂಪಿ ಪ್ರದೇಶಗಳಲ್ಲಿ ಬೃಹತ್ಪ್ರಮಾಣದ ಚಿತ್ರಗಳಿರುವುದು ವಿಶೇಷ. ಹಿರೇಬೆಣಕಲ್ಲಿನ ೨ನೇ ಕಲ್ಲಾಸರೆಯಲ್ಲಿ ಪ್ರತಿಯೊಂದು ಸು.೧೨ಮೀ ಉದ್ದವಿರುವ ಎರಡು ಚಿತ್ರಗಳಿವೆ. ಅವು ಹೆಬ್ಬಾವಿನಂತೆ ತೋರುತ್ತವೆ. ಇಷ್ಟು ದೊಡ್ಡ ಪ್ರಮಾಣದ ಗವಿಚಿತ್ರಗಳು ಭಾರತದ ಬೇರೆಲ್ಲೂ ವರದಿಯಾಗಿಲ್ಲ. ಹಾಗಾಗಿ ಇವೆ ಭಾರತದಲ್ಲಿಯೇ ಅತಿ ದೊಡ್ಡ ಗವಿಚಿತ್ರಗಳೆಂದು ಹೇಳಬಹುದು. ಅದೇ ರೀತಿ ಹಿರೇಬೆಣಕಲ್ಲಿನ ೧೭ನೇ ಗವಿಯ ಒಂದು ವಿಚಿತ್ರ ಆಕೃತಿಯ ೭ ಮೀ ಉದ್ದವಾಗಿಯೂ, ಅಂಜನಹಳ್ಳಿಯ ಹಡಗಿನ ಚಿತ್ರವು ೬.೪೨ಮೀ ಉದ್ದವಾಗಿಯೂ, ೧ಮೀ ಎತ್ತರವಾಗಿಯೂ ಇದ್ದು ಅವು ಕೂಡಾ ಗಮನಾರ್ಹವಾಗಿವೆ. ಇಲ್ಲಿಯವರೆಗೆ ಮಧ್ಯಪ್ರದೇಶದಲ್ಲಿನ ರೈಸಿನ್ ಜಿಲ್ಲೆಯ ಜಹೋರಾ ಕಲ್ಲಾಸರೆಗಳಲ್ಲಿಯ ದ್ವಿವರ್ಣದ ೩.೬೦ಮೀ ಉದ್ದ ಮತ್ತು ೧.೯೫ಮೀ ಎತ್ತರದ ಕಾಡು ಕೋಣದ ಚಿತ್ರವನ್ನು ಭಾರತದ ಗವಿ ಪ್ರಾಣಿಗಳಲ್ಲಿಯೇ ಅತ್ಯಂತ ದೊಡ್ಡ ಚಿತ್ರವೆಂದು ಹೇಳಲಾಗಿದೆ. ಆದರೆ ಅದಕ್ಕಿಂತಲೂ ದೊಡ್ಡ ಪ್ರಮಾಣದ ಚಿತ್ರಗಳು ಈ ಪ್ರದೇಶದಲ್ಲಿ ಇವೆ. ಇಲ್ಲಿ ೩ ರಿಂದ ೫ ಮೀ ವರೆಗಿನ ಮನುಷ್ಯ, ಪ್ರಾಣಿ ಚಿತ್ರಗಳಿವೆ. ಒಟ್ಟಿನಲ್ಲಿ ಕೊಪ್ಪಳ ಹಾಗೂ ಪ್ರದೇಶದಲ್ಲಿ ದೊಡ್ಡ ಮತ್ತು ಬೃಹತ್ ಪ್ರಮಾಣದ ಚಿತ್ರಗಳು ವಿಶೇಷವಾಗಿರುವುದನ್ನು ಗುರುತಿಸಬಹುದು. ಚಿತ್ರಗಳ ರಚನೆಗೆ ಭಾವನಾತ್ಮಕ ಪ್ರೇರಣೆ, ಸೌಂದರ್ಯ ಪ್ರಜ್ಞೆ ಮತ್ತು ಮಾಂತ್ರಿಕ ಆಚರಣೆಯ ಉದ್ದೇಶಗಳನ್ನು ಗುರುತಿಸಲಾಗಿದೆ.

೪. ಕೊಪ್ಪಳ-ಹಂಪಿ ಪ್ರದೇಶದ ಗವಿವರ್ಣ ಬಯಲು ಬಂಡೆ ಚಿತ್ರಗಳ ಕಾಲವನ್ನು ಚಿತ್ರಗಳ ನೆಲೆ, ಸ್ಥಿತಿ, ಚಿತ್ರಗಳ ವಸ್ತು ನಿರೂಪಣಾ ಶೈಲಿ, ತಾಂತ್ರಿಕತೆ, ಸಮೀಪದ ಸಾಂಸ್ಕೃತಿಕ ನಿವೇಶನಗಳೊಡನೆ ಇದ್ದಿರಬಹುದಾದ ಸಂಬಂಧ, ಇತರೆಡೆಗಳಲ್ಲಿಯ ನಿರ್ದಿಷ್ಟ ಕಾಲಮಾನದ ವಸ್ತುಗಳೊಡನೆ ಹೋಲಿಕೆ ಇವೇ ಮೊದಲಾದ ಅಧ್ಯಯನಗಳ ಮೂಲಕ ಸ್ಥೂಲವಾಗಿ ತಕ್ಕಮಟ್ಟಿಗೆ ಕಾಲಮಾನವನ್ನು ಕಂಡುಕೊಳ್ಳಲಾಗಿದೆ. ಆ ಪ್ರಕಾರ ಕೆಮ್ಮಣ್ಣು ವರ್ಣದ ಹೆಚ್ಚಿನ ಚಿತ್ರಗಳು ಬಹುಶ: ತಾಮ್ರಯುಗದ ಕೊನೆಯ ಹಂತ (ಕ್ರಿ.ಪೂ.ಸು.೧೪೦೦-೮೦೦),ಬೃಹತ್ ಶಿಲಾಯುಗ ಸಂಸ್ಕೃತಿಯ ಆದಿ ಮಧ್ಯಭಾಗದ (ಕ್ರಿ.ಪೂ.ಸು.೧೦೦೦-೫೦೦) ಕಾಲದ್ದೆಂದು ನಿರ್ಣಯಿಸಬಹುದಾಗಿದೆ. ಬಿಳಿಬಣ್ಣದ ಚಿತ್ರಗಳು ಆದಿ ಇತಿಹಾಸ ಕಾಲದಿಂದ ಹಿಡಿದು ವಿಜಯನಗರೋತ್ತರ ಕಾಲದವರೆಗೂ ರಚಿತವಾಗಿವೆ ಎಂದು ಅವುಗಳ ಶೈಲಿಯಿಂದ ನಿರ್ಧರಿಸಲಾಗಿದೆ.

ಒಟ್ಟು ಸಮೀಕ್ಷೆಯಲ್ಲಿ ಕೊಪ್ಪಳ ಹಂಪಿ ಪ್ರದೇಶದ ಪ್ರಾಚೀನ ಜನರ ಕಲೆಯ ಗುರುತುಗಳಾದ ಗವಿವರ್ಣ ಮತ್ತು ಬಯಲುಬಂಡೆ ಚಿತ್ರಗಳನ್ನು ತಕ್ಕಮಟ್ಟಿಗೆ ವಿಮರ್ಶಾತ್ಮಕವಾಗಿ ಪರಿಶೀಲನೆ ಮಾಡಲಾಯಿತು. ಇಂದು ನಾವು ಕಲೆ ಎಂಬ ಪದಕ್ಕೆ ಕೊಡುವ, ಕೊಡಲು ಪ್ರಯತ್ನಿಸುತ್ತಿರುವ ಎಲ್ಲ ಅರ್ಥ ವಿಸ್ತಾರಗಳನ್ನು ನಿರೀಕ್ಷಿಸದೆ ಅಭಿವ್ಯಕ್ತಿಯ ಒಂದು ಸಾಧನವಾಗಿ ಪ್ರಾಚೀನ ಜನರು ರೇಖೆ ಬಣ್ಣಗಳಿಂದ ಅಭಿವ್ಯಕ್ತಿಸಿದರು. ಕಲಾ ಶಿಷ್ಟಾಚಾರದ ಪರಿಚಯವಿರದ ಕಾಲದಲ್ಲಿನ ಈ ಸರಳ ವೈವಿಧ್ಯಮಯ ಕಲಾ ಪ್ರಕಾರವೇ ತರುವಾಯ ಇತಿಹಾಸ ಕಾಲದ ಶಿಷ್ಟ ಸಂಪ್ರದಾಯದ ಕಲೆಗೆ ನಾಂದಿಯ ಬುನಾದಿಯೂ ಆಗಿದೆ ಎನ್ನಬಹುದು. ಕರ್ನಾಟಕದಲ್ಲಿ ಈ ಕಲಾ ಪರಂಪರೆ ಬಾದಾಮಿ-ಐಹೊಳೆ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗದ ಕಾಲದಲ್ಲಿಯೇ, ಆರಂಭಗೊಂಡಿತಾದಾರೂ ಕೊಪ್ಪಳ-ಹಂಪಿ ಪ್ರದೇಶದಲ್ಲಿ ತಾಮ್ರಯುಗದ, ನೂತನ ಶಿಲಾಯುಗ ಕಾಲದಲ್ಲಿ ಪ್ರಾರಂಭವಾಗಿ, ಬೃಹತ್ ಶಿಲಾಯುಗದಲ್ಲಿ ವೈವಿಧ್ಯಮಯವಾಗಿ ಬೆಳೆದು ಬಂದಿತೆಂದು ವ್ಯಕ್ತವಾಗುತ್ತದೆ. ಈ ಪ್ರದೇಶದಲ್ಲಿ ತಾಮ್ರಯುಗದ ನೂತನ ಶಿಲಾಯುಗದ ಸಂದರ್ಭದಲ್ಲಿ ಚಿತ್ರಗಳು ಸಣ್ಣ ಮತ್ತು ಕೆಲವೇ ರೂಪಗಳಲ್ಲಿದ್ದುದು, ಬರಬರುತ್ತಾ ಬೃಹತ್ ಶಿಲಾಯುಗ ಅಂತ್ಯದಲ್ಲಿ ಅವುಸಾಮಾಜಿಕವಾಗುತ್ತಾ ನೈಜ ಪ್ರತಿಕೃತಿ ರೂಪದಲ್ಲಿ ಹೆಚ್ಚು ಹೆಚ್ಚಾಗಿ ಮೂಡಿಬಂದಿರುವುದನ್ನು ಕಾಣಬಹುದು.

ಪ್ರಾಗೈತಿಹಾಸಿಕ ಚಿತ್ರಗಳು ಪ್ರಾಚೀನ ಮಾನವನ ಆಹಾರದ ಸುತ್ತ ಕೇಂದ್ರಿತವಾಗಿರುವುದನ್ನು ಗುರುತಿಸಬಹುದು. ಅವರಿಗೆ ಆಹಾರವಾಗುವ ಮತ್ತು ಆಹಾರ ನೀಡುವ ಪ್ರಾಣಿಗಳ ಅಭಿವೃದ್ಧಿ,

ಅವುಗಳ ಯಶಸ್ವಿ ಬೇಟೆ ಮತ್ತು ತಮ್ಮ ಜನಾಂಗದ ವಂಶಾಭಿವೃದ್ಧಿ, ಇವುಗಳ ಮೇಲೆ ಆಧಾರಿತವಾದವು. ಇಂತಹ ಚಿತ್ರಗಳನ್ನು ಬಿಡಿಸಿದವನು ಆ ಸಮಾಜದ ಸಾಮಾನ್ಯ ವ್ಯಕ್ತಿ ತಾನು ಕಂಡದ್ದನ್ನು ಉದ್ದೇಶಕ್ಕನುಗುಣವಾಗಿ ಬಿಡಿಸುವ ಕುಶಲಗಾರ ವಿನ: ಆ ಕಲಾಪರಂಪರೆಯನ್ನು ಅಭಿವೃದ್ಧಿಗೊಳಿಸುತ್ತಾ ಬಂದ ಬುಡಕಟ್ಟಿಗೆ ಸೇರಿದವನಾಗಲಿ ಅಥವಾ ಅದನ್ನು ಸತತವಾಗಿ ಸಾಧಿಸಿಕೊಂಡು ಬಂದಂತಹ ವ್ಯಕ್ತಿಯಾಗಲಿ ಅಲ್ಲ. ಹಾಗಾಗಿ ಚಿತ್ರಗಳು ಸಾಂಕೇಂತಿಕವಾಗಿದ್ದು, ಕೇವಲ ಛಾಯಾ ನಿರೂಪಣಾ ತಂತ್ರವನ್ನು ಬಳಸಿದ್ದು, ಈ ಪದ್ಧತಿ ಇತಿಹಾಸ ಕಾಲದಲ್ಲೂ ಮುಂದುವರೆಯಿತು.

ಒಟ್ಟಿನಲ್ಲಿ ಈ ಚಿತ್ರಗಳು ಸರಳವಾಗಿದ್ದರೂ ವಿನ್ಯಾಸದ ಸಂಕೇತದಲ್ಲಿ ಸತ್ವಶಾಲಿಯಾಗಿವೆ. ಭಾವಗಳ ಸಂಕೇತದಲ್ಲಿ ತೀರಾ ಪರಿಣಾಮಕಾರಿಯಾಗಿವೆ. ಈ ಲಕ್ಷಣಗಳೇ ಕಲೆಯ ಜೀವಾಳ. ಮುಂದೆ ಇವನ್ನು ಇತಿಹಾಸ ಕಾಲದ ಮೂರ್ತಿಶಿಲ್ಪ, ವರ್ಣಚಿತ್ರಗಳಲ್ಲಿ ಸುಧಾರಿಸಿದ ತಂತ್ರ ವಿಧಾನಗಳ ಮೂಲಕ ಕಾಣುತ್ತೇವೆ. ಆದ್ದರಿಂದ ಚಿತ್ರಕಲೆಯ ಅತಿ ಮುಖ್ಯವಾದ ಘಟಕಗಳ ಪರಂಪರೆಯ ಅಡಿಗಲ್ಲನ್ನು ಹಾಕಿದ ಕೀರ್ತಿ ಈ ಪ್ರಾಗೈತಿಹಾಸಿಕ ಮಾನವನಿಗೆ ಖಂಡಿತವಾಗಿಯೂ ಸಲ್ಲುತ್ತದೆ.

# ಅನುಬಂಧಗಳು

೧. ಸಂಕ್ಷೇಪಗಳ ವಿಸ್ತೃತ ರೂಪಗಳು

೨. ಆಧಾರ ಗ್ರಂಥಗಳು

೩. ನಕಾಶೆ

೪. ರೇಖಾಚಿತ್ರಗಳ ವಿವರಗಳು

೫. ಛಾಯಾಚಿತ್ರಗಳ ವಿವರಗಳು

## ೧. ಸಂಕ್ಷೇಪಗಳ ವಿಸ್ತೃತ ರೂಪಗಳು

| | | |
|---|---|---|
| **ಇ.ದ** | : | ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿಯ ವಾರ್ಷಿಕ ಸಂಚಿಕೆ, ಬೆಂಗಳೂರು. |
| **ಕ.ಭಾ.** | : | ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನ ನಿಯತಕಾಲಿಕೆ, ಧಾರವಾಡ. |
| **APGAS** | : | Andhra Pradesh Government Archaeological series, Hyderabad. |
| **ARAD** | : | Anual report of the Archaeological Department of the former Hyderabad State, Hyderabad. |
| **ARGS** | : | Annual report of the Geological Survery of the former Hyderabad State, Hyderabad. |
| **ARKR** | : | Annual report of the Kannada Research Institute, Dharwad. |
| **BDCPG & RI** | : | Bulletin of the Deccan College post Graduate and Research Institute, Poona. |
| **IAR** | : | Indian Archaeology, A review, New Delhi. |
| **IA** | : | Indian Antiguary, New Delhi. |
| **JASB** | : | Journal of the Asiatic society of Bengal. |
| **JBORS** | : | Journal of the Bihar and Orissa, Research society. |
| **JIH** | : | Journal of Indian History |
| **JKUSS** | : | Journal of Karnataka University, Social Science, Dharwad. |
| **JPN** | : | Journal of Prachya Niketan, Bhopal. |
| **JRAS** | : | Journal of the Royal Asiatic Society. |
| **N.G.** | : | National Geographic(Washignton, D.C) |
| **QJMS** | : | Quarter Journal of the Prachya Niketon, Bhopal. |

## ೨. ಆಧಾರ ಗ್ರಂಥಗಳು


**ಕನ್ನಡ ಪುಸ್ತಕಗಳು**

೦೧. ಗವಿಶೆಟ್ಟಿ ಕೆ., ೧೯೯೫, ಕರ್ನಾಟಕದ ಖನಿಜ ಸಂಪತ್ತು, ಬೆಂಗಳೂರು.

೦೨. ಗೋಪಾಲ್, ಬಾ.ರಾ., ೧೯೮೭, ಕರ್ನಾಟಕದಲ್ಲಿ ನವಶಿಲಾಯುಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೩. ನಾಯಕ ಹಾ.ಮ.ಆ.(ಸಂ.), ೧೯೭೯, ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೦೪. ಪ್ರಕಾಶ ಹುಣಸಗಿ., ೧೯೮೭, ಗಂಗಾವತಿ ತಾಲೂಕು ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು.

೦೫. ಪಾಟೀಲ ಬಿ.ಸಿ., ೧೯೯೮, ಕೊಪ್ಪಳ ಸಾಂಸ್ಕೃತಿಕ ಅಧ್ಯಯನ, ಹರಿಹರ ಪ್ರಕಾಶ, ಕೊಪ್ಪಳ.

೦೬. ಪಾಟೀಲ ಎಸ್.ಸಿ., ೧೯೯೩, ಕರ್ನಾಟಕದ ಜಾನಪದ ಚಿತ್ರಕಲೆ, ಜಗದ್ಗುರು ತೋಂಟದಾರ್ಯ ಮಠ, ಗದಗ.

೦೭. ಶರ್ಮ ಆರ್.ಎಸ್., ೧೯೯೯, ಪ್ರಾಚೀನ ಭಾರತ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೦೮. ಶಿವರಾಮ ಕಾರಂತ, ೧೯೭೯, ಕಲಾಪ್ರಪಂಚ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೦೯. ಶ್ರೀಶೈಲ ಆರಾಧ್ಯ., ೧೯೮೩, ಸಂಶೋಧನೆಯ ಹಾದಿಯಲ್ಲಿ, ಆರೋಹಣ ಪ್ರಕಾಶನ, ಚಿತ್ರದುರ್ಗ.

೧೦. ಸುಂದರ ಅ., ೧೯೯೪, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.

೧೧. ಸುಂದರ ಅ.(ಸಂ.), ೧೯೯೭, ಕರ್ನಾಟಕ ಚರಿತ್ರೆ ಸಂ.೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೨. ಸೂರ್ಯನಾಥ ಕಾಮತ್(ಸಂ.), ೧೯೮೪, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೧, ಕರ್ನಾಟಕ ಸರಕಾರ ಬೆಂಗಳೂರು.

**ಲೇಖನಗಳು**

೦೧. ಕೃಷ್ಣಯ್ಯ ಎಚ್.ಎಂ., ೧೯೮೯, *"ಕರ್ನಾಟಕದಲ್ಲಿ ಚಿತ್ರಕಲಾ ಪರಂಪರೆ"*, ಶೃಂಗಾರ ಲಹರಿ, ಪಿ.ಎಂ.ಎನ್.ಪ್ರಕಾಶನ, ಬೆಂಗಳೂರು.

೦೨. ಚಂದ್ರಶೇಖರ ಎಚ್. ೧೯೯೩, *"ರಾಯಚೂರು ನೈಸರ್ಗಿಕ ಸಂಪನ್ಮೂಲಗಳು ಮತ್ತು ಅವುಗಳ ಬಳಕೆಯ ಸ್ಥಿತಿಗತಿ ಮತ್ತು ಮುನ್ನೋಟ"*, ತಿರುಳ್ಗನ್ನಡ, ಸಾಹಿತ್ಯ ಸಮ್ಮೇಳನ ಸಮಿತಿ, ಕೊಪ್ಪಳ.

೦೩. ಜಯರಾಮಯ್ಯ ಜೆ.ಟಿ., ೨೦೦೦, *"ಬಯಲು ಬಂಡೆ ಚಿತ್ರನೆಲೆ ವೇದಿಕ್ ನಗರ"*, **ಇತಿಹಾಸ ದರ್ಶನ, ಸಂ.೧೫,** ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೦೪. ತಿಪ್ಪೇಸ್ವಾಮಿ ಪಿ.ಆರ್., ೧೯೮೫, *"ಕರ್ನಾಟಕ ಚಿತ್ರಕಲೆ"*, **ಅವಲೋಕನ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೦೫. ದೇವರಕೊಂಡಾರೆಡ್ಡಿ, ೨೦೦೧, *"ಗಬ್ಬೂರಿನಲ್ಲಿ ಪ್ರಾಗೈತಿಹಾಸಿಕ ಅವಶೇಷಗಳ ಪತ್ತೆ"*, **ರಾಯಚೂರ ವಾಣಿ,** ದಿನಪತ್ರಿಕೆ, ೨೫.೦೩.೨೦೦೧. ರಾಯಚೂರು.

೦೬. ನರಸಿಂಹನ್, ಅ.ಲ., ೧೯೯೮, *"ಕರ್ನಾಟಕದ ಚಿತ್ರಕಲೆಯಲ್ಲಿ ಸಂಸ್ಕೃತಿ"*, **ಸಾರ್ಥಕ,** ಎಂ.ಮರಿಯಪ್ಪ ಭಟ್ಟರ ಸಂಸ್ಮರಣ ಗ್ರಂಥ ಸಮಿತಿ, ಮದರಾಸು.

೦೭. ಬಂಗಾರಿ ವಿ.ಎಸ್., ೧೯೭೬, *"ಕೊಪ್ಪಳ ನಾಡಿನ ಭೌಗೋಳಿಕ ದರ್ಶನ"*, **ಗವಿದೀಪ್ತಿ,** ಕೊಪ್ಪಳ.

೦೮. ಬೆನ್‌ಸ್ಕಾಲಿ ಎಂ.ಡಿ., *"ಶಿಲಾಯುಗದ ಮೇಲೆ ಇನ್ನಷ್ಟು ಬೆಳಕು"*, **ಪ್ರಜಾವಾಣಿ** ದಿನಪತ್ರಿಕೆ, ಬೆಂಗಳೂರು.

೦೯. ಮುತ್ತುರಾಜ್., ೧೯೯೫, *"ಸೂಳೆಕಲ್ ಮಠದ ಗುಹಾ ಚಿತ್ರಗಳು"*, **ಇತಿಹಾಸ ದರ್ಶನ,** ಸಂ.೧೦, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೧೦. ರಾಧಾಕೃಷ್ಣ ಬಿ.ಪಿ., ೧೯೮೫, *"ಕರ್ನಾಟಕದ ಖನಿಜ ಸಂಪತ್ತು"*, **ಅವಲೋಕನ,** ಕರ್ನಾಟಕ ಸರಕಾರ, ಬೆಂಗಳೂರು.

೧೧. ವಾಸುದೇವ ಎನ್., ೧೯೯೯, *"ಗುಹಾಂತರಾಳದ ಕಲೆ ಕಲಾವಿದ"*, **ಪ್ರಜಾವಾಣಿ** ದಿನಪತ್ರಿಕೆ ೨೭.೦೬.೧೯೯೯, ಬೆಂಗಳೂರು.

೧೨. ವಿಲಾಸ್ ಎಂ.ಮೇಲರಗಿ, ೨೦೦೧, "ಬಗ್ಗಲು ರಂಗವ್ವನ ಹಳ್ಳಿಯಲ್ಲಿ ಬೆಳಕು ಕಂಡಿರುವ ಪ್ರಾಚೀನ ಬಯಲು ಬಂಡೆ ಗೀರು ಚಿತ್ರಗಳು", ವಿಜಯ **ಕರ್ನಾಟಕ** ದಿನಪತ್ರಿಕೆ, ೧೨.೨.೨೦೦೧, ಬೆಂಗಳೂರು.

೧೩. ವಿಲಾಸ್ ಮ.ಜೋಗಳ., ೧೯೯೬, *"ತಾವರಗೇರಾದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳ ಶೋಧನೆ"*, **ಇತಿಹಾಸ ದರ್ಶನ,** ಸಂ.೧೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೧೪. ವಿಶ್ವನಾಥ್ ಜೆ. ಮತ್ತು ಮಂಜುನಾಥ್ ಎಂ.ಜಿ., ೧೯೯೬, *"ಸಾಸಲುವಿನ ಬೃಹತ್ ಶಿಲಾಯುಗದ ಸ್ಮಾರಗಳು ಮತ್ತು ರೇಖಾ ಚಿತ್ರಗಳು"*, **ಇತಿಹಾಸ ದರ್ಶನ,** ಸಂ.೧೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೧೫. ಶಂಭುಲಿಂಗಪ್ಪ ಟಿ., ೧೯೯೩, *"ರಾಯಚೂರು ಜಿಲ್ಲೆಯ ಗುಹಾ ಚಿತ್ರಗಳು"*, **ತಿರುಳ್ಗನ್ನಡ,** ಸಾಹಿತ್ಯ ಸಮ್ಮೇಳನ ಸಮಿತಿ, ಕೊಪ್ಪಳ.

೧೬. ಶಾಸ್ತ್ರೀ ಬಿ.ವಿ.ಕೆ., ೧೯೯೩, *"ಪ್ರಾಚೀನ ಚಿತ್ರಕಲೆ"*, **ಚಿತ್ರಕಲಾ ಪ್ರಪಂಚ,** ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.

೧೭. ಶ್ರೀಶೈಲ ಆರಾಧ್ಯ ಎಚ್., ೧೯೮೭, *"ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸ ಚಿತ್ರಗಳು"*, **ಹರತಿಸಿರಿ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೧೮. ಸುಂದರ ಅ., ೧೯೭೩, *"ಗಂಗಾವತಿ ತಾಲೂಕಿನ ಪ್ರಾಚ್ಯ ವಸ್ತುಗಳು"*, **ಕರ್ನಾಟಕ ಭಾರತಿ ೬-೧,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೯. ------"------, ೧೯೭೪, *"ಕರ್ನಾಟಕದಲ್ಲಿಯ ಪ್ರಾಗೈತಿಹಾಸಿಕ ವರ್ಣಚಿತ್ರಗಳು"*, **ಸವಿಸಂಚಯ,** ಶ್ರೀ ಸದಾಶಿವ ಒಡೆಯರ ೫೦ನೇ ಹುಟ್ಟುಹಬ್ಬ ಉತ್ಸವ ಸಮಿತಿ, ಚೌಡಯ್ಯ ದಾನಾಪುರ.

೨೦. ------"------, ೧೯೭೬, *"ಕೊಪ್ಪಳ ಇತಿಹಾಸ ಪೂರ್ವಕಾಲ"*, **ಗವಿದೀಪ್ತಿ,** ಶ್ರೀ ಗವಿಸಿದ್ದೇಶ್ವರ ಕೃಪಾಪೋಷಿತ ವಿದ್ಯಾರ್ಥಿ ಬಳಗ, ಕೊಪ್ಪಳ.

೨೧. ------"------, ೧೯೮೧, *"ಉತ್ತರ ಕರ್ನಾಟಕದಲ್ಲಿ ಬಂಡೆಗಲ್ಲಿನ ವರ್ಣಚಿತ್ರಗಳು"*, **ಬೆಳ್ಳೊಲ ಕನ್ನಡ ಅಧ್ಯಯನ ಪೀಠ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೨. ------"------, ೧೯೮೭, *"ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳು, ಕರ್ನಾಟಕ"*, **ಹರಿತಿಸಿರಿ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೨೩. ------"------, ೧೯೯೩, *"ವಿಶಿಷ್ಟ್ಯ ವರ್ಣಚಿತ್ರ ಕಲೆಯ ಆಗರ ಬಾದಾಮಿ"*, **ಚಿತ್ರಕಲಾ ಪ್ರಪಂಚ,** ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.

೨೪. ------"------,*"ಶಿವಮೊಗ್ಗ ನಗರ ಪ್ರದೇಶದಲ್ಲಿ ಮಹತ್ವದ ಪ್ರಾಗಿತಿಹಾಸದ ಸಾಂಸ್ಕೃತಿಕ ಕುರುಹುಗಳು"*, **ವಜ್ರಪಥ.**

೨೫. ಸುಬ್ರಹ್ಮಣ್ಯಂ ಕೆ.ವಿ., ೧೯೯೨, *"ಮಾನವನ ಕಲಾ ಸೃಷ್ಟಿಯ ಮೊದಲ ಹೆಜ್ಜೆಗಳು"*, **ಪ್ರಜಾವಾಣಿ** ದಿನಪತ್ರಿಕೆ, ೨೦.೧೨.೧೯೯೨, ಬೆಂಗಳೂರು.

೨೬. ಹೆಬ್ಬಾರ್ ಕೆ.ಕೆ., ೧೯೯೩, *"ಕಲೆಯ ಹುಟ್ಟು ಮತ್ತು ವಿಕಾಸ"*, **ಚಿತ್ರಕಲಾ ಪ್ರಪಂಚ,** ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.

**ENGLISH BOOKS**

01. Abhishankar K.(Ed), 1970, **Karnataka State Gzaetter,** Raichur District, Govt of Karnataka, Bangalore:

02. -----"-----., 1972, **Karnataka State Gzaetter,** Bellary District, Govt of Karnataka, Bangalore.

03. Alimen H., 1957, **The Prehistory of Africa,** Hutchinson Scientific and Techinical, London.

04. Allchin F.R., 1960, **Piklihal Excavations(APGAS-1),** The Govt. of Andhrapradesh, Hyderabad.

05. Allchin B., & Allichin R., 1968, **Birth of Indian Civillization India and Pakistan before, 500 BC,** Penguin Books, Harmands worth.

**06. Annual Report of the Geological Survery** of the farmer, Hyderabad State, Vol.IV, 1941.

07. Anusari Z.D., & Nagaraj Rao M.S., 1969, **Excavations at Sangana Kallu 1964-65,** Deccan College Post Gradute and Research Institute, Poona.

08. Boldwin Brown G., 1981, **The Art of the Cave Dweller,** Cosmo Publications, New Delhi.

09. Berehguer, M., 1973, **Prehistoric Man and his art,** The Caves of Ribadesella, Sourvenir Press, London.

10. Birdget and Raymond Allchin., 1983, **The Rise of Civillization in India and Pakistan,** Select Book Service Syndicate, New Delhi.

11. Burkitt M.C., 1992(IV edi), **The Old Stone Age,** Rupa and Co., Calcutta.

12. Chirstain F Feest, 1980, **Native Arts of North America,** Thames and Hudson Ltd., London.

13. Deo S.B.,& Ansori Z.D., 1965, **Chalcolithic Chandoli,** DCPG & R.I., Poona.

14. Enjela Posati and others., 1990, **Rupastriyan Archaeology,** Valcamonic, Italy.

15. Erwin Newmayer, 1993, **Lines on Stone,** Manohar Publishers & Distributors, New Delhi.

16. Foote R.B., 1979(Repri), **Prehistoric and Protohistoric Antiguites and India,** Leeladevi Publication, Delhi.

17. Ghosh A.(Ed), 1989, **An Encyclopaedia of Indian Archaeology,** Vol.II, Munshiram Manoharlal Publishers Pvt. Ltd., New Delhi.

18. Gordon D.H., 1958, **The Prehistoric Background of Indian Culture,** N.M.Tripati, Bombay.

19. Gupta J., 1967, **Pragaitihasik Bharteeya Chitrakala,** National Publishing House, Delhi.

20. Jain K.C., 1979, **Prehistory and Protohistory of India,** Agam Kala Prakash, New Delhi.

21. John Julius Norwich(Edi), 1990, **Oxford Illustrated Encyclopedia of the Arts,** Oxford University Press, New york.

22. John Lewis, 1982(Repri), **Anthropology made simple,** Heinemanna, London.

23. Joshi R.V., 1955, **Pleistocene Studies in the Malaprabha Basin,** D.C.R.I. & Karnataka University, Poona, Dharwad.

24. Man, Leonard, 1934-35, **Annual Report of the Archaeology Department of the Farmer Hyderbad Sate,** Govt. of Hyderabad.

25. Mathpal Yashodhar., 1984, **Prehistoric rock Paintings of Bhimbetka** Shakti Malik Abinar Publication, New Delhi.

26. Mitra P., 1923, **Prehistoric India its place in the word's Culture,** Calcutta University, Calcutta.

27. Mulvaney D.J., 1975, **The Prehistory of Australia,** Penguin Books, Austrlia.

28. Nagaraj Rao, M.S.& Malhotra K.C., 1965, **The Stone Age hill Dwellers of Tekkalakota,** D.C.P.G. & R.I.Poona.

29. Nagaraj Rao M.S., 1978, **Progress of Archaeology in Karnataka 1956-72,** Directorate of Archaeology and Museums, Mysore.

30. Paddayya K., 1982, **The Acheulian Culture of the Hunasgi Valley,** DCPG & RI, Poona.

31. Panchamukhi R.S., 1939-40, **Annual Report of the Kannada Research Institute,** Dharwad.

32. **Panoram of Indian Painting,** 1968, Govt of India, New Delhi.

33. Pappu R.S., 1974, **Pleistocene Studies in the Upper Krishna Basin,** DCPG & RI, Poona.

34. Percy Brown, 1917, Indian Painting, Y.M.C.A. Publication, Calcutta.

35. Poonacha K.P., 1990, **Archaeology of Mainad Region,** Ph.D Thesis Submitted to Karnataka University, Dharwad.

36. Reinach S., 1924, **Appollo(History of Art),** Charles Seribner's Sons, Newyork.

37. Robert Layton, 1992, **Australian Rock Art,** Cambridge University Press, Cambridge.

38. Sankalia H.D., 1974, **The Prehistory & Protohistory of India and Pakistan,** DCPG & RI, Poona.

39. Sharma R.K. & Tripati R.K., 1996, **Recent Perspectives on Prehistoric Art in India,** Aryan Books International, New Delhi.

40. Susan L.Huntignton, **The Art of Ancient India,** Wather Hill, Newyork.

41. Sundara A., 1983 (Repri), **The Early Chamber Tombs of South India,** University Publishers, Delhi.

42. Wakankar V.S., 1973, **Painted Rock Shelters of India,** Ph.D Thesis, Poona.

**ARTICLES**

01. Allchin F.R., 1955, *"Archaeological Sites in the Benkal Forests",* **Man,** Vol.55, Hyderabad.

02. Anderson C.W., 1918, *"Rock Paintings in Singanapur",* **JBORS,** V.4, No.2.

03. Arisari Z.D., 1970, *"Pebble Tools from Nitture (Mysore State)",* **IA** Vol.IV.

04. Cookburn J., 1899, *"Cave Drawings in the Kaimur Range, North West Provisionces"* **JRAS.**

05. David Couison, 1999, *"Ancient art of the Sahar"* **N.G.,** Vol.195, No.6.

06. -----"----------, 1999, *"Preserving the Sahara's Prehistoric Art",* **N.G.,** Vol.196, No.3, National Geographic Society, Washignton D.C.

07. Dikshit, M.G., 1958, *"Exploration in District Mandasar",* **IAR,** 1957-58, Delhi.

08. Dishit, S.K., 1956, *"Rock Shelters in Vindhya Pradesh",* **IAR,** 1955-56.

09. *"Exploration of Painted Shelters at Hampi and Venkatapur"* by Directorate of Archaeology and Musuem, Mysore, **IAR,** 1984-85.

10. Holm E., 1961, **"The Rock Art of South Africa"** ASA

11. Gordon D.H., 1951, *"Archaeological Sites in the Benkal Forest",* **Man** No.114, Hyderabad.

12. -----"-------., 1951, *"The Rock Engravings of Kapagallu Hill, Bellary",* **Man** No.204, Madras.

13. Gordon M.E. &Gordon D.H., 1943, *"The Cultures of Maski and Madhavapur",* **JRASB,** letter No.9.

14. Gordon D.H., & Allchin F.R., 1955, *"Rock Paintings and Engravings in Raichur",* **Man,** No.114, Hyderabad.

15. Jadia K.P., 1962, *"Painted Rock Shelters Brijapur District",* **IA,** Vol.62.

16. Jayashwal, K.P., 1933, *"The Vikramkhol Inscription, Sambalpur District",* **IA,** Vol.62

17. Joshi S.K. and Bapardikar B.P, 1976, *"Exploration in District Bellary",* **IAR,** 1976-77.

18. Kathuria R.P., 1975, *"Primitive Rock Paintings in Bhopal",* Prachya Pratibha **JPNB** Vol.3., No.2.

19. Khatri A.P., 1996, *"Rock Shelters, Pachmarhi Hills, District Hosangabad"* **IAR,** 1960-61.

20. Lhote H., 1961, *"The Rock Art of the Maghereb and Shara"* **ASA**.

21. Mathpal Y., 1980, *"Swarna Giri Ajabhi Sona Ugal Sakata Hai Vasharte"* **Nava Bhart Times** June 22.

22. Munn L., 1935, *"Prehistoric and Protohistoric finds of the Raichur Doab and Shorapur Districts of HEH the Nizams Dominians"* **Man in India,** Vol.15, No.4.

23. ------"------, 1935, *"Rock Paintings in Raichur, Hyderabad",* **Man,** 114.

24. Nagarja Rao M.S., 1964, **"Recent exploration in the Tungabhadra Basin the Chalcolithic Phase"** BDCPG & RI, Vo.23, Pune.

25. Neville, J, 1949, *"The Prehistory of South Rhodiesia",* An Account of the progress of Research from 1900 to 1946, **Museum Memoir** No.2, Cambridge University Press.

26. Rao S.R., 1962, *"Exploration of District Rewa"* **IAR,** 1961.

27. Shadakshariah R.M. Tillner, E.O & Bregetti, 1984, *"Exploration in Mallapur, District Raichur"* **IAR,** 1984-85.

28. Shadakshriah, R.M., *"Rock Paintings in Mallapur, Gangavati Taluk, Raichur District"* **Archaeology in Karnataka,** Directrate of Archaeology and Museum, Mysore.

29. Sharma G.R., 1963, *"Exploration in District Allahabad Bhand, Mirjapure and Varnasi"* **IAR,** 1962-63 and 1970-71.

30. Silaberrad C.A., 1907, *"Rock Drawings in the Bandha District"*, **JASB**, Vol.3-1.

31. Smith V., 1906, *"Pyamy Flints"*, **IA,** Vol.6.

32. Sreenivasachar P.(Ed), 1963, *"Prehistoric sites Raichur Districts"*, The Archaeological Bulletin No.II, **APGRS** NO.15, Hyderabad.

33. Sundara A., 1961, *"Megalithic and early Historic sites, Anegondi, Chikrampur, Dist. Raichur"* **IAR,** 1961-92.

34. -----"------, 1965, *"Exploration in District of Bellary and Raichur"* **IAR** 1964-66.

35. -----"------, 1967, *"Rock Shelters Hire Benkal Hills, Dist. Raichur"*, **IAR** 1967-68.

36. ------"------, 1968, *"Rock Shelters Hire Benkal Dist. Raichur"*, **IAR** 1968-69.

37. ------"------, 1974, *"Further Notices of Rock Paintings in Benkal Raichur Dist"*, **J14,** Vol.52, Tiruvanantapuram.

38. ------"------, 1977, *"Exploration in Dist. Bellary, Chitradurga and Raichur"*, **IAR** 1977-78.

39. ------"------, 1978, *"Prehistoric Art in Karnataka"* **Archaeology of Karnataka**, Mysore.

40. ------"------, 1985, *"Rock Bruisings in North Karnataka with Particular Reference to Billamarayana Gudda"*, **Studies in Karnataka,** Karnataka History Congress, No.1, Bangalore.

41. ------"------, 1987, *"Some Note Worthy Rock Paintings in chick Ramapur"* **JKU(SS)** Vol.xxiii, Dharwad.

42. ------"------, *"Rock Paintings in Hampi, Some Aspects"* **Archaeology in Karnataka,** Mysore.

43. ------"------, *"Some Rare Rock Engravings in Hire Madapur and Muttenahalli"*

44. ------"------, *"Prehistoric Rock Engravings in Holaluru"*

45. Thapar B.K., 1957, *"Maski A Chalcolitic site of Southern Deccan"*, **Ancient India,** No.13, New Delhi.

46. The Grand Canyan's Hidden Art Galleries-2000 *"National Geographica"* Vol.197, No.4.

47. Tillner, E.O., 1997, *"Biref Report on the 20th Aniversary GE.FF BI Expedition in India from Nov 1996-1997"*, **Stein,** Switzerland.

48. Tiwari S., 1975, *"Jaora-The Shelter of the Largest Rock Paintings in India"*, Pracha Pratibha, **JPNB** Vol.3, M.2.

49. Thampi S.K., 1976, *"Mariyur-A Key to the Prehistoric Archaeology of South Kerala"*, **BDCPG & RI** Vol.35, Poona.

50. Tribedi C.B., 1961, *"Rock Shelters District Narsimhpur"*, **IAR**-61.

51. Trivedi H.V., 1959, *"Rock Shelter in Dist Mandsor"* **IAR,** 1958-59.

52. Vasanta Shetti, 1983, *"Prehistoric Rock Brusings from South Kannada"*, **QJMS,** Vol.74, Bangalore.

53. Vedananda, 1960, *"Rock Shelters of Sagar Dist."*, **IAR,** 1959-60.

54. Wakankar V.S., 1957, *"Rock Shelters of Dist. Raisen"* **IAR,** 1956-57.

55. ------"------, 1961, *"Rock Shelters of Dist. Raisen"*, **IAR,** 1960-61, 1964.

56. ------"------, 1970, *"Exploration in Dist. Mandsor, Rajgarh, Sarjapur, Ujjan and West Nimar"*, **IAR,** 1969-70.

# ೪. ರೇಖಾಚಿತ್ರಗಳ ವಿವರಗಳು

| ಚಿತ್ರಗಳ ಕ್ರ.ಸಂ | ವಿವರಗಳು |
|---|---|
| ೦೧. | ಪ್ರಾಣಿ ಸಮೂಹ, ಕೊಪ್ಪಳ ೧ ನೇ ಗವಿ |
| ೦೨. | ಬೇಟೆಯ ದೃಶ್ಯ, ಕೊಪ್ಪಳ ೨ನೇ ಗವಿ |
| ೦೩. | ಎತ್ತುಗಳ ಸಮೂಹ, ಕೊಪ್ಪಳ ೩ನೇ ಗವಿ |
| ೦೪. | ಮನುಷ್ಯ, ಜಿಂಕೆ ಸಮೂಹ, ಹಂಪಿ ೪ನೇ ಗವಿ |
| ೦೫. | ಹುಲಿ, ಗೂಳಿ, ಹಂಪಿ ೨ನೇ ಕಲ್ಲಾಸರೆ |
| ೦೬. | ನಗ್ನ ವ್ಯಕ್ತಿಗಳು, ಹಂಪಿ ೫ನೇ ಕಲ್ಲಾಸರೆ |
| ೦೭. | ಎತ್ತುಗಳು, ಮಲ್ಲಾಪುರ ೮ನೇ ಗವಿ |
| ೦೮. | ಸಾಲು ಕುಣಿತಗಾರರು, ಹಿರೇಬೆಣಕಲ್ ೧೨ನೇ ಗವಿ |
| ೦೯. | ವೈವಿಧ್ಯಮಯ ಚಿತ್ರಗಳು, ಹಿರೇಬೆಣಕಲ್ ೧ನೇ ಗವಿ |
| ೧೦. | ವೈವಿಧ್ಯಮಯ ಚಿತ್ರಗಳು, ಹಿರೇಬೆಣಕಲ್ ೬ನೇ ಗವಿ |
| ೧೧. | ಹೆಬ್ಬಾವಿನ ಚಿತ್ರಗಳು, ಹಿರೇಬೆಣಕಲ್ ೨ನೇ ಗವಿ |
| ೧೨. | ಮಂಡಲ, ವೃತ್ತ, ಅಶ್ವಸವಾರ, ಬಿಳೇಭಾವಿ ೧ನೇ ಕಲ್ಲಾಸರೆ |
| ೧೩. | ಕಾಮಧೇನು(?) ಮಂಡಲಗಳು, ಬಿಳೇಭಾವಿ ೨ನೇ ಗವಿ |
| ೧೪. | ವಿಚಿತ್ರಾಕೃತಿಗಳು, ಹಿರೇಬೆಣಕಲ್ ೧೭ನೇ ಗವಿ |
| ೧೫. | ಹಡಗು, ಅಂಜನಹಳ್ಳಿ ೧ನೇ ಕಲ್ಲಾಸರೆ |
| ೧೬. | ಪಶುಪಾಲನೆ ದೃಶ್ಯ, ಚಿಕ್ಕರಾಂಪುರ ೧ನೇ ಗವಿ |
| ೧೭. | ಶಿಲಾವೃತ್ತ ಸಮಾಧಿ, ಚಿಕ್ಕರಾಂಪುರ ೧ನೇ ಗವಿ |
| ೧೮. | ಗೋಗ್ರಹಣ ದೃಶ್ಯ, ಚಿಕ್ಕರಾಂಪುರ ೪ನೇ ಗವಿ |
| ೧೯. | ಮಂಡಲಗಳು, ಚಿಕ್ಕರಾಂಪುರ ೬ನೇ ಕಲ್ಲಾಸರೆ |
| ೨೦. | ಮನುಷ್ಯ ಪ್ರಾಣಿ, ರಾಂಪುರ ೨ನೇ ಗವಿ |
| ೨೧. | ಹುಡಗಳು, ಹಿರೇಬೆಣಕಲ್, ೧೬ನೇ ಕಲ್ಲಾಸರೆ |
| ೨೨. | ಕಡವೆ(ವರ್ಣ) ಎತ್ತುಗಳು(ಕೊರೆದ), ಕಮಲಾಪುರ ೧ನೇ ಕಲ್ಲಾಸರೆ |
| ೨೩. | ಪಕ್ಷಿಗಳು, ಆನೆಗುಂದಿ, ೬ನೇ ನೆಲೆ, ಕಲ್ಲಾಸರೆ ೧ |
| ೨೪. | ಪಕ್ಷಿ ಬೇಟೆ, ಆನೆಗುಂದಿ, ೬ನೇ ನೆಲೆ, ಕಲ್ಲಾಸರೆ ೨ |

೨೫. ವಿಶಿಷ್ಟ ಮನುಷ್ಯ, ಆನೆಗುಂದಿ ೬ನೇ ನೆಲೆ, ಕಲ್ಲಾಸರೆ ೩

೨೬. ನಗ್ನ ಮನುಷ್ಯ, ಪ್ರಾಣಿಗಳು, ಮಲ್ಲಾಪುರ, ೩ನೇ ಗವಿ

೨೭. ಮನುಷ್ಯ ಚಿತ್ರಗಳು, ಆನೆಗುಂದಿ, ೧ನೇ ಕಲ್ಲಾಸರೆ

೨೮. ಪ್ರಾಣಿಸಮೂಹ, ಜಿಂಕೆಬೇಟೆ, ಆನೆಗುಂದಿ, ೨ನೇ ಕಲ್ಲಾಸರೆ

೨೯. ಪಶುಪಾಲನೆ ದೃಶ್ಯ, ಮಲ್ಲಾಪುರ, ೬ನೇ ಗವಿ

೩೦. ಮನುಷ್ಯ, ಪ್ರಾಣಿಗಳು, ಎಮ್ಮಿಗುಡ್ಡ, ೧ನೇ ಕಲ್ಲಾಸರೆ

೩೧. ಸಂಕೇತ, ಮನುಷ್ಯಚಿತ್ರಗಳು(ಬಿಳಿ), ಎಮ್ಮಿಗುಡ್ಡ, ೨ನೇ ಕಲ್ಲಾಸರೆ

೩೨. ಸಾಲು ನೃತ್ಯಗಾರರು, ವೆಂಕಟಾಪುರ ೧ನೇ ಗವಿ

೩೩. ಎತ್ತು, ಮನುಷ್ಯ, ಹೊಸ ಬಂಡಿಹರ್ಲಾಪುರ ೧ನೇ ಕಲ್ಲಾಸರೆ

೩೪. ಜಿಂಕೆಗಳು, ಹೊಸ ಬಂಡಿಹರ್ಲಾಪುರ ೨ನೇ ಕಲ್ಲಾಸರೆ

೩೫. ಕಾಡುಕೋಣ, ಹೊಸ ಬಂಡಿಹರ್ಲಾಪುರ ೩ನೇ ಕಲ್ಲಾಸರೆ

೩೬. ಮನುಷ್ಯಚಿತ್ರಗಳು, ಕೋಣ, ಚಿಕ್ಕಬೆಣಕಲ್ ೩ನೇ ಕಲ್ಲಾಸರೆ

೩೭. ಮನುಷ್ಯಚಿತ್ರಗಳು, ಗೂಳಿ, ಮಲ್ಲಾಪುರ ೯ನೇ ಕಲ್ಲಾಸರೆ

೩೮. ಜಿಂಕೆಗಳು, ಹಿರೇಬೆಣಕಲ್, ೧೪ನೇ ಚಿತ್ರನೆಲೆ(ಸಮಾಧಿ)

೩೯. ನಗ್ನಮನುಷ್ಯ, ಇಂದರಗಿ, ೧ನೇ ಕಲ್ಲಾಸರೆ

೪೦. ನಗ್ನಪುರುಷ, ಸ್ತ್ರೀ, ನಾರಾಯಣಪೇಟೆ, ೧ನೇ ಕಲ್ಲಾಸರೆ

೪೧. ವಿಚಿತ್ರ ಮನುಷ್ಯಾಕೃತಿಗಳು, ನಾರಾಯಣಪೇಟೆ, ೩ನೇ ಕಲ್ಲಾಸರೆ

೪೨. ಜಿಂಕೆಗಳು, ನಾರಾಯಣಪೇಟೆ, ೪ನೇ ಕಲ್ಲಾಸರೆ

೪೩. ಎತ್ತುಗಳು(ಕೊರೆದ, ಕುಟ್ಟಿದ), ಮಲ್ಲಾಪುರ ೧ ಮತ್ತು ೨ನೇ ನೆಲೆ

೪೪. ಎತ್ತುಗಳು(ಕೊರೆದ), ಬಸಾಪಟ್ಟಣ ೧ನೇ ನೆಲೆ

೪೫. ವೃತ್ತ, ಚಿನ್ಹೆ, ಸಂಕೇತ ಚಿತ್ರಗಳು, ವಿವಿಧ ನೆಲೆಗಳು

೪೬. ಪಶುಪಾಲಕ ದೃಶ್ಯ, ತೆಂಬಾ, ೪ನೇ ಕಲ್ಲಾಸರೆ

೪೭. ಎತ್ತು, ತೆಂಬಾ, ೫ನೇ ಕಲ್ಲಾಸರೆ

*ಚಿತ್ರ ಕೃಪೆ*

ಚಿತ್ರ ಸಂಖ್ಯೆ ೧, ೨ ಮತ್ತು ೩ ಪಾಟೀಲ, ಬಿ.ಸಿ. ಕೊಪ್ಪಳ ಸಾಂಸ್ಕೃತಿಕ ಅಧ್ಯಯನ
೪, ೫, ೬, ೮, ೩೨ ಡಾ ಅ.ಸುಂದರ, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ.
೧೦, ೧೬, ೧೭, ೧೮, ೧೯ ಇರ್ಬಿನ್ ನ್ಯೂಮೆಯರ್, ಲೈನ್ಸ್ ಆನ್ ಸ್ಟೋನ್
೯ ಎ.ಪಿ.ಜಿ.ಎಸ್. ನಂ. ೧೫ ಆರ್ಕಿ ಬುಲಿಟಿನ್ ನಂ.೨

# ೫. ಛಾಯಾಚಿತ್ರಗಳ ವಿವರ

| ಚಿತ್ರಗಳ ಕ್ರ.ಸಂ | ವಿವರಗಳು |
| --- | --- |
| | **ಗವಿ ಕಲ್ಲಾಸರೆಗಳು** |
| ೦೧. | ಬೆಟ್ಟದ ಪೊಟರೆ ಕಲ್ಲಾಸರೆ, ಹೊಸ ಬಂಡಿ ಹರ್ಲಾಪುರ(೩ನೇ ಕಲ್ಲಾಸರೆ) |
| ೦೨. | ವಾರೆ ಸವಕಳಿ ಕಲ್ಲಾಸರೆ, ಹೊಸ ಬಂಡಿ ಹರ್ಲಾಪುರ(೫ನೇ ಕಲ್ಲಾಸರೆ) |
| ೦೩. | ತಲೆಬಂಡೆ ಕಲ್ಲಾಸರೆ, ಹಿರೇಬೆಣಕಲ್(೨ನೇ ಕಲ್ಲಾಸರೆ) |
| ೦೪. | ಮುಂಚಾಚಿದ ತಲೆ ಬಂಡೆ ಕಲ್ಲಾಸರೆ, ಹಿರೇಬೆಣಕಲ್(೧೬ನೇ ಕಲ್ಲಾಸರೆ) |
| ೦೫. | ವಿಶಾಲಗವಿ(ರಕ್ಕಸಗವಿ), ಹಿರೇಬೆಣಕಲ್(೧೭ನೇ ಗವಿ) |
| ೦೬. | ವಾರೆ ಸವಕಳಿ ಕಲ್ಲಾಸರೆ, ಚಿಕ್ಕಬೆಣಕಲ್(೨ನೇ ಕಲ್ಲಾಸರೆ) |
| ೦೭. | ವಾರೆ ಬಂಡೆ ಕಲ್ಲಾಸರೆ, ಚಿಕ್ಕಬೆಣಕಲ್(೩ನೇ ಕಲ್ಲಾಸರೆ) |
| ೦೮. | ಬೆಟ್ಟದ ಕಲ್ಲಾಸರೆ, ಮಲ್ಲಾಪುರ(೧ನೇ ಕಲ್ಲಾಸರೆ) |
| ೦೯. | ಬಂಡೆ ಗವಿ, ಮಲ್ಲಾಪುರ(೯ನೇ ಗವಿ) |
| ೧೦. | ವಾರೆಬಂಡೆ ಕಲ್ಲಾಸರೆ, ಸಂಗಾಪುರ(೭ನೇ ಕಲ್ಲಾಸರೆ) |
| ೧೧. | ಬಂಡೆ ಕಲ್ಲಾಸರೆ, ಆಗೋಲಿ(೨ನೇ ಕಲ್ಲಾಸರೆ) |
| ೧೨. | ಟೊಳ್ಳು ಬಂಡೆ ಆಸರೆ, ತೆಂಬಾ(೭ನೇ ಕಲ್ಲಾಸರೆ) |
| | **ವರ್ಣಚಿತ್ರಗಳು** |
| ೧೩. | ಮಂಡಲ ಚಿತ್ರಗಳು, ಬಿಳೇಭಾವಿ ೨ನೇ ಗವಿ |
| ೧೪. | ನಗ್ನ ಮನುಷ್ಯ, ಇಂದರಗಿ, ೧ನೇ ಕಲ್ಲಾಸರೆ |
| ೧೫. | ವಿಶಿಷ್ಠ ಮನುಷ್ಯಾಕೃತಿಗಳು, ನಾರಾಯಣಪೇಟೆ ೩ನೇ ಕಲ್ಲಾಸರೆ |
| ೧೬. | ಎತ್ತು, ಹೊಸಬಂಡಿಹರ್ಲಾಪುರ, ೧ನೇ ಕಲ್ಲಾಸರೆ |
| ೧೭. | ಕಾಡುಕೋಣ, ಹೊಸಬಂಡಿಹರ್ಲಾಪುರ, ೩ನೇ ಕಲ್ಲಾಸರೆ |
| ೧೮. | ಅಶ್ವಸವಾರರು, ಹಿರೇಬೆಣಕಲ್ ೧ನೇ ಕಲ್ಲಾಸರೆ |
| ೧೯. | ಅಶ್ವಸವಾರರು, ಹಿರೇಬೆಣಕಲ್ ೧ನೇ ಕಲ್ಲಾಸರೆ |
| ೨೦. | ಹೆಬ್ಬಾವು, ಹಿರೇಬೆಣಕಲ್ ೨ನೇ ಕಲ್ಲಾಸರೆ |
| ೨೧. | ನಗ್ನ ವ್ಯಕ್ತಿ, ಹಂದಿ, ಹಿರೇಬೆಣಕಲ್ ೨ನೇ ಕಲ್ಲಾಸರೆ |

೨೨. ಎತ್ತು, ಹಿರೇಬೆಣಕಲ್ ೧೩ನೇ ಕಲ್ಲಾಸರೆ

೨೩. ಜಿಂಕೆಗಳು, ಹಿರೇಬೆಣಕಲ್ ೧೪ನೇ ಚಿತ್ರ(ಸಮಾಧಿ)

೨೪. ಮೀನು, ಹಿರೇಬೆಣಕಲ್ ೧೬ನೇ ಕಲ್ಲಾಸರೆ

೨೫. ವಿಚಿತ್ರ ಆಕೃತಿ ೧, ಹಿರೇಬೆಣಕಲ್ ೧೭ನೇ ಕಲ್ಲಾಸರೆ

೨೬. ವಿಚಿತ್ರ ಆಕೃತಿ ೨, ಹಿರೇಬೆಣಕಲ್ ೧೭ನೇ ಕಲ್ಲಾಸರೆ

೨೭. ಪ್ರಾಣಿ ಸಮೂಹ, ಆನೆಗುಂದಿ ೨ನೇ ಕಲ್ಲಾಸರೆ

೨೮. ಮನುಷ್ಯ, ಪ್ರಾಣಿ, ಮಂಡಲ, ಆನೆಗುಂದಿ ೩ನೇ ಕಲ್ಲಾಸರೆ

೨೯. ಜಿಂಕೆ, ಪಕ್ಷಿಬೇಟೆ, ಆನೆಗುಂದಿ ೬.೩ನೇ ಕಲ್ಲಾಸರೆ

೩೦. ಮನುಷ್ಯ, ಆನೆಗುಂದಿ ೬.೪ನೇ ಕಲ್ಲಾಸರೆ

೩೧. ಆನೆ, ಆನೆಗುಂದಿ ೭ನೇ ಗವಿ

೩೨. ಪಶುಪಾಲನೆ ದೃಶ್ಯ, ಚಿಕ್ಕರಾಂಪುರ ೧ನೇ ಗವಿ

೩೩. ಶಿಲಾವೃತ್ತ ಗೋರಿ, ಚಿಕ್ಕರಾಂಪುರ ೧ನೇ ಗವಿ

೩೪. ಗೋಗ್ರಹಣ(?), ಚಿಕ್ಕರಾಂಪುರ ೪ನೇ ಕಲ್ಲಾಸರೆ

೩೫. ಜೋಡಿ ಎತ್ತುಗಳು, ಚಿಕ್ಕರಾಂಪುರ ೬ನೇ ಕಲ್ಲಾಸರೆ

೩೬. ಮಂಡಲ, ಸಂಗಾಪುರ ೬ನೇ ಕಲ್ಲಾಸರೆ

೩೭. ನಗ್ನ ಮನುಷ್ಯ, ಮಲ್ಲಾಪುರ ೧ನೇ ಕಲ್ಲಾಸರೆ

೩೮. ನಗ್ನ ದಂಪತಿಗಳು, ಮಲ್ಲಾಪುರ ೩ನೇ ಗವಿ

೩೯. ಮನುಷ್ಯ, ಮಲ್ಲಾಪುರ ೩ನೇ ಗವಿ

೪೦. ಕೋಣ, ಮಲ್ಲಾಪುರ ೩ನೇ ಗವಿ

೪೧. ಮನುಷ್ಯ, ಮಲ್ಲಾಪುರ ೩ನೇ ಗವಿ

೪೨. ಪಶುಪಾಲನೆ ದೃಶ್ಯ, ಮಲ್ಲಾಪುರ ೬ನೇ ಕಲ್ಲಾಸರೆ

೪೩. ಎತ್ತುಗಳು, ಮಲ್ಲಾಪುರ ೮ನೇ ಕಲ್ಲಾಸರೆ

೪೪. ಮನುಷ್ಯ ಗೂಳಿಗಳು, ಮಲ್ಲಾಪುರ ೯ನೇ ಕಲ್ಲಾಸರೆ

೪೫. ಎತ್ತು, ನಕ್ಷತ್ರ, ಸಂಗಾಪುರ ೧ನೇ ಗವಿ

೪೬. ಮಂಡಲ, ಹೂ ದಳ(?), ಸಂಗಾಪುರ ೧ನೇ ಗವಿ

೪೭. ಎತ್ತು, ಮನುಷ್ಯ, ಸಂಗಾಪುರ ೩ನೇ ಕಲ್ಲಾಸರೆ

೪೮. ಪ್ರಾಣಿಗಳು, ಸಂಗಾಪುರ ೭ನೇ ಕಲ್ಲಾಸರೆ

೪೯. ಮನುಷ್ಯ, ಕಾಡುಕೋಣ, ಚಿಕ್ಕಬೆಣಕಲ್ ೩ನೇ ಕಲ್ಲಾಸರೆ

೫೦. ಮನುಷ್ಯ, ರಾಂಪುರ ೧ನೇ ಕಲ್ಲಾಸರೆ

೫೧. ಹಡಗು, ಅಂಜನಹಳ್ಳಿ ೧ನೇ ಕಲ್ಲಾಸರೆ

೫೨. ವಿವಿಧ ಚಿತ್ರಗಳು, ತಿರುಮಲಾಪುರ ೧ನೇ ಕಲ್ಲಾಸರೆ

೫೩. ಜಿಂಕೆ ಬೇಟೆ, ಗಡ್ಡಿ ೧ನೇ ಕಲ್ಲಾಸರೆ

೫೪. ಉಡ, ಗಡ್ಡಿ ೩ನೇ ಕಲ್ಲಾಸರೆ

೫೫. ಪ್ರಾಣಿಗಳು, ಆಗೋಲಿ ೨ನೇ ಕಲ್ಲಾಸರೆ

೫೬. ಪ್ರಾಣಿ, ಮನುಷ್ಯ, ಎಮ್ಮಿಗುಡ್ಡ ೨ನೇ ಕಲ್ಲಾಸರೆ

೫೭. ಮನುಷ್ಯ ಚಿತ್ರಗಳು(ಬಿಳಿ), ಎಮ್ಮಿಗುಡ್ಡ ೪ನೇ ಕಲ್ಲಾಸರೆ

೫೮. ಪಶುಪಾಲನೆ ದೃಶ್ಯ, ತೆಂಬಾ ೭ನೇ ಕಲ್ಲಾಸರೆ

೫೯. ಕಡವೆ, ಕಮಲಾಪುರ ೧ನೇ ಕಲ್ಲಾಸರೆ

೬೦. ಮನುಷ್ಯ, ಹಂಪಿ, ೭ನೇ ಕಲ್ಲಾಸರೆ

೬೧. ಎತ್ತು, ಜಿಂಕೆಗಳು, ನಾಗೇನಹಳ್ಳಿ ೧ನೇ ಕಲ್ಲಾಸರೆ

**ಬಯಲು ಬಂಡೆ ಕೊರೆದ ಕುಟ್ಟಿದ ಚಿತ್ರಗಳು**

೬೨. ಎತ್ತು, ವೃತ್ತ, ಮಲ್ಲಾಪುರ ೧ನೇ ನೆಲೆ

೬೩. ಎತ್ತು, ವೃತ್ತ, ಮಲ್ಲಾಪುರ ೨ನೇ ನೆಲೆ

೬೪. ಎತ್ತು(ಕೊರೆದ) ಮನುಷ್ಯ(ಕುಟ್ಟಿದ), ಮಲ್ಲಾಪುರ ೨ನೇ ನೆಲೆ

೬೫. ಎತ್ತುಗಳು, ಬಸಾಪಟ್ಟಣ ೧ನೇ ನೆಲೆ

೬೬. ಎತ್ತು, ಸವಾರ, ಬಸಾಪಟ್ಟಣ ೧ನೇ ನೆಲೆ

೬೭. ಕುಳಿಚಿತ್ರ, ಮಂಡಲ, ಸಿದ್ಧಕೇರಿ ೧ನೇ ನೆಲೆ

೬೮. ತಿರುಗುಳಿಗಳು, ಸಿದ್ಧಿಕೇರಿ ೧ನೇ ನೆಲೆ

೬೯. ಪಾದಗಳು, ಹಿರೇಬೆಣಕಲ್ ೧೩ನೇ ವರ್ಣಚಿತ್ರ ನೆಲೆ

೭೦. ಕುಳಿ, ಮಂಡಲ, ಆಗೋಲಿ, ೫ನೇ ವರ್ಣಚಿತ್ರ ನೆಲೆ

೭೧. ಎತ್ತುಗಳು, ಕಮಲಾಪುರ ೨ನೇ ನೆಲೆ

೭೨. ಬಣ್ಣ ಸುರಿವಿಕೊಂಡ ಗುರುತು, ಹಿರೇಬೆಣಕಲ್ ೧ನೇ ಕಲ್ಲಾಸರೆ

ಚಿತ್ರ ೨೮



ಚಿತ್ರ ೨೯



ಚಿತ್ರ ೩೦





ಚಿತ್ರ ೨೮



ಚಿತ್ರ ೨೧



ಚಿತ್ರ ೨೨

ಚಿತ್ರ ೩೪



ಚಿತ್ರ ೩೫



ಚಿತ್ರ ೩೬



ಚಿತ್ರ ೪೨



ಚಿತ್ರ ೪೩



ಚಿತ್ರ ೪೪





ಚಿತ್ರ ೪೫



ಚಿತ್ರ ೪೬



ಚಿತ್ರ ೪೭

ಚಿತ್ರ ೫೬



ಚಿತ್ರ ೫೭



ಚಿತ್ರ ೫೮



